ನೆಮ್ಮದಿಯ ನಾಳೆ ನಮ್ಮದು

# ಹೊಸತು




ಜೂನ್ ೨೦೦೮

ಬೆಲೆ : ರೂ. ೧೨

ದುಡಿಮೆಯಲ್ಲಿ ಮಾತ್ರ ಸಮಪಾಲು ?



ಅಕ್ರಿಲಿಕ್ ಮಾಧ್ಯಮದ ಅಮೂರ್ತ ಶೈಲಿ



ಕಲಾವಿದ ಎನ್. ಆರ್. ನಾಯ್ಕರ್

# ಬಣ್ಣಗಳಲ್ಲಿ ಬಚ್ಚಿಟ್ಟ ನಾದ ತರಂಗ

ಧಾರವಾಡದ ಭಾರತೀಯ ಕಲಾ ಕೇಂದ್ರದಲ್ಲಿ ಚಿತ್ರಕಲಾ ಉಪನ್ಯಾಸಕರಾಗಿರುವ ಎನ್. ಆರ್. ನಾಯ್ಕರ್ ಒಬ್ಬ ಯುವ ಚಿತ್ರ ಕಲಾವಿದ. ತೈಲವರ್ಣ, ಅಕ್ರಿಲಿಕ್, ಮಿಶ್ರ ಮಾಧ್ಯಮ ಹಾಗೂ ಜಲವರ್ಣಗಳಲ್ಲಿ ನಾಯ್ಕರ್ ರಚಿಸಿದ ಚಿತ್ರಗಳು ಕಲಾ ವಿಮರ್ಶಕರ ಮೆಚ್ಚುಗೆಯನ್ನು ಗಳಿಸಿವೆ. ಅವರು ೨೦೦೬ರಲ್ಲಿ ರಚಿಸಿದ ಗಣೇಶನ ೪೦ ಕಲಾಕೃತಿಗಳು ಹಲವಾರು ಕಡೆ ಸರಣಿ ಪ್ರದರ್ಶನ ಕಂಡಿವೆ.

ಚಿತ್ರ-ಲೇಖನ : ಜಿ. ಎಂ. ಬೊಮ್ನಳ್ಳಿ
ಬೊಮ್ನಳ್ಳಿ, ಶಿರಸಿ ತಾಲ್ಲೂಕು, ಉತ್ತರ ಕನ್ನಡ ಜಿಲ್ಲೆ - ೫೮೧ ೪೦೨



ಗಣೇಶನ ವಿರಾಟ ಸ್ವರೂಪದ ೪೦ ಸರಣಿ ಚಿತ್ರಗಳಲ್ಲಿ ಈ ಜಲವರ್ಣದ ಗಣೇಶನ ಚಿತ್ರವೂ ಒಂದು



ಅಮೂರ್ತ ಶೈಲಿಯ ತೈಲವರ್ಣ ಕಲಾಕೃತಿ



ಅಕ್ರಿಲಿಕ್ ಮಾಧ್ಯಮದ ಅಮೂರ್ತ ಕಲಾಕೃತಿ



ಅಕ್ರಿಲಿಕ್ ಮಾಧ್ಯಮದ ಅಮೂರ್ತ ಕಲಾಕೃತಿ

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...


ಉಡುಪಿ ಜಿಲ್ಲೆಯ ಕೆಲವು ಅಲಕ್ಷಿತ ಐತಿಹಾಸಿಕ ವಿಚಾರಗಳು
ಕೆ. ಶ್ರೀಧರ್ ಭಟ್ ... ೪೯

ಶಾಂತರಸರೊಡನೆ ನಿರಂತರ ೬೫ ವರ್ಷಗಳ ಒಡನಾಟ
ಚೆನ್ನಬಸವಪ್ಪ ಬೆಟ್ಟದೂರು ... ೧೧

ಪಡ್ಡೂರಿನ ಪಾಠಗಳು — ಎಸ್. ಆರ್. ವಿಜಯಶಂಕರ ... ೨೯

ಮುನ್ನೂರು ರಾಮಾಯಣಗಳು !? — ಎ. ಕೆ. ರಾಮಾನುಜನ್ ... ೧೩

ಕೈಮಗ್ಗದ ನೇಯ್ಗೆ ವಿಭಾಗದಲ್ಲಿ ಅಸಂಘಟಿತ ದುಡಿಮೆಗಾರರು
ಅರ್ಜುನ್ ಸೇನ್‌ಗುಪ್ತ ವರದಿ ... ೨೫

ವಂಶದ ಕುಡಿ — ಜೋಸೆಫ್ ಮ್ಯಾಕವನ್ ... ೧೯
ವಾಸ್ತವ — ಟಿ. ಎಸ್. ಗೊರವರ ... ೨೪
ದೇವರು ಚಿಕ್ಕಪ್ಪ — ಜೀಯೆ, ಹಾರ್ಯಾಡಿ ... ೩೯
ಧರ್ಮಸೂಕ್ಷ್ಮ — ಮ. ಶ್ರೀ. ಮುರಳಿಕೃಷ್ಣ ... ೧೬
ಮಾತುಗಾರಿಕೆಯ ಗತ್ತು-ಗೈರತ್ತು — ವೈ. ಎನ್. ಗುಂಡೂರಾವ್ ... ೨೨
ಕಾವ್ಯಧಾರೆ — ೨೭, ೩೬, ೪೦, ೫೮

ಖಾದಿ ಯಾರಿಗೆ ಬೇಕು ? — ಸಂಕುಲಜೀವ ... ೫೩
ಚರಿತ್ರೆ ವರ್ತಮಾನದ ಕಥನ — ಡಾ|| ಕೆ. ಮೋಹನ್‌ಕೃಷ್ಣ ರೈ ... ೫೯
ಹೀಗೊಂದು ಮಾನವ ನೆಲೆಯ ಅನುಭೂತಿ — ವಿಶ್ವನಾಥ ಅಡಿಗ ... ೩೩

ಗುಣಮಟ್ಟದ ಶಿಕ್ಷಣ ಸದ್ಯದ ತೀವ್ರತೆ — ಟಿ. ವಿ. ಮಾಗಳದ ... ೪೩
ಹೆಚ್ಚುತ್ತಿರುವ ನಗರೀಕರಣ ಪ್ರಜ್ಞೆಯ ಅಪಾಯಗಳು — ಗುಂಡೀಗೆರೆ ವಿಶ್ವನಾಥ ... ೪೭
ಬದಲಾವಣೆಯ ಹಾದಿಯಲ್ಲಿ ನೇಪಾಳ — ಸೀಯಾರ್ಕೆ ... ೨೮

ನೀರಮಾನ್ವಿ ಕಥೆಗಳು : ವ್ಯಕ್ತಿ; ತನ್ನತನದ ಹುಡುಕಾಟ
ಅಮರೇಶ ನುಗಡೋಣಿ ... ೩೫

ಅಮೃತಾ ಪ್ರೀತಂ ಅವರ 'ಪಿಂಜರ್' — ಡಾ|| ಶೈಲಾ ಯು. ... ೪೫

ಆಹಾರ ಧಾನ್ಯ ಬಿಕ್ಕಟ್ಟು ನಿರ್ವಹಣೆ ಕೆಲವು ಸೂತ್ರಗಳು — ಶಂಕರನಾರಾಯಣ ... ೫೨

ಸಂಬಂಧ ಸೂಚಿ ಹೆಸರುಗಳು — ಡಾ|| ಅನಿಲ ಕಮತಿ ... ೫೭

ಬುಧ-ಶುಕ್ರಗಳ ಕಣ್ಣು ಮುಚ್ಚಾಲೆ — ಡಾ|| ಬಿ.ಎಸ್.ಶೈಲಜಾ ... ೩೮

ಹೊಸ ಓದು — ಸುಜಾತ ಲಕ್ಷ್ಮೀಪುರ ... ೪೨
ವೈರುಧ್ಯಗಳು — ಎಸ್. ಎಸ್. ಹಿರೇಮಠ ... ೬೨



ಚಿತ್ರಗಳು : ಆಚಾರ್ಯ, ಶ್ರೀಹರಿ, ಜಿ. ಎಂ. ಬೊಮ್ನಳ್ಳಿ, ಬಿ. ವಿಲ್ಸನ್
ರಾಂಚಂದ್ರ ಕೊಪ್ಪಲು
ಮುಖಪುಟ : ದುಡಿಮೆಯಲ್ಲಿ ಮಾತ್ರ ಸಮಪಾಲು ?
ವರ್ಣಚಿತ್ರ : ಮುತ್ತು ಹಾಳಕೇರಿ. ವಿನ್ಯಾಸ : ನವಕರ್ನಾಟಕ ವಿನ್ಯಾಸ
ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

ನಮ್ಮ-ನಿಮ್ಮ ಈ ಪತ್ರಿಕೆಯು ಪ್ರತಿ ತಿಂಗಳ ೨೫ರಂದು ಅಚ್ಚಿಗೆ ಹೋಗುತ್ತದೆ ಮತ್ತು ೨೮ರಂದು ಮಾರುಕಟ್ಟೆಗೆ ಬರುತ್ತದೆ. ಆದ್ದರಿಂದ ರಾಜ್ಯದ ಚುನಾವಣಾ ಫಲಿತಾಂಶವನ್ನು ಕುರಿತು ಏನನ್ನೂ ನಿಖರವಾಗಿ ಹೇಳಬರುವುದಿಲ್ಲ. ಮೂರು ಪಕ್ಷಗಳು ತಮ್ಮ ಸ್ವಂತ ವರ್ಚಸ್ಸಿನಿಂದ ಯಾವ ಹೊಂದಾಣಿಕೆಯೂ ಇಲ್ಲದೆ ಅಧಿಕಾರಕ್ಕೆ ಬರುವುದಾಗಿ ಹೇಳಿಕೊಂಡಿವೆ. ಮೂರೂ ಪಕ್ಷಗಳು ಅಧಿಕಾರಕ್ಕೆ ಬರುವುದಿಲ್ಲ ವೆಂಬುದಷ್ಟೇ ಸಮಾಧಾನ. ಯಾರು ಬಂದರೂ ಅಭಿವೃದ್ಧಿಯ ಹೆಸರಿನಲ್ಲಿ ರಾಜ್ಯವನ್ನು ಪ್ರಪಾತಕ್ಕೆ ತಳ್ಳುತ್ತಾರೆ, ರೈತರ ಜಮೀನನ್ನು ಕಿತ್ತುಕೊಳ್ಳುತ್ತಾರೆ, ಗಣಿಗಳನ್ನು ಲೂಟಿ ಮಾಡಿ ಕಳ್ಳ ಜೇಬು ತುಂಬಿಕೊಳ್ಳುತ್ತಾರೆ. ಇನ್ನೊಂದು ಚುನಾವಣೆಯವರೆಗೆ ಜನರನ್ನು ಮರೆಯುತ್ತಾರೆ, ತಮ್ಮ ತಮ್ಮ ಚುನಾವಣಾ ಪ್ರಣಾಳಿಕೆಗಳಿಗೆ ಬೆಂಕಿಯಿಟ್ಟು ಬೂದಿಯನ್ನು ಕಾವೇರಿಯಲ್ಲಿ ಕದರಿಬಿಡುತ್ತಾರೆಂಬ ಆತಂಕ ಮತದಾರರದ್ದು. ಖೇಣಿಯಂಥವರಿಗೆ ಯೋಚನೆಯಿಲ್ಲ. ಅವರಿಗೆ ಮೂರೂ ಪಕ್ಷಗಳಲ್ಲಿ ಸಮರ್ಥಕರಿದ್ದಾರೆ! ಈ ಸಲದ ವಿಶೇಷವನ್ನು ಮತದಾರರು ಗಮನಿಸಿದ್ದಾರೆ : ಮೂರೂ ಪಕ್ಷಗಳು ಕೋಟ್ಯಧಿಪತಿಗಳನ್ನು ಕಣಕ್ಕಿಳಿಸಿವೆ. ಐದು ವರ್ಷಗಳ ಹಿಂದೆ ಅವರ ಆಸ್ತಿ ಎಷ್ಟಿತ್ತು ಮತ್ತು ಹೇಗೆ ಅದು ಇಂದಿನ ಮಟ್ಟಕ್ಕೆ ಬಂದಿತು ಎಂಬುವನ್ನು ಆದಾಯ ತೆರಿಗೆ ಇಲಾಖೆಯವರು ತನಿಖೆ ಮಾಡಿ ತಿಳಿಸಬೇಕು ಮತ್ತು ಅಕ್ರಮ ಗಳಿಕೆಗೆ ಮುಟ್ಟುಗೋಲು ಹಾಕಿಕೊಳ್ಳಬೇಕು. ಹಿಂದೆಲ್ಲಾ ಆಳುವ ವರ್ಗವು ತನ್ನ ಪ್ರತಿನಿಧಿಗಳನ್ನು ರಾಜಕೀಯ ಪಕ್ಷಗಳಲ್ಲಿ ಕಂಡುಕೊಳ್ಳುತ್ತಿತ್ತು. ಬಿರ್ಲಾ-ಬಜಾಜ್-ಟಾಟಾ ಮುಂತಾದವರು ಆ ರೀತಿಯಲ್ಲಿ ಸರ್ಕಾರವನ್ನು ತಮ್ಮ ಅಧೀನದಲ್ಲಿ ಇಟ್ಟುಕೊಳ್ಳುತ್ತಿದ್ದರು. ಈಗ ಅದೆಲ್ಲಾ ಬದಲಾಗಿದೆ. ಅಂಬಾನಿ-ನಾರಾಯಣ ಮೂರ್ತಿ-ಮಿತ್ತಲ್ ಮುಂತಾದವರು ನೇರವಾಗಿ ಆಡಳಿತದಲ್ಲಿ ಮಧ್ಯಪ್ರವೇಶ ಮಾಡಿ ಆಳುವ ವರ್ಗವನ್ನು ಸುಸ್ಥಿತಿಯಲ್ಲಿಟ್ಟುಕೊಳ್ಳುತ್ತಾರೆ. ಚಿದಂಬರಂ ಅಂಥವರು ಇವರನ್ನು, ವಿದೇಶಿ ಬಂಡವಾಳವನ್ನು ಮತ್ತು ಬಹುರಾಷ್ಟ್ರೀಯ ಕಂಪನಿಗಳನ್ನು ಓಲೈಸುತ್ತಾರೆ, ಕೊಬ್ಬಿಸುತ್ತಾರೆ, ಪೋಷಿಸುತ್ತಾರೆ. ಚುನಾವಣಾ ಆಯೋಗವು ಸಹ ಜನ ಸಾಮಾನ್ಯರನ್ನು ನೆಪಮಾತ್ರಕ್ಕೆ ಪ್ರಜಾಪ್ರಭುತ್ವದಲ್ಲಿ ಪಾಲ್ಗೊಳ್ಳುವಂತೆ ಮಾಡಿ, ಚುನಾವಣೆಯ ಬಯಲು ನಾಟಕವನ್ನು ಕೋಟ್ಯಾಧೀಶರಿಗೆ ವಹಿಸಿಕೊಟ್ಟಿದೆ. ಇಂಥವರಿಗೆ ಮತ ನೀಡಿ ಎಂದು ಹೇಳುವುದೊಂದನ್ನು ಬಿಟ್ಟು, ಚುನಾವಣಾ ಮೇಲ್ವಿಚಾರಕರು ಯಾವ ಬಿಂಕವೂ ಇಲ್ಲದೆ ಕೋಟಿ-ದೇವತೆಗಳಿಗೆ ಪುರಸ್ಕಾರ ನೀಡಿದ್ದಾರೆ. ಎಲ್ಲದರಲ್ಲೂ ಅಮೆರಿಕಾ ಮಾದರಿಯು ಅನುಕರಣೀಯವಾದ್ದರಿಂದ ಚುನಾವಣಾ ಕಣವು ಕೋಟ್ಯಾಧೀಶರ ಏಕಸ್ವಾಮ್ಯಕ್ಕೆ ಸೇರುವುದು ಸಹಜವಾಗಿದೆ. ಕ್ಲಿಂಟನ್ ರಾಣಿಯು ಒಬಾಮಾನಷ್ಟು ಹಣ ಖರ್ಚು ಮಾಡಬಲ್ಲಳೇ ಎಂಬುದನ್ನು ನಮ್ಮ ದೇಶದ ಮಾಧ್ಯಮಗಳು ಚರ್ಚಿಸುತ್ತವೆ; ಹಾಗೆಯೇ, ನಮ್ಮಲ್ಲಿ ಅತಿ ಹೆಚ್ಚು ಹಣ ಯಾರು ಚೆಲ್ಲುತ್ತಾರೆಂಬುದನ್ನೂ ಅವು ತಿಳಿಸಿಕೊಡುತ್ತವೆ. ಒಟ್ಟಿನಲ್ಲಿ ಮತದಾರರು ಕ್ರಮೇಣ ಚುನಾವಣಾ ಪ್ರಕ್ರಿಯೆಯಲ್ಲಿ ಅಪ್ರಸ್ತುತರಾಗುತ್ತಾರೆ, ಸೋಗಿನ ಪ್ರಜಾಪ್ರಭುತ್ವವು ಬೇರು ಬಿಡುತ್ತದೆ. ಈ ತಿಂಗಳ ಚುನಾವಣೆಯು ನಮ್ಮ ಕಣ್ಣು ತೆರೆಸದಿದ್ದರೆ ಮುಂದೆ ಚುನಾವಣೆಗಳು ಅನಗತ್ಯವಾಗಬಹುದು.

ಒಂದು ಚೀಟಿ ಹಂಚಲು, ಹದಿನೈದು ಜನರನ್ನುದ್ದೇಶಿಸಿ ಮಾತನಾಡಲು, ಒಂದು ಬ್ಯಾನರ್ ಕಟ್ಟಲು, ಕಡೆಗೆ ಸೀನಲು, ಕೆಮ್ಮಲು ಚುನಾವಣಾ ಆಯೋಗದ ಪರವಾನಗಿ ಬೇಕು. ಅದನ್ನು ಪಡೆಯಲು ಹೋದಾಗ ಅಧಿಕಾರಿಯು ತಿಂಡಿ ಮೆಲ್ಲಲು ಹೋಗಿರುತ್ತಾನೆ! ರವಿಶಂಕರ ಗುರೂಜಿ ಪೋಸ್ಟರ್ ಹಚ್ಚಬಹುದು, ಬ್ಯಾನರ್ ಕಟ್ಟಬಹುದು, ಸಭೆ ನಡೆಸಬಹುದು; ಆದರೆ ಚುನಾವಣಾ ಅಭ್ಯರ್ಥಿ ಹಾಗೆ ಮಾಡುವಂತಿಲ್ಲ - ಅವನು ಖರ್ಚು ಮಾಡುವ ಹಣದ ಲೆಕ್ಕ ಇಡಲು ಈ ಕ್ರಮ. ಆದರೆ ಕೋಟ್ಯಾಧೀಶನು ಅನೌಪಚಾರಿಕವಾಗಿ ಎಲೆ-ಅಡಿಕೆ-ದಕ್ಷಿಣೆ-ಉಡುಗೊರೆ ನೀಡಲು ಅವನ ಮೊಮ್ಮಗನ ಹುಟ್ಟಿದ ಹಬ್ಬವನ್ನು ಅದ್ದೂರಿಯಾಗಿ ಆಚರಿಸುತ್ತಾನೆ. ಅದಕ್ಕೆ ಚುನಾವಣೆಯ ಅಧಿಕಾರಿಗೂ ಆಹ್ವಾನವುಂಟು. ಆದರೆ ಅದು ಚುನಾವಣಾ ನೀತಿ ಸಂಹಿತೆಗೆ ವಿರುದ್ಧವಾದುದಲ್ಲ. ಐನೂರು ಕರಪತ್ರಗಳನ್ನು ಮಲ್ಲೇಶ್ವರದಿಂದ ಯಶವಂತಪುರಕ್ಕೆ ಬೈಸಿಕಲ್ಲಿನಲ್ಲಿ ಕೊಂಡೊಯ್ಯುತ್ತಿದ್ದರೆ ಚುನಾವಣಾ ಅಧಿಕಾರಿಯು ಅದನ್ನು ತಡೆಯಬಹುದೆಂಬಷ್ಟು ಕಠಿಣ ಕರಾರು ಜಾರಿಗೆ ಬಂದಿದೆ. ಅನಕ್ಷರಸ್ಥರಿಗೆ ಉಮೇದುವಾರರ ಸಂಕೇತ ತಿಳಿಸಲು ಸಹ ಮುಗ್ಗಟ್ಟಿನ ಸನ್ನಿವೇಶ ಉಂಟಾಗಿದೆ. ನಾಯಕಿ ಸುಷ್ಮಾ ಸ್ವರಾಜ್ ಹೇಳಿದಂತೆ ಚುನಾವಣೆಯು ಸಂಭ್ರಮದ ವಾತಾವರಣವನ್ನು ನಿರ್ಮಿಸಬೇಕೋ ಬೇಡವೋ ಎಂಬುದನ್ನು ಪರಿಶೀಲಿಸಬಹುದು, ಆದರೆ ಸಾಮಾನ್ಯವಾಗಿ ಮತದಾರರನ್ನು ಅಪ್ರಸ್ತುತಗೊಳಿಸುವುದು ಪಾಕಿಸ್ತಾನದ ಅಯೂಬ್ ಖಾನ್ ಜಾರಿಗೊಳಿಸಿದ ''ನಿರ್ದೇಶಿತ ಪ್ರಜಾಪ್ರಭುತ್ವ''ಕ್ಕೆ ಸಮಾನವಾಗುತ್ತದೆ. ಚುನಾವಣಾ ಆಯೋಗವು ಸಂವಿಧಾನಬದ್ಧವಾದ ಒಂದು ಆಡಳಿತ ಕೇಂದ್ರವಾಗಿ ಉಳಿಯಬೇಕೇ ವಿನಾ ಮಿಲಿಟರಿ ಸರ್ವಾಧಿಕಾರಿಯಾಗಬಾರದು.

ಚುನಾವಣೆಗೆ ಒಂದು ವಾರ ಮುಂಚೆ ಬೆಂಗಳೂರಿನಲ್ಲಿ ''ರಾಷ್ಟ್ರಜಾಗೃತಿ'' ಎಂಬ ೧೦೭ ಪುಟಗಳ ಕಿರುಹೊತ್ತಿಗೆಯ ಸಾವಿರಾರು ಪ್ರತಿಗಳನ್ನು ಪುಕ್ಕಟೆಯಾಗಿ ಮನೆ ಮನೆಗೂ ತಲುಪಿಸಲಾಯಿತು. ಅದರ ಬೆಂಬಲಿತ ಬೆಲೆ ಎರಡು ರೂಪಾಯಿ; ಮೈಸೂರು ರಾಮಕೃಷ್ಣಾಶ್ರಮದ ಪ್ರಕಟಣೆ. ಒಂದು ರಾಜಕೀಯ ಪಕ್ಷವು ತಾನು ಸ್ವಾಮಿ ವಿವೇಕಾನಂದರ ಉತ್ತರಾಧಿಕಾರಿಯೆಂದು

೯ನೇ ಪುಟಕ್ಕೆ



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೯ ಸಂಚಿಕೆ-೧೧ ಜೂನ್ ೨೦೦೮

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@vsnl.com**
**website : www.navakarnatakabooks.com**




# ವಿನಾಯಕ್ ಸೇನ್

**ವೆ**ಲ್ಲೂರಿನ ಕ್ರಿಶ್ಚಿಯನ್ ಮೆಡಿಕಲ್ ಕಾಲೇಜಿನ ಹಿರಿಯ ವಿದ್ಯಾರ್ಥಿ ವಿನಾಯಕ್ ಸೇನ್. ಹೆಸರು ಸೂಚಿಸುವಂತೆ ಆತ ಬಂಗಾಳದ ಮೂಲದವನಿರಬೇಕು. ಆತನು ವಿದ್ಯಾರ್ಥಿಯಾಗಿದ್ದಾಗ ಆತನ ಸಾಮಾಜಿಕ ಸೇವೆಯ ಮನೋಭಾವವನ್ನು ಗುರುತಿಸಿ ಕಾಲೇಜು ಅವನಿಗೆ ಗೌರವ ಸೂಚಿಸಿತ್ತು, ಪುರಸ್ಕಾರ ನೀಡಿತ್ತು. ನಾಲ್ಕೈದು ಮಂದಿ ಸಹಪಾಠಿಗಳೊಂದಿಗೆ ಈ ವೈದ್ಯಕೀಯ ವಿದ್ಯಾರ್ಥಿಯು ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿ ವೈದ್ಯಕೀಯ ತಪಾಸಣಾ ಶಿಬಿರಗಳನ್ನು ಏರ್ಪಡಿಸುತ್ತಿದ್ದುದು ಕಾಲೇಜಿನವರಿಗೆ ಬಹಳ ಸಂತೋಷ ತಂದಿತ್ತು. ಕಾಲೇಜಿನಲ್ಲಿ ವ್ಯಾಸಂಗ ಮುಗಿಸಿದ ವಿನಾಯಕ್ ನೇರವಾಗಿ ಇಂದಿನ ಛತ್ತೀಸಘಡಕ್ಕೆ ತೆರಳಿ ಅಲ್ಲಿಯ ಹಳ್ಳಿಗಳಲ್ಲಿ ಕೆಲಸ ಆರಂಭಿಸಿದ. ಬುಡಕಟ್ಟು ಜನರ ಪ್ರೀತಿ-ವಿಶ್ವಾಸ ಗಳಿಸಿ ಅವರಿಗಾಗಿ ಜೀವನವನ್ನು ಮುಡಿಪಿಟ್ಟ. ಅವರ ಹಕ್ಕುಗಳಿಗಾಗಿ ಸಾರ್ವಜನಿಕ ಅಭಿಪ್ರಾಯ ರೂಪಿಸುತ್ತಾ ನಾಗರಿಕ ಹಕ್ಕುಗಳ ವೇದಿಕೆಯಲ್ಲಿ ತನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಂಡ. ಅವನ ಉದಾತ್ತ ಸೇವೆಯನ್ನು ಮೆಚ್ಚಿ ವೆಲ್ಲೂರು ಮೆಡಿಕಲ್ ಕಾಲೇಜಿನವರು ಮತ್ತೆ ಬರಮಾಡಿಕೊಂಡರು ಮತ್ತು ಗೌರವಿಸಿದರು. ಈಚೆಗೆ ಸೇನ್‌ಗೆ ಒಂದು ವಿದೇಶಿ ಸಂಸ್ಥೆಯು ಪ್ರಶಸ್ತಿಯೊಂದನ್ನು ನೀಡಿದೆ. ಅದನ್ನು ಸ್ವೀಕರಿಸಲು ವಿದೇಶಕ್ಕೆ ತೆರಳಬೇಕಾದ ಈ ಜನವೈದ್ಯ ಒಂದು ವರ್ಷದಿಂದ ಛತ್ತೀಸ್‌ಘಡದ ಜೈಲಿನಲ್ಲಿದ್ದಾನೆ. ನಕ್ಸಲೀಯರ ಬಂಧು ಎಂಬ ಆಪಾದನೆ ಹೊರಿಸಿ ಆತನನ್ನು ಕಾರಾಗೃಹದಲ್ಲಿಟ್ಟಿದ್ದಾರೆ. ವೆಲ್ಲೂರು ಮೆಡಿಕಲ್ ಕಾಲೇಜು ಒಬ್ಬ ನಕ್ಸಲೀಯನನ್ನು ಪೋಷಿಸಿತು ಮತ್ತು ಒಂದು ವಿದೇಶಿ ಸಂಸ್ಥೆ ಅವನಿಗೆ ಪ್ರಶಸ್ತಿ ನೀಡಿತು ಎಂದರೆ ವಿನಾಯಕ್ ಒಬ್ಬ ಅಸಾಧಾರಣ ನಕ್ಸಲೀಯನೇ ಇರಬೇಕು ! ಛತ್ತೀಸ್‌ಘಡದ ಭಾರತೀಯ ಜನತಾ ಪಕ್ಷದ ಸರ್ಕಾರವು ಅತಿಸಾಮಾನ್ಯ ತಿಳಿವಳಿಕೆಯನ್ನೂ ಹೊಂದಿಲ್ಲವೆಂದು ನಂಬುವುದು ಕಷ್ಟ. ನಾಗರಿಕ ಹಕ್ಕುಗಳನ್ನು ಬೆಂಬಲಿಸಿದರೆ ಜೈಲಿಗೆ ಹೋಗಬೇಕಾಗುತ್ತದೆಂಬುದು ಭಾಜಪ ಅಧಿಕಾರದಲ್ಲಿದ್ದಾಗ ಸಾಧ್ಯವೆಂದಾಯಿತು.

ಛತ್ತೀಸಘಡದಲ್ಲಿ ನಕ್ಸಲೀಯರಿದ್ದಾರೆಂಬುದು ಜಗತ್ತಿಗೆ ತಿಳಿದಿದೆ. ನಕ್ಸಲೀಯರೂ ವೈದ್ಯರ ಬಳಿಗೆ ಹೋಗಬೇಕಾಗುತ್ತದೆ. ಹಾಗೆ ಹೋದಾಗ ಅವರು ಹಣೆಯ ಮೇಲೆ ತಾವು ನಕ್ಸಲೀಯರೆಂಬ ಚಿಹ್ನೆ ಹಾಕಿಕೊಂಡಿರುವುದಿಲ್ಲವಾದ್ದರಿಂದ ವೈದ್ಯರಿಗೆ ಅವರು ರೋಗಿಯೆಂದು ಕಾಣುತ್ತಾರೆಯೇ ವಿನಾ ನಕ್ಸಲೀಯರೆಂದಲ್ಲ. ಚರಕ ಸಂಹಿತೆ ಹೇಳುವಂತೆ ವೈದ್ಯನಿಗೆ ರೋಗಿಯು ರೋಗಿ, ಅಷ್ಟೆ; ಮತ್ತೇನೂ ಅಲ್ಲ. ನಾಗರಿಕ ಹಕ್ಕುಗಳ ವೇದಿಕೆಯ ಕಾರ್ಯಕರ್ತರಾಗಿ ವಿನಾಯಕ್ ಹಲವು ಬಾರಿ ಜೈಲುಗಳಿಗೆ ಹೋಗಿ ಖೈದಿಗಳನ್ನು ಸಂಧಿಸಿದ್ದಾರೆ, ಶುಶ್ರೂಷೆ ನೀಡಿದ್ದಾರೆ, ಕಾನೂನು ಕ್ರಮಗಳ ಬಗ್ಗೆ ಸಲಹೆ ನೀಡಿದ್ದಾರೆ. ಅವರಲ್ಲಿ ಒಬ್ಬ ಎಪ್ಪತ್ತು ವರ್ಷ ವಯಸ್ಸಿನ ನಕ್ಸಲೀಯನಂತೆ. ಅವನಿಗೆ ವಿನಾಯಕ್ ಸೇನ್ ಸಹಾಯ ಮಾಡಿದ್ದರೆಂದು ಮೂರನೆಯ ಒಬ್ಬ ವ್ಯಕ್ತಿ ಹೇಳಿಕೆ ನೀಡಿದ್ದಾನೆ. ಆಮೇಲೆ ಅದನ್ನು ಅಲ್ಲಗಳೆದಿದ್ದಾನೆ. ಪೊಲೀಸರು ಬಲವಂತವಾಗಿ ಅಂತಹ ಹೇಳಿಕೆ ಪಡೆದರೆಂದು ಹೇಳಿದ್ದಾನೆ. ಆತನ ಹೇಳಿಕೆಯ ಆಧಾರದ ಮೇಲೆ ವಿನಾಯಕ್ ಸೇನರನ್ನು ಬಂಧನದಲ್ಲಿಡಲಾಗಿದೆ. ವಿನಾಯಕ್ ಸೇನ್ ಜೈಲಿನಲ್ಲಿ ನಕ್ಸಲೀಯರನ್ನು ಭೇಟಿಮಾಡಿ ನಂತರ ಹೊರಗಿನ ನಕ್ಸಲೀಯರಿಗೆ ಸಂದೇಶಗಳನ್ನು ಮುಟ್ಟಿಸುತ್ತಿದ್ದರೆಂಬ ಆಪಾದನೆಯನ್ನೂ ಹೊರಿಸಲಾಗಿದೆ. ಯಾವ ನ್ಯಾಯಾಲಯಕ್ಕೆ ಹೋದರೂ ಅವರ ಜಾಮೀನು ಅರ್ಜಿಯನ್ನು ಪುರಸ್ಕರಿಸುವುದಿಲ್ಲ; ಏಕೆಂದರೆ ಭಾಜಪ ಸರ್ಕಾರವು ಅವರನ್ನು ಅಪಾಯಕಾರಿ ವ್ಯಕ್ತಿ, ನಕ್ಸಲೀಯರ ಬೆಂಬಲಿಗ, ಭಯೋತ್ಪಾದಕ ಎಂದೆಲ್ಲಾ ವಾದ ಹೂಡುತ್ತದೆ. ಇದೊಂದು ಭಾಜಪ ಬತ್ತಳಿಕೆಯಲ್ಲಿರುವ ಹೊಸ ಸಂಸ್ಕೃತಿ.

ಹಾಗಿದ್ದರೆ ವಿನಾಯಕ್ ಎಸಗಿರುವ ಅಪರಾಧವೇನು ? ಒಂದು, ಆತ ನರೇಂದ್ರ ಮೋದಿಯವರ ಕುಕೃತ್ಯಗಳನ್ನು ಬಹಿರಂಗವಾಗಿ ಖಂಡಿಸಿದ್ದಾರೆ, ಖಂಡಿಸುತ್ತಾರೆ. ಎರಡು, ''ಸಾಲ್ವಾ ಜುಡುಂ'' ಎಂಬ ಸರ್ಕಾರಿ ಭಯೋತ್ಪಾದಕತೆಯ ತಂತ್ರವನ್ನು ವಿನಾಯಕ್ ಸೇನ್ ವಿರೋಧಿಸುತ್ತಾರೆ. ಅದಕ್ಕೆ ಬಲಿಯಾದವರಿಗೆ ನೆರವು ನೀಡಲು ಮುಂದಾಗುತ್ತಾರೆ. ನಕ್ಸಲೀಯರನ್ನು ಸೋಲಿಸಲು, ಅವರಿಗೆ ಪ್ರತಿರೋಧ ಒಡ್ಡಲು, ಭಾಜಪ ಸರ್ಕಾರವು ಒಂದು ವ್ಯಾಪಕ ದಳವನ್ನು ರಚಿಸಿದೆ. ಅದಕ್ಕೆ ಸಾಲ್ವಾ ಜುಡುಂ ಎಂದು ಹೆಸರು. ಅವರಿಗೆ ಸರ್ಕಾರವು ಶಸ್ತ್ರಾಸ್ತ್ರಗಳನ್ನು ಒದಗಿಸಿದೆ ಮತ್ತು ಮನಬಂದಂತೆ ವರ್ತಿಸಲು ಪರವಾನಗಿ ನೀಡಿದೆ. ಆ ದಳದ ಯಾವುದೇ ವ್ಯಕ್ತಿಯು ಯಾರನ್ನು ಬೇಕಾದರೂ ನಕ್ಸಲೀಯನೆಂದು ಹೆಸರಿಸಿ ಜೈಲಿಗೆ ತಳ್ಳಬಹುದು. ''ಪೋಟಾ'' ಕಾಯಿದೆಯ ತಾತನಂತಿದೆ ಈ ವ್ಯವಸ್ಥೆ. ಒಂದು ಇಡೀ ಹಳ್ಳಿಯನ್ನು ''ನಕ್ಸಲೀಯರನ್ನು ಬೆಂಬಲಿಸುವ ಹಳ್ಳಿ'' ಎಂದು ಘೋಷಿಸಿ ಈ ಸಾಲ್ವಾ ಜುಡುಂನ ಕಾರ್ಯಕರ್ತರು ಹಳ್ಳಿಗೆ ಬೇಲಿ ಹಾಕಬಹುದು, ಜನರನ್ನು ಹೊರಹೋಗಲು ಬಿಡದೆ ನಿರ್ಬಂಧ ಹೇರಬಹುದು, ಅಥವಾ ಹಳ್ಳಿಯನ್ನು ಖಾಲಿ ಮಾಡಿ ಬೇರೆಡೆಗೆ ತೆರಳಬೇಕೆಂದು ಆಜ್ಞಾಪಿಸಬಹುದು. ನಮ್ಮ ದೇಶದಲ್ಲಿ ನ್ಯಾಯಾಂಗ ವ್ಯವಸ್ಥೆ ಇದೆಯೇ ಎಂಬ ಅನುಮಾನ ತರಿಸುವಂತಹ ''ಧೀರಯೋಧರ ದಳ'' ಈ ಸಾಲ್ವಾ ಜುಡುಂ. ಅದು ಎಸಗದ ಪಾತಕಗಳಿಲ್ಲ. ಮಹಿಳೆಯರಿಗಂತೂ ಅದು ಅನಾಗರಿಕ ದೈತ್ಯನಾಗಿ ಕಂಡಿದೆ; ಅವರನ್ನು ಸಾಲ್ವಾ ಜುಡುಂ ಅಷ್ಟು ಘೋರವಾಗಿ ಹಿಂಸಿಸಿದೆ. ಇದೂ ಒಂದು ಹೊಸ ಸಂಸ್ಕೃತಿಯ ಅಧ್ಯಾಯವಿರಬೇಕು. ಅದ್ವಾನಿ ಮತ್ತು ಸುಷ್ಮಾ ಸ್ವರಾಜ್‌ಗೆ ಇವೆಲ್ಲಾ ಗೊತ್ತಿಲ್ಲವೆಂದು ನಂಬಲಾಗುವುದಿಲ್ಲ. ೧೯೩೦ರ ದಶಕದಲ್ಲಿ ಹಿಟ್ಲರನ ಸಶಸ್ತ್ರ ದಳ ಏನೇನು ಕಿರುಕುಳ ನೀಡಿ ಜನರನ್ನು ಹಿಂಸಿಸುತ್ತಿದ್ದಿತೋ ಅದನ್ನೆಲ್ಲಾ ಸಾಲ್ವಾ ಜುಡುಂ ಮಾಡುತ್ತಿದೆಯೆಂಬುದನ್ನು ಅವರು ತಿಳಿಯಬೇಕು. ಹಿಟ್ಲರನ ದಳಗಳನ್ನು ''ಸ್ಟಾರ್ಮ್ ಟ್ರೂಪರ್ಸ್'' ಎಂದು ಕರೆಯಲಾಗುತ್ತಿತ್ತು.

ಸಾಲ್ವಾ ಜುಡುಂನ ಜುಲುಂಗಳಿಂದ ತಪ್ಪಿಸಿಕೊಳ್ಳಲು ಹಣ ಬೇಕು; ಛತ್ತೀಸ್‌ಘಡದ ಬುಡಕಟ್ಟು ಜನರ ದಾರಿದ್ರ್ಯ ಅದಕ್ಕೆ ಅಡ್ಡ ಬರುತ್ತದೆ. ಭಾರತೀಯ ಕಮ್ಯುನಿಸ್ಟ್ ಪಕ್ಷ ಮತ್ತು ನಾಗರಿಕ ಹಕ್ಕುಗಳ ಸಾರ್ವಜನಿಕ ವೇದಿಕೆ ಪ್ರತ್ಯೇಕವಾಗಿ ಮತ್ತು ಜಂಟಿಯಾಗಿ ಸಾಲ್ವಾ ಜುಡುಂ ಎಂಬ ಫ್ಯಾಸಿಸ್ಟ್ ತುಕಡಿಗಳನ್ನು ವಿರೋಧಿಸಿವೆ ಮತ್ತು ಹೋರಾಟಗಳನ್ನು ಸಂಘಟಿಸಿವೆ. ಆದ್ದರಿಂದ ಅವೆರಡೂ ಸಂಘಟನೆಗಳ ಕಾರ್ಯಕರ್ತರನ್ನು ಕೊಂದಿರುವುದೂ ಉಂಟು. ವಿಯೆಟ್ನಾಮನ್ನು ಅಮೆರಿಕಾ ಆಕ್ರಮಿಸಿದ್ದಾಗ ದಕ್ಷಿಣ ವಿಯೆಟ್ನಾಂನ ಅನೇಕ ಹಳ್ಳಿಗಳು ಅನುಭವಿಸಿದ ತಾಪವನ್ನು ನಮ್ಮ ಸ್ವತಂತ್ರ ಸಾರ್ವಭೌಮ ರಾಷ್ಟ್ರದಲ್ಲಿ ಛತ್ತೀಸಘಡದ ಹಳ್ಳಿಗಳು ಅನುಭವಿಸುತ್ತಿವೆ. ಇದು ಭಾರತೀಯ ಜನತಾ ಪಕ್ಷವು ಜನತೆಯ ಹಕ್ಕುಗಳಿಗೆ ನೀಡುತ್ತಿರುವ ಮರ್ಯಾದೆ ಮತ್ತು ನಕ್ಸಲೀಯರನ್ನು ಎದುರಿಸುತ್ತಿರುವ ಬಗೆ. ಸಾಲ್ವಾ ಜುಡುಂ ವಿರೋಧಿಗಳು ಸಹಜವಾಗಿಯೇ ನಕ್ಸಲೀಯರ ಬೆಂಬಲಿಗರು ಎಂಬ ಸುಳ್ಳು ಹಾಗೂ ಮೂರ್ಖತನದ ಮಾತನ್ನು ಸರ್ಕಾರ ಹೇಳುತ್ತಿದೆ. ಕೇಂದ್ರ ಸರ್ಕಾರವು ಇದೆಲ್ಲಾ ನಡೆಯುತ್ತಲೇ ಇಲ್ಲವೆಂಬಂತೆ ಕಣ್ಣುಮುಚ್ಚಿ ಕುಳಿತಿದೆ.

ವಿನಾಯಕ್ ಸೇನ್ ವೈದ್ಯನಾದ್ದು, ನಾಗರಿಕ ಹಕ್ಕುಗಳಿಗಾಗಿ ಹೋರಾಟ ನಡೆಸಿದ್ದು, ಆತನನ್ನು ''ನಕ್ಸಲೀಯ''ನನ್ನಾಗಿ

ಮಾಡಿದೆ. ಇದನ್ನು ಕಂಡು ರೋಸಿಹೋದ ಕೆಲವು ಯುವಕರು ನಿಜಕ್ಕೂ ನಕ್ಸಲೀಯರೇ ಆಗುತ್ತಾರೇನೋ ತಿಳಿಯದು. ನಕ್ಸಲೀಯರ ಪ್ರಶ್ನಾರ್ಹ ಸಿದ್ಧಾಂತ ಮತ್ತು ಚಳುವಳಿಯ ವಿಧಾನಗಳನ್ನು ವಿರೋಧಿಸುವುದೆಂದರೆ ಸಾಲ್ವಾ ಜುಡುಂಗೆ ಬೆಂಬಲ ನೀಡುವುದು ಮತ್ತು ನಾಗರಿಕ ಹಕ್ಕುಗಳನ್ನು ದಮನ ಮಾಡುವುದು ಎಂಬುದನ್ನೊಪ್ಪದ ವಿನಾಯಕ್ ಜೈಲಿನಲ್ಲಿ ಒಂದು ವರ್ಷ ಕಳೆದಿದ್ದಾರೆ. ಸಾಲ್ವಾ ಜುಡುಂ ಎಂಬ ಪಡೆಯು ಕಾನೂನುಬಾಹಿರವಾದದ್ದೆಂದು ನ್ಯಾಯಾಲಯವೂ ಈಚೆಗೆ ಹೇಳಿದೆ. ಛತ್ತೀಸ್‌ಘಡದ ಭಾರತೀಯ ಜನತಾ ಪಕ್ಷದ ಸರ್ಕಾರವು ವಿನಾಯಕ್ ಸೇನರನ್ನು ಕೂಡಲೇ ಬಿಡುಗಡೆ ಮಾಡಬೇಕು, ಸಲ್ಲದ ಆರೋಪಗಳನ್ನು ಹಿಂತೆಗೆದುಕೊಳ್ಳಬೇಕು, ಬೇಕಾದರೆ ಮೊಕದ್ದಮೆ ಹೂಡಿ ಅವರ ವಿಚಾರಣೆ ನಡೆಸಬೇಕು. ಕರ್ನಾಟಕವೂ ಸೇರಿದಂತೆ ಬೇರೆ ರಾಜ್ಯಗಳಲ್ಲಿ ಅಧಿಕಾರಕ್ಕೆ ಬರುವ ಹಂಬಲವುಳ್ಳ ಭಾರತೀಯ ಜನತಾ ಪಕ್ಷವು ಸ್ವತಃ ತಾನು ನಡೆಸುವ ಸರ್ಕಾರವನ್ನು ಭಯೋತ್ಪಾದನೆಯ ಆಯುಧವನ್ನಾಗಿ ಮಾಡಿಕೊಳ್ಳುವುದು ಯೋಗ್ಯವಲ್ಲ. ಜನರನ್ನು ನಕ್ಸಲೀಯರು ಮತ್ತು ಸರ್ಕಾರ, ಇಬ್ಬರೂ ಪೀಡಿಸಿದರೆ ಅವರು ಎಂತಹ ಹೋರಾಟ ನಡೆಸಬೇಕು ? ಮಾನ್ಯ ಅದ್ವಾನಿಯವರು ಇದಕ್ಕೆ ಉತ್ತರ ಕೊಡಬೇಕು, ಕೂಡಲೆ ಮಧ್ಯಪ್ರವೇಶ ಮಾಡಿ ವಿನಾಯಕ್ ಸೇನರನ್ನು ಬಿಡುಗಡೆಗೊಳಿಸಬೇಕು.

## ಬುಷ್-ಕೋಂಡಲಿಸಾ ಹೊಟ್ಟೆಕಿಚ್ಚು

**ಭಾ**ರತದ ಜನ ಬಕಾಸುರರಾಗಿದ್ದಾರೆ. ಆದ್ದರಿಂದ ಏಕಚಕ್ರಪುರವೆಂಬ ವಿಶ್ವದಲ್ಲಿ ಆಹಾರಕ್ಕಾಗಿ ಹಾಹಾಕಾರ ಉಂಟಾಗಿದೆ. ಬಕಾಸುರನು ಪ್ರತಿನಿತ್ಯ ''ಮಹಿಷದ್ವಯ ಸಹಿತ ನಿರ್ದಾಯದಲಿ ಹನ್ನೆರಡು ಕಂಡುಗದಕ್ಕಿಯೋಗರವ'' (ಎರಡು ಎಮ್ಮೆ ಮತ್ತು ೧೨ ಖಂಡುಗದ ಅಕ್ಕಿಯಿಂದ ತಯಾರಾದ ಅನ್ನ) ತಿನ್ನುತ್ತಿದ್ದನಂತೆ. ಅದನ್ನು ಪೂರೈಸಲು ಏಕಚಕ್ರಪುರದ ಜನತೆ ಬಹಳ ಕಷ್ಟಕ್ಕೀಡಾಗಿದ್ದರು. ಭೀಮಸೇನ ಬಂದು ಬಕಾಸುರನನ್ನು ಕೊಂದು ಓಗರವನ್ನೆಲ್ಲಾ ತಾನೇ ಉಂಡು ಸುಖಿಸಿದ. ನಿಜಕ್ಕೂ ನೋಡಿದರೆ ಭಾರತದ ಜನ ಬಕಾಸುರರಲ್ಲ. ಅದು ಅಮೆರಿಕಾದ ಅಧ್ಯಕ್ಷ ಬುಷ್ ಮತ್ತು ಆತನ ವಿದೇಶಾಂಗ ಕಾರ್ಯದರ್ಶಿ ಕೋಂಡಲಿಸ್ಸಾ ರೈಸ್ ಮಾಡಿರುವ ಅಹಂಕಾರದ, ಹಸಿ ಸುಳ್ಳಿನ, ಆಪಾದನೆ. ಅಂಥವರೊಡನೆ ಆಲಿಂಗನಕ್ಕೆ ಹಾತೊರೆಯುವ ಮನಮೋಹನ ಸಿಂಗ್ ಸರ್ಕಾರಕ್ಕೆ ಧಿಕ್ಕಾರ ಹೇಳಬೇಕು.

ಅದಿರಲಿ, ಬಕಾಸುರನ ಉಪಾಖ್ಯಾನಕ್ಕೆ ಹಿಂದಿರುಗುವುದಾದರೆ, ವಿಶ್ವದ ಜನತೆಯು ಕುಂತಿಯ ಐದು ಮಕ್ಕಳಿದ್ದಂತೆ, ಊಟವಿಲ್ಲದೆ ಸೊರಗಿಹೋಗಿದ್ದಾರೆ. ಭಿಕ್ಷಾಪಾತ್ರೆ ಹಿಡಿದು ಊರಿನಲ್ಲಿ ಸುತ್ತಿಬರುತ್ತಾರೆ. ದೊರಕಿದಷ್ಟನ್ನು ಅವರು ಹಂಚಿಕೊಂಡು ತಿನ್ನಬೇಕು. ಇದ್ದುದನ್ನೆಲ್ಲಾ ಎರಡು ಭಾಗ ಮಾಡುತ್ತಾಳೆ ತಾಯಿ ಕುಂತಿ. ಅವಳಿಗೇನೂ ಉಳಿಯುವುದಿಲ್ಲ. ಎರಡು ಭಾಗದಲ್ಲಿ ''ಒಂದು ಭಾಗ ವೃಕೋದರಂಗೆ (ಅಂದರೆ, ಭೀಮನಿಗೆ), ಉಳಿದೊಂದು ಭಾಗವ ತಾವು ನಾಲ್ವರು ನಂದನರು ವಿನಿಯೋಗಿಸುವರು.'' ನಮ್ಮ ಜಾಗತಿಕ ಪರಿಸ್ಥಿತಿ ಇರುವುದು ಹಾಗೆಯೇ : ಮೀನು, ಮಾಂಸ, ಮದ್ಯ, ಹಣ್ಣು, ತರಕಾರಿ, ದವಸ-ಧಾನ್ಯಗಳು, ಎಣ್ಣೆ, ಉಕ್ಕು, ಸಿಮೆಂಟು, ಕಲ್ಲಿದ್ದಲು, ವಿದ್ಯುತ್ತು, ಹೀಗೆ ಯಾವುದನ್ನು ತೆಗೆದುಕೊಂಡರೂ ಅಮೆರಿಕಾ ಎಂಬ ತೋಳ ತನ್ನ ಹೊಟ್ಟೆಗೆ ವಿಶ್ವದಲ್ಲಿರುವ ಅರ್ಧದಷ್ಟನ್ನು ಸುರಿದುಕೊಳ್ಳುತ್ತದೆ. ಮಿಕ್ಕಿದ್ದನ್ನು ಪ್ರಪಂಚದ ಬೇರೆ ರಾಷ್ಟ್ರಗಳು ಕಚ್ಚಾಡಿ ತಮ್ಮ ತಮ್ಮಲ್ಲಿ ಹಂಚಿಕೊಳ್ಳಬೇಕು. ಕೆಲವರಿಗೆ ಅರೆಹೊಟ್ಟೆ, ಇನ್ನು ಕೆಲವರಿಗೆ ಬರೀ ಹೊಟ್ಟೆ. ಹಾಗಿದ್ದೂ ಬುಷ್ ಹೇಳುವುದು ಭಾರತವು ಬಕಾಸುರನಾಗಿದೆ ಎಂದು. ನಾವು ಮೊದಲಿಗಿಂತ ಹೆಚ್ಚು ತಿನ್ನುತ್ತಿರುವುದರಿಂದ ಆಹಾರ ಸಾಮಗ್ರಿ ವಿಶ್ವದಲ್ಲಿ ದುರ್ಲಭವಾಗುತ್ತಿದೆಯಂತೆ ಮತ್ತು ಬೆಲೆ ಏರಿಕೆಗೂ ಅದೇ ಕಾರಣವಂತೆ. ಅಂದರೆ, ವಿಶ್ವದ ಎಲ್ಲ ರಾಷ್ಟ್ರಗಳವರೂ ಭಾರತವನ್ನು ಕೆಂಗಣ್ಣಿನಿಂದ ಕಾಣಬೇಕು, ಎಂದರ್ಥ. ಬುಷ್ ತರ್ಕವನ್ನು ಇಂದಿನ ನಮ್ಮ ದೇಶಕ್ಕೆ ಅನ್ವಯಿಸಿದರೆ ಹಣದುಬ್ಬರ ಮತ್ತು ಬೆಲೆ ಏರಿಕೆಗೆ ದೇಶದಲ್ಲಿ ಈವರೆಗೆ ಹಸಿದಿದ್ದವರು ಈಗ ಸ್ವಲ್ಪ ತಿನ್ನಲಾರಂಭಿಸಿದ್ದು ಕಾರಣವೆಂದು ಹೇಳಬೇಕಾಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಹಸಿವಿನಿಂದ ಬಳಲುತ್ತಿರುವವರು ಹಾಗೇ ಉಳಿಯಬೇಕು ಇಲ್ಲವೇ ಅವಸಾನ ಹೊಂದಬೇಕು ಎಂದಾಗುತ್ತದೆ. ನಮ್ಮ ದೇಶ ಮತ್ತು ಚೀಣಾ ಸ್ವಲ್ಪ ಅಭಿವೃದ್ಧಿ ಹೊಂದಿರುವುದರಿಂದ ವಿಶ್ವದಲ್ಲಿ ಆಹಾರದ ಬೆಲೆ ಏರಿದೆಯೆಂಬುದು ನಿಜವಾದರೆ, ನಾಳೆ ಆಫ್ರಿಕಾ, ದಕ್ಷಿಣ ಅಮೆರಿಕಾ, ಫಿಲಿಪ್ಪೀನ್ಸ್ ಮುಂತಾದ ದೇಶಗಳ ಜನರು ಹಸಿವಿನಿಂದ ಪಾರಾಗುವುದು ವಿಶ್ವಕ್ಕೆ ದುರಂತಮಯವಾದುದೆಂದು ಸೂಚಿಸಬೇಕಾಗುತ್ತದೆ. ಹೀಗೆ ಬುಷ್-ರೈಸ್ ಮನುಷ್ಯರ ಬಗೆಗೆ ಇರಿಸಿಕೊಂಡಿರುವ ತುಚ್ಛ ಭಾವನೆ ಅಸಹ್ಯಕರವಾದ್ದು.

೧೯೯೪ರಲ್ಲಿ ಕೃಷಿ ವಿಜ್ಞಾನಿ ನಾರ್ಮನ್ ಬೋರ್ಲಾಗ್ ಒಂದು ವಾದವನ್ನು ಮಂಡಿಸಿದ್ದ. (ಆತ ನೊಬೆಲ್ ಪ್ರಶಸ್ತಿ ವಿಜೇತ ಮತ್ತು ಭಾರತದ ಕೃಷಿಕ್ಷೇತ್ರಕ್ಕೆ ಸ್ವಲ್ಪ ಕೊಡುಗೆ ನೀಡಿದ್ದಾನೆ). ವಾದ ಹೀಗಿತ್ತು: ಪ್ರಪಂಚದ ಜನಸಂಖ್ಯೆ ಏರುತ್ತಾ ಹೋದರೆ ಅಮೆರಿಕಾದ ಜೀವನ ಶೈಲಿಗೆ ಧಕ್ಕೆಯುಂಟಾಗುತ್ತದೆ. ಏಕೆಂದರೆ, ಪ್ರಾಕೃತಿಕ ಸಂಪನ್ಮೂಲಗಳನ್ನು (ಆಹಾರ-ತೈಲ-ಖನಿಜ, ಇತ್ಯಾದಿ) ಹೆಚ್ಚಿನ ಜನರಲ್ಲಿ ಹಂಚಿಕೆ ಮಾಡಬೇಕಾಗುತ್ತದೆ ಮತ್ತು ಹಾಗೆ ಮಾಡಿದಾಗ ಅಮೆರಿಕಾಕ್ಕೆ ತೈಲದ ಸರಬರಾಜು ಕಡಿಮೆಯಾಗುತ್ತದೆ. ನಮ್ಮ ಕಾರುಗಳ ಓಡಾಟ ಕಡಿಮೆಯಾಗುತ್ತದೆ. ಹೀಗಾಗಿ ನಮ್ಮ ಜೀವನ ಶೈಲಿಗೆ ಧಕ್ಕೆಯುಂಟಾಗುತ್ತದೆ.

ತಮ್ಮ ದೇಶದ ಜೀವನ ಶೈಲಿಯನ್ನು ಸಂರಕ್ಷಿಸಲು ಬೇರೆ ದೇಶಗಳನ್ನು ಬಡತನದಲ್ಲಿಟ್ಟಿರಬೇಕು, ಇಲ್ಲವೆ ಆ ದೇಶಗಳ ಸಂಪತ್ತನ್ನು ಸೂರೆಗೊಂಡು ಅಮೆರಿಕಾಕ್ಕೆ ಕೊಂಡೊಯ್ಯಬೇಕು ಎಂಬುದು ಅನಿವಾರ್ಯವೆಂಬಂತೆ ಬೋರ್ಲಾಗ್, ಬುಷ್, ರೈಸ್ ಇತ್ಯಾದಿಗಳು ಭಾವಿಸಿದ್ದಾರೆ. ಇರಾಕ್ ಮುಂತಾದ ದೇಶಗಳ ಮೇಲಿನ ಆಕ್ರಮಣವನ್ನು ಈ ಹಿನ್ನೆಲೆಯಲ್ಲಿ ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಹಸಿದವನ ಹೊಟ್ಟೆಗೆ ರೊಟ್ಟಿ ಸಿಕ್ಕಿದರೆ ಅವನನ್ನು ನೋಡುವ ಕಣ್ಣುಗಳು ಮಿಂಚುತ್ತವೆ ಎಂಬ ಮಾತೊಂದಿದೆ. ಬುಷ್-ರೈಸ್ ಕಣ್ಣು ಮಿಂಚುವುದಿಲ್ಲ, ಹೊಟ್ಟೆ ಕಿವುಚುತ್ತದೆ. ಅವರು ಪೋಷಿಸುವ ವ್ಯವಸ್ಥೆಯು ಅನಾಗರಿಕವಾದ್ದು, ಅಮಾನವೀಯವಾದ್ದು. ಗಾಂಧೀಜಿ ಹೇಳುತ್ತಿದ್ದರು, ಪ್ರಕೃತಿಮಾತೆಯ ಮಡಿಲಲ್ಲಿ ಎಲ್ಲರಿಗೂ ಸಾಕಾಗುವಷ್ಟು ಸಂಪತ್ತಿದೆ, ಆದರೆ ದುರಾಸೆಯನ್ನು ಪೂರೈಸಲು ಬೇಕಾದಷ್ಟು ಇಲ್ಲ, ಎಂದು. ''ಹೊಟ್ಟೆಕಿಚ್ಚಿನ ಮೊಟ್ಟೆಕೋಳಿ'' ಎಂದು ಬಾಲಕ- ಬಾಲಿಕೆಯರು ಅವರ ಒಡನಾಡಿಗಳಲ್ಲಿ

೮ನೇ ಪುಟಕ್ಕೆ






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೦೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨




**ಶ್ರೀ ಎಚ್. ಎಸ್. ದೊರೆಸ್ವಾಮಿ ಸಂದರ್ಶನ**

ಅತ್ಯಂತ ಪರಿಣಾಮಕಾರಿ ಮಾತುಕತೆ ಇದು. ಇದನ್ನು ಓದುತ್ತಿದ್ದಾಗ ಈ ಮುಂದಿನ ಕನ್‌ಫ್ಯೂಶಿಯಸ್ ವಾಣಿ ನೆನಪಿಗೆ ಬಂದಿತು: "ನಮ್ಮ ಜಗದ್ಭವ್ಯ ಪ್ರಾಚೀನರು ಅತ್ಯುನ್ನತ ಸದ್ಗುಣಗಳನ್ನು ಸ್ಪಷ್ಟಪಡಿಸಿಕೊಳ್ಳಲು ಮತ್ತು ಪ್ರಪಂಚಾದ್ಯಂತ ಪ್ರಸಾರಗೈಯಲು ಬಯಸಿದಾಗ ತಮ್ಮ ರಾಜ್ಯಗಳಿಗೆ ಯುಕ್ತ ವ್ಯವಸ್ಥೆಯನ್ನು ಆವಾಹಿಸಿದರು. ರಾಜ್ಯಗಳಿಗೆ ಯುಕ್ತ ವ್ಯವಸ್ಥೆಯನ್ನು ಆವಾಹಿಸುವ ಮೊದಲು ತಮ್ಮ ಕುಟುಂಬಗಳನ್ನು ನಿಯಂತ್ರಿಸಿದರು. ಕುಟುಂಬಗಳನ್ನು ನಿಯಂತ್ರಿಸುವ ಮೊದಲು ತಮ್ಮನ್ನು ತಿದ್ದಿಕೊಂಡರು. ಚಿಂತನೆಗಳಲ್ಲಿ ನೈಷ್ಠಿಕರಾಗಿರಲು ಪ್ರಯತ್ನಿಸುವ ಮೊದಲು ತಮ್ಮ ಜ್ಞಾನವನ್ನು ಗರಿಷ್ಠತೆಗೆ ವಿಸ್ತರಿಸಿದರು. ಜ್ಞಾನದ ಇಂಥ ಶೋಧನೆ ಎಂದರೆ ವಸ್ತುಗಳ ಶೋಧನೆ ಮತ್ತು ಅವು ವಾಸ್ತವವಾಗಿ ಹೇಗಿದ್ದುವೋ ಹಾಗೆಯೇ ಅವನ್ನು ನೋಡುವುದು ಎಂದರ್ಥ. ಜ್ಞಾನ ಸಂಪೂರ್ಣವಾದಾಗ ಚಿಂತನೆಗಳು ನೈಷ್ಠಿಕವಾದುವು. ಚಿಂತನೆಗಳು ನೈಷ್ಠಿಕವಾದಾಗ ಆತ್ಮಗಳು ಪರಿಪೂರ್ಣವಾದುವು. ಆತ್ಮಗಳು ಪರಿಪೂರ್ಣವಾದಾಗ ವ್ಯಕ್ತಿಗಳು ನೇರ್ಪುಗೊಂಡರು. ವ್ಯಕ್ತಿಗಳು ನೇರ್ಪುಗೊಂಡಾಗ ಕುಟುಂಬಗಳು ನಿಯಂತ್ರಿತವಾದುವು. ಕುಟುಂಬಗಳು ನಿಯಂತ್ರಿತವಾದಾಗ ರಾಜ್ಯಗಳು ಯುಕ್ತ ವ್ಯವಸ್ಥೆ ಪಡೆದುವು. ರಾಜ್ಯಗಳು ಯುಕ್ತ ವ್ಯವಸ್ಥೆ ಪಡೆದಾಗ ಸಮಸ್ತ ಪ್ರಪಂಚವೂ ಸುಖ ಶಾಂತಿಮಯವಾಯಿತು."

ದೊರೆಸ್ವಾಮಿಯವರ ಮಾತು ಗಮನಿಸಿ: "ನಮ್ಮ ಗುರಿ, ವಿಚಾರಗಳು ಖಚಿತವಾಗಿರುವವರೆಗೆ ಅದರಿಂದೇನೂ (ಧನ ಸಹಾಯದಿಂದ)ಪ್ರಭಾವ ಆಗುವುದಿಲ್ಲ"

ಸಾರಾಂಶವಿಷ್ಟೆ: ದೇಶದ ಸರಾಸರಿ ಶೀಲ (ಜನರ ಸರಾಸರಿ ವರಮಾನ ಅಲ್ಲ) ಅಭಿವೃದ್ಧಿಯಾದ ವಿನಾ ರಾಷ್ಟ್ರ ಪ್ರಗತಿ ಕೇವಲ ಮರೀಚಿಕೆ. ನಮ್ಮ ಶಿಕ್ಷಣದ ಗುರಿ ಇದಾಗಬೇಕು.

ಮೈಸೂರು **ಜಿ. ಟಿ. ನಾರಾಯಣರಾವ್**

ನಾಡಿನ ಹಿರಿಯ ಸ್ವಾತಂತ್ರ್ಯ ಹೋರಾಟಗಾರ ಶ್ರೀಯುತ ಎಚ್. ಎಸ್. ದೊರೆಸ್ವಾಮಿಯವರೊಂದಿಗೆ 'ಹೊಸತು' ಮಾಸಿಕ ನಡೆಸಿರುವಂತಹ ಸಂದರ್ಶನ ಅತ್ಯಂತ ಸೊಗಸಾಗಿ ಮೂಡಿಬಂದಿದೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಭಾರತದ ಇತಿಹಾಸವನ್ನು ಕಂಡು, ಅರಿತು, ಭಾಗವಹಿಸಿ ಓದುಗರ ಸಮ್ಮುಖದಲ್ಲಿ ತಮ್ಮ ಅನಿಸಿಕೆಯನ್ನು ಸಮಗ್ರವಾಗಿ ತೆರೆದಿಡಲು ಸಹಾಯಕಾರಿಯಾಗಿದೆ. ಸ್ವಾತಂತ್ರ್ಯ ಚಳುವಳಿಗೆ ಶ್ರೀಯುತರು ಧುಮುಕುವುದಕ್ಕೆ ಪ್ರೇರಕವಾದ ಅಂಶಗಳು, ಅಂದಿನ ಪತ್ರಿಕೋದ್ಯಮ ಮತ್ತು ಮೌಲ್ಯಗಳ ಪ್ರೌಢಿಮೆಗಳನ್ನು ಕುರಿತಾದ ಮಾತುಗಳು ನಿಜಕ್ಕೂ ಚಿಂತನಾರ್ಹ. ವ್ಯಾಪಾರೀ ಮನೋಭಾವದಿಂದ ಮುಕ್ತವಾದ, ಕಡುಕಷ್ಟಗಳಿಗೆ ಗುರಿಯಾದ ಆ ದಿನದ ಪತ್ರಿಕೋದ್ಯಮದ ಕುರಿತಾದ ಶ್ರೀಯುತರ ಧೋರಣೆ, ಇಂದಿನ ಪರಿಸ್ಥಿತಿ ಕುರಿತ ಕಳಕಳಿ ವಾಸ್ತವತೆಯ ಪ್ರತೀಕವಾಗಿ ಮೂಡಿವೆ.

ಇಂದಿನ ಚುನಾವಣೆಗಳ ಬಗ್ಗೆ ಶ್ರೀಯುತರ ಅಭಿಪ್ರಾಯ ನೂರಕ್ಕೆ ನೂರು ಸತ್ಯ. ರಾಜಕೀಯದಲ್ಲಿ ಗೂಂಡಾಗಿರಿ ತಾರಕದ ಹಂತ ಮುಟ್ಟಿರುವ ಬಗ್ಗೆ ಇವರ ಕಳಕಳಿ ಓದುಗರಲ್ಲಿ ಪರಿವರ್ತನೆ ಮೂಡಿಸುವಲ್ಲಿ ಪರಿಣಾಮಕಾರಿಯಾದೀತೇನೋ? ಸಿದ್ಧಾಂತಗಳು ಬೇರೆ ಬೇರೆಯಾದರೂ ಒಟ್ಟಾಗಿ ಗುರಿಗೆ ಕೆಲಸ ಮಾಡುತ್ತಿದ್ದವು ಮತ್ತು ಮಾಡಬೇಕು ಎನ್ನುವ ದೊರೆಸ್ವಾಮಿಗಳ ಹೇಳಿಕೆಗೆ ಮಹತ್ವವಿದೆ. ಮಹತ್ವ




ಯುತವಾದ ವಿಧಾನಸಭೆ, ಪರಿಷತ್ತು, ಸಂಸತ್ತಿನ ಕಲಾಪದ ವೇಳೆಯ ದುರುಪಯೋಗದ ಬಗ್ಗೆ, ಅಡ್ಡಿಪಡಿಸುವವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ಸಲಹೆ ಸೂಕ್ತವೆನಿಸುತ್ತದೆ.

ಅತ್ಯಂತ ಉಪಯುಕ್ತ ಸಂದರ್ಶನವಾಗಿ ಮೂಡಿ ಬಂದು ಇಂದಿನ ದಿನಕ್ಕೆ ಗಾಂಧೀವಾದದ ಪ್ರಸ್ತುತತೆಯ ಬಗ್ಗೆ ಮತ್ತು ಜಾಗತೀಕರಣದ ಪರಿಣಾಮಗಳ ಬಗ್ಗೆ ಓದುಗರನ್ನು ಒರೆ ಹಚ್ಚುವಂತೆ ಮಾಡಿದೆ.

ಬೆಂಗಳೂರು **ನೆ. ಲ. ರಾಮಮೂರ್ತಿ**

**ರಾಮಾಯಣದ ಆವೃತ್ತಿಗಳು**

'ರಾಮಾಯಣ ನಿಜ-ಭ್ರಮೆ' ಈ ಲೇಖನದಲ್ಲಿ (ಪಿ. ಎಸ್. ಶ್ರೀಧರಮೂರ್ತಿ) ಮೂರು ಬಗೆಯ ಪಾಠಗಳಿವೆ ಎಂದು ಉಲ್ಲೇಖವಿದೆ. ರಾಮಾಯಣದ ಕಾಲವನ್ನು ನಿರ್ಧರಿಸುವಲ್ಲಿ ಈ ಮೂರು ಪಾಠಗಳು ಉಂಟುಮಾಡುವ ಗೊಂದಲ ಇದೀಗ ಬಹಳ ಸ್ಪಷ್ಟವಾಗಿದೆ. ಈ ಬಗ್ಗೆ ಲೇಖಕರು ಮೂರು ಚಿಂತಕರ ಹೆಸರನ್ನು ಸೂಚಿಸಿದ್ದಾರೆ. ಈ ಚಿಂತನೆ ಈಗಲೂ ಮುಂದುವರೆದಿದೆ. ಅನೇಕರು ಈ ಗೊಂದಲದಲ್ಲಿ ಸಿಕ್ಕು ತಲೆ ಕೆಡಿಸಿಕೊಳ್ಳುತ್ತಿದ್ದಾರೆ. ಖಗೋಳ ವೈಜ್ಞಾನಿಕ ಅಂಶಗಳ ಆಧಾರದ ಮೇಲೆ ಲೆಕ್ಕ ಹಾಕಿದಾಗ ನನಗೆ ಕ್ರಿ. ಶ. ೯೦೦ ಎಂಬ ಉತ್ತರ ದೊರಕಿದ್ದುದು ನಿಜ. ಅದನ್ನು ಮುಂದಿಡಲು ಹಿಂಜರಿದು ನಾನೇನೋ ತಪ್ಪು ಲೆಕ್ಕ ಮಾಡಿರಬೇಕು ಎಂದು ಭಾವಿಸಿದ್ದೆ. ಆ ಸಂದರ್ಭದಲ್ಲಿ ಇತರ ಲೆಕ್ಕಾಚಾರಗಳನ್ನು ಗಮನಿಸಿದಾಗ ಅನೇಕ ಹಿರಿಯರೂ ಕೂಡ ಈ ಬಗ್ಗೆ ವ್ಯತಿರಿಕ್ತ ಅಭಿಪ್ರಾಯಗಳನ್ನು ನಿವೇದಿಸಿದ್ದುದು ಕಂಡುಬಂದಿತು. ಬಹಳ ಸಮಂಜಸವಾದ ತರ್ಕ ಎನಿಸಿದ್ದು ಶ್ರೀಯುತ ಪಿ. ಶ್ರೀ ರಾಮಚಂದ್ರುಡು ಎಂಬುವವರ ಲೇಖನ. ಅದರ ಸಾರಾಂಶ ಹೀಗಿದೆ.

ಶ್ಲೋಕಗಳ ಸಂಖ್ಯೆಗಳು

| ದಾಕ್ಷಿಣಾತ್ಯ ಪಾಠ | ಬಂಗಾಳಿ ಪಾಠ | |
|---|---|---|
| ೨೨೮೦ | ೨೫೩೪ | ಬಾಲ ಕಾಂಡ |
| ೪೩೨೪ | ೪೧೨೧ | ಅಯೋಧ್ಯಾ ಕಾಂಡ |
| ೨೪೪೭ | ೨೮೪೨ | ಅರಣ್ಯ ಕಾಂಡ |
| ೨೪೭೨ | ೨೩೦೧ | ಕಿಷ್ಕಿಂಧಾ ಕಾಂಡ |
| ೨೮೬೫ | ೩೩೦ | ಸುಂದರ ಕಾಂಡ |
| ೫೭೯೦ | ೫೧೩೩ | ಯುದ್ಧ ಕಾಂಡ |
| ೩೫೬೯ | ೩೭೪೩ | ಉತ್ತರ ಕಾಂಡ |

ಈ ಅಂಶಗಳನ್ನು ಮತ್ತು ಸರ್ಗಗಳಲ್ಲಿಯ ವ್ಯತ್ಯಾಸಗಳನ್ನೂ ಶ್ರೀಯುತರು ವಿಶದವಾಗಿ ಚರ್ಚಿಸಿದ್ದಾರೆ.

ದಾಕ್ಷಿಣಾತ್ಯ ಪಾಠದಲ್ಲಿ ಸಿಗುವ ತಿಥಿ, ನಕ್ಷತ್ರಗಳ ವಿವರಗಳು ಬಂಗಾಳಿ ಪಾಠದಲ್ಲಿ ಇಲ್ಲ ಎಂಬ ಅಂಶ ನನ್ನನ್ನು ಚಿಂತೆಗೆ ಈಡುಮಾಡಿತು. ಹಾಗಿದ್ದಲ್ಲಿ ಈ ವಿವರಗಳು ಒದಗಿದ್ದು ಹೇಗೆ? ಭರತ ಲಕ್ಷ್ಮಣನಿಗಿಂತ ಚಿಕ್ಕವನೋ ದೊಡ್ಡವನೋ? ವನವಾಸಕ್ಕೆ ಮೊದಲು ಸೀತೆ ಅರಮನೆಯಲ್ಲಿದ್ದುದು ಹನ್ನೆರಡು ವರ್ಷವೋ (ದಾಕ್ಷಿಣಾತ್ಯ) ಒಂದೇ ವರ್ಷವೋ? (ಬಂಗಾಳಿ). ವಿಶ್ವಾಮಿತ್ರನೊಡನೆ ರಾಮ ಲಕ್ಷ್ಮಣರನ್ನು ಕಳುಹಿಸಿಕೊಟ್ಟಾಗ ರಾಮನ ವಯಸ್ಸು ೧೬ ಎಂದು ದಾಕ್ಷಿಣಾತ್ಯ ಪಾಠ ಹೇಳುತ್ತದೆ. ಮುಂದೆ ಮಾರೀಚ ರಾವಣನಿಗೆ ಈ ವಿಷಯ ತಿಳಿಸುವಾಗ ಹನ್ನೆರಡು ವರ್ಷ ಎಂದು ಹೇಳುತ್ತಾನೆ.

ಇಂತಹ ಅನೇಕ ಗೊಂದಲಗಳು ಇರುವಾಗ ಖಗೋಳ ವೈಜ್ಞಾನಿಕ ಅಂಶಗಳ ಆಧಾರದ ಮೇಲೆ ಕಾಲನಿರ್ಣಯ ಮಾಡುವುದು ಅಷ್ಟೇನೂ ಉಪಯುಕ್ತ ಕೆಲಸವಲ್ಲ ಎಂದು ನನಗೆ ಅನಿಸಿತು. "ತಿಥಿ ನಕ್ಷತ್ರಗಳ ಮಾಹಿತಿಯನ್ನು ಮೂಲಪಾಠದೊಳಗೆ ತುರುಕಿದ ಮಹನೀಯರು ಸ್ವಲ್ಪ ಜಾಗರೂಕತೆಯಿಂದ ಮಾಡಬೇಕಿತ್ತು" ಎಂಬ ಅಂಶವನ್ನು ಅನೇಕ ಹಿರಿಯ ವಿದ್ವಾಂಸರು ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾರೆ.

ಇದು ಮಹಾಭಾರತಕ್ಕೂ ಅನ್ವಯವಾಗುತ್ತದೆ. ಭಾರತದ ಮೂಲೆ ಮೂಲೆಯಲ್ಲೂ ರಾಮಾಯಣ, ಮಹಾಭಾರತದ ಪಾತ್ರಗಳ ಹೆಸರುಗಳನ್ನು ಲಗತ್ತಿಸಿಕೊಂಡ ಊರುಗಳು, ಹಳ್ಳಿಗಳು, ಕೆರೆಗಳು, ಹೆಜ್ಜೆಗಳೂ (ಭೀಮನ ಹೆಜ್ಜೆ) ಇವೆ. ಉತ್ತರ ಭಾರತದ ಯಾವುದೋ ಕುಗ್ರಾಮದಲ್ಲಿ ಪಂಚಪತಿಗಳ ಸೌಭಾಗ್ಯ(!)ದ ದ್ರೌಪದೀ ಸಂಪ್ರದಾಯವಿದೆ. ಕಾಂಬೋಡಿಯಾದಲ್ಲಿ

''ರಾಮ''ರುಗಳು ಆನುವಂಶಿಕ ರಾಜರಾಗಿದ್ದಾರೆ. ರಾಮ ಪ್ರತಿಷ್ಠಾಪಿಸಿದ ಲಿಂಗಗಳು ಎಲ್ಲೆಲ್ಲೂ ಕಾಣುತ್ತವೆ. ಆದ್ದರಿಂದ ಹಳೆಯ ಪಾತ್ರೆಗೆ ಲೇಪಿಸಿಕೊಂಡ ದಪ್ಪ ಮಣಕನ್ನು ತೆಗೆದು ಪಾತ್ರೆಯ ಮೂಲ ಸ್ವರೂಪವನ್ನು ಅರಿಯುವುದಕ್ಕಿಂತ ಮಣಕನ್ನೇ ಆಸ್ವಾದಿಸುವುದು ಮೇಲು.

ಬೆಂಗಳೂರು *ಡಾ|| ಬಿ. ಎಸ್. ಶೈಲಜಾ*

### ಹೆಣ್ಣು ಭ್ರೂಣಹತ್ಯೆಯ ನಿಷೇಧ : ಒಂದು ಸಾಮಾಜಿಕ ಹೊಣೆಗಾರಿಕೆ

ಪುರುಷ ಪ್ರಧಾನ ಸಮಾಜ ವ್ಯವಸ್ಥೆಯೇ ಈ ದೇಶದ ಮಹಿಳಾ ಸಮಸ್ಯೆಗಳಿಗೆ ಮುಖ್ಯ ಕಾರಣ. ನಾಗರಿಕತೆ ಬೆಳೆದಂತೆ ಯಜಮಾನಶಾಹಿ, ಬಂಡವಾಳಶಾಹಿಗಳು ಅವಕಾಶಗಳನ್ನು ಪುರುಷರಿಗೆ ವ್ಯವಸ್ಥಿತವಾಗಿ ಮಾಡಿ ಕೊಡುತ್ತಿವೆ. ಅಧಿಕಾರ, ಆಸ್ತಿ, ಸಂಪತ್ತುಗಳು ವಂಶಪಾರಂಪರ್ಯವಾಗಿ ಗಂಡುಮಗುವಿಗೆ ಹೋಗುವ ವ್ಯವಸ್ಥೆಯನ್ನೂ ಈ ಸಮಾಜ ಮಾಡಿದೆ. 'ಪುರುಷ ಶ್ರೇಷ್ಠ, ಮಹಿಳೆ ಕೀಳು' ಎಂಬ ಭಾವನೆಗೆ ಅನುಗುಣವಾಗಿ ಮಹಿಳೆ ಪುರುಷನ ಸೇವಕಿ. ಅವನ ಇಚ್ಛಾನುಸಾರ ಅವಳು ತನ್ನ ಜೀವನ ಸಾಗಿಸಬೇಕು ಎಂಬ ಕಟ್ಟುಪಾಡನ್ನೂ ಹಾಕಿದೆ. ಮಹಿಳೆಯ ದೇಹದ ಮೇಲೂ ಪುರುಷನದೇ ಸಂಪೂರ್ಣ ಅಧಿಕಾರ. ಮಹಿಳೆಗೆ ಬುದ್ಧಿಶಕ್ತಿ, ವಿವೇಕ, ಕೌಶಲ, ಬಲ, ಆತ್ಮವಿಶ್ವಾಸಗಳ ಕೊರತೆಯ ಕಾರಣದಿಂದ ಅವಳಿಗೆ ಸ್ವಂತಿಕೆಯಿಲ್ಲ; ಅದರಿಂದಲೇ ಅವಳಿಗೆ ಚಿಕ್ಕಂದಿನಲ್ಲಿ ತಂದೆಯ, ಮದುವೆಯ ನಂತರ ಗಂಡನ, ವೃದ್ಧಾಪ್ಯದಲ್ಲಿ ಮಗನ ಆಶ್ರಯ ಅನಿವಾರ್ಯ ಎಂಬ ನಂಬಿಕೆಯನ್ನು ಧರ್ಮ, ಸಂಪ್ರದಾಯ, ಇತಿಹಾಸ, ಪುರಾಣ, ಜಾನಪದ, ಕಥೆ, ಜನಪ್ರಿಯ ಹೇಳಿಕೆ ಇತ್ಯಾದಿಗಳ ಮೂಲಕ ಸಂಸ್ಕೃತಿ, ಪರಂಪರೆಗಳ ಹೆಸರಿನಲ್ಲಿ ದೃಢಗೊಳ್ಳುವಂತೆ ಸಾಮಾಜಿಕ ಮನೋಧರ್ಮವನ್ನು ರೂಪಿಸುತ್ತ ಬರಲಾಗಿದೆ.

ಮೊದಲಿನಿಂದಲೂ ಹೆಣ್ಣಿನ ಮೇಲೆ ಧರ್ಮ, ನಂಬಿಕೆಗಳ ಹೆಸರಿನಲ್ಲಿ ದೌರ್ಜನ್ಯ ನಿರಂತರವಾಗಿ ನಡೆಯುತ್ತಲೇ ಬಂದಿದೆ. ಬಹುಪತ್ನಿತ್ವ, ಬಾಲ್ಯವಿವಾಹ, ವೇಶ್ಯಾವೃತ್ತಿ, ದೇವದಾಸಿ ಪದ್ಧತಿ, ವಿಧವೆಯ ಅಪಮಾನ, ಸತಿ ಪದ್ಧತಿ, ಅತ್ಯಾಚಾರ, ವರದಕ್ಷಿಣೆ ಹಿಂಸೆ ಮತ್ತು ಕೊಲೆ, ಆ್ಯಸಿಡ್ ದಾಳಿ, ಹೆಣ್ಣುಮಗುವಿನ ಕೊಲೆ – ಇವನ್ನು ಹಿಂದಿನಿಂದಲೂ ಮಹಿಳೆಯ ಬದುಕಿನ ಸಹಜ ಸ್ಥಿತಿ, ಪಾಡು, ಅವಸ್ಥೆ ಎಂಬಂತೆ ಬಿಂಬಿಸಲಾಗಿದೆ. ಇವುಗಳಿಗೆ ಹೊಂದಿಕೊಂಡು, ಸಹಿಸಿಕೊಂಡು ಬಾಳುವುದು ಹೆಣ್ಣಿಗೆ ಅನಿವಾರ್ಯ, ಮಾತ್ರವಲ್ಲ ಅದೇ ಮರ್ಯಾದಸ್ಥ ಹೆಣ್ಣಿನ ಬಾಳಿನ ರೀತಿ, ತತ್ವ ಎಂಬಂಥ ನಂಬಿಕೆಯನ್ನು ಅರಿವಾಗಿ, ತಿಳಿವಳಿಕೆಯಾಗಿ ಊರಿಸುವುದು ನಡೆದು ಬಂದಿದೆ.

ಪ್ರತಿ ೨ ನಿಮಿಷಕ್ಕೆ ಒಂದಿಲ್ಲೊಂದು ಅಪರಾಧ ಮಹಿಳೆಯ ಮೇಲೆ ನಡೆಯುತ್ತಿದೆ. ಭಾರತದಲ್ಲಿ ಪ್ರತಿ ಘಂಟೆಗೆ ನಾಲ್ವರು ಮಹಿಳೆಯರ ಮೇಲೆ ಅತ್ಯಾಚಾರ ನಡೆಸಿದರೆ, ಇಬ್ಬರನ್ನು ಸುಡುತ್ತಿದ್ದಾರೆ. ಅದೂ ಸಾಲದು ಎಂಬಂತೆ ಇಂದು ಹೆಣ್ಣು ಹುಟ್ಟುವ ಅಧಿಕಾರದಿಂದಲೂ ವಂಚಿತಳಾಗುತ್ತಿದ್ದಾಳೆ. ೨೦೦೬ರ ಪ್ರತಿಷ್ಠಿತ ಅಂತರ ರಾಷ್ಟ್ರೀಯ ವೈದ್ಯಕೀಯ ವಾರ್ತಾಪತ್ರ ಲಾನ್‌ಸೆಟ್ ಪ್ರಕಾರ ೧೦ ದಶಲಕ್ಷ ಹೆಣ್ಣು ಮಕ್ಕಳನ್ನು ಹೆಣ್ಣು ಭ್ರೂಣದ ಸ್ಥಿತಿಯಲ್ಲಿಯೇ, ಕಳೆದ ೨೦ ವರ್ಷಗಳಲ್ಲಿ ಕೊಂದುಹಾಕಲಾಗಿದೆ. ಅಂದರೆ ಪ್ರತಿ ವರ್ಷ ೫ ಲಕ್ಷ, ಒಂದು ದಿನಕ್ಕೆ ೧೩೭೦, ಪ್ರತಿ ನಿಮಿಷಕ್ಕೆ ಒಂದರಂತೆ ಹೆಣ್ಣು ಭ್ರೂಣಹತ್ಯೆಯಾಗುತ್ತಿದೆ. ೧೯೭೪ರಲ್ಲಿ ಹೊಸ ದೆಹಲಿಯ ಅಖಿಲ ಭಾರತ ವೈದ್ಯ ವಿಜ್ಞಾನ ಸಂಸ್ಥೆಯವರು ಗರ್ಭದಲ್ಲಿಯ ಶಿಶುವಿನ ನ್ಯೂನತೆಯನ್ನು ಕಂಡುಹಿಡಿಯಲು ಆಮ್ನಿಯೊಸಿಂಥೆಸಿಸ್ ಎಂಬ ಉಪಕರಣವನ್ನು ಕಂಡುಹಿಡಿದರು. ಅದನ್ನು ಲಿಂಗ ಪತ್ತೆಹಚ್ಚಲು ದುರುಪಯೋಗ ಮಾಡಿಕೊಳ್ಳಲಾಯಿತು. ಭಾರತದಲ್ಲಿ ಮೊಟ್ಟ ಮೊದಲು ೧೯೭೯ರಲ್ಲಿ ಅಮೃತಸರ (ಪಂಜಾಬ್)ದಲ್ಲಿ ಇದು ಪ್ರಾರಂಭವಾಗಿ ಈಗ ಭಾರತದಲ್ಲಿ ಸಾವಿರಾರು ಲಿಂಗಪರೀಕ್ಷಾ ಕೇಂದ್ರಗಳು ನಾಯಿಕೊಡೆಯಂತೆ ಹುಟ್ಟಿಕೊಂಡಿವೆ. ಹೆಣ್ಣುಭ್ರೂಣ ತೆಗೆಯಲು ಸುಲಭವಾಗಿ ಕೊಂಡೊಯ್ಯಬಹುದಾದ ಕಿಟ್‌ಗಳೂ ಬಂದಿವೆ. ಹರ್ಯಾಣದಲ್ಲಿ ಹೆಣ್ಣುಭ್ರೂಣ ತೆಗೆಯುವ ಸಂಚಾರಿ ಘಟಕವೇ ಇತ್ತು. ಹಿಂದೆ ಹೆಣ್ಣು ಮಗು ಜನಿಸಿದಾಗ ಅದರ ಹೊಕ್ಕುಳಬಳ್ಳಿಯನ್ನು ಕಟ್ಟದೆ ಹಾಗೇ ಬಿಟ್ಟು ರಕ್ತಸ್ರಾವವಾಗಿ ಸಾಯುವಂತೆ ಬಿಡುವ, ಇಲ್ಲವೆ ಹೆಣ್ಣು ಮಗುವಿನ ಗಂಟಲಲ್ಲಿ ಭತ್ತವನ್ನು ಹಾಕಿ ಕೊಲ್ಲುವ ಪದ್ಧತಿ ಇತ್ತು. ತಂತ್ರಜ್ಞಾನ ಬೆಳೆದಂತೆ ಹೆಣ್ಣು ಭ್ರೂಣಹತ್ಯೆಗೆ ಸಂಬಂಧಿಸಿದಂತೆ '೫೦೦ರೂ. ಖರ್ಚು ಮಾಡಿ ಹೆಣ್ಣುಭ್ರೂಣ ತೆಗೆಸಿ ಮುಂದೆ ೫೦,೦೦೦ ರೂ. ಖರ್ಚಾಗುವುದನ್ನು ಉಳಿಸಿ' ಎಂಬ ಘೋಷಣಾ ಫಲಕಗಳು ಮರಾಠಿಯಲ್ಲಿ ಇದ್ದುವು. ೧೯೮೪-೮೫ರಲ್ಲಿ ಮಹಾರಾಷ್ಟ್ರದಲ್ಲಿ ೧೬ ಸಾವಿರ ಹೆಣ್ಣು ಭ್ರೂಣಹತ್ಯೆಯಾದರೆ, ಭಾರತದಲ್ಲಿ ೧೯೭೮ರಿಂದ ೮೩ರವರೆಗೆ ೭೮ಸಾವಿರ ಹೆಣ್ಣು ಭ್ರೂಣಹತ್ಯೆಯಾಗಿದೆ.

೧೯೮೦ರ ರಾಷ್ಟ್ರೀಯ ಮಹಿಳಾ ಸಮ್ಮೇಳನದಲ್ಲಿ ಈ ವಿಷಯವನ್ನು ಕುರಿತು ಬಿರುಸಿನ ಚರ್ಚೆಯಾಯಿತು. ಅನಂತರದ ದಿನಗಳಲ್ಲಿ ಮಹಿಳಾ ಸಂಘಟನೆಗಳು ಭ್ರೂಣ ಪರೀಕ್ಷೆಯನ್ನು ನಿಲ್ಲಿಸಬೇಕೆಂದು ದೇಶದ ವಿವಿಧೆಡೆ ವೈವಿಧ್ಯಮಯ ಜಾಗೃತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡವು. ಮುಂಬೈನಲ್ಲಿ ಮಹಿಳಾ ಸಂಘಟನೆಗಳು ಒಗ್ಗಟ್ಟಿನಿಂದ ಒಂದೆಡೆ ಸೇರಿ ಈ ದಿಸೆಯಲ್ಲಿ ಕೆಲಸ ಮಾಡಿದವು. ೧೯೮೬ರಲ್ಲಿ ಲಿಂಗ ಪತ್ತೆಹಚ್ಚುವ ಮತ್ತು ಹೆರಿಗೆ ಪೂರ್ವ ಲಿಂಗ ನಿರ್ಧರಿಸುವ ಕೇಂದ್ರಗಳ ವಿರುದ್ಧ, ಮಹಿಳಾ ಸಂಘಟನೆಗಳ ಜೊತೆ ಎಚ್ಚೆತ್ತ ಸಾಮಾಜಿಕ ಕಾಳಜಿಯ ನಾಗರಿಕರು ಸೇರಿ ಕೆಲಸ ಮಾಡಿದ ಕಾರಣ ಅವರಿಗೆ ಮುಂಬೈನಲ್ಲಿ ಜಯ ದೊರೆಯಿತು.

ನಾಗರಿಕರ ಒಕ್ಕೊರಲಿನ ಒತ್ತಡಕ್ಕೆ ಮಣಿದ ಮಹಾರಾಷ್ಟ್ರ ಸರಕಾರ ೧೯೮೮ರಲ್ಲಿ ಮೊಟ್ಟಮೊದಲು ಪ್ರಸವಪೂರ್ವ ಲಿಂಗ ಪತ್ತೆಹಚ್ಚುವ ನಿಷೇಧ, ನಿಯಮ ನಿಬಂಧನೆಗಳನ್ನು ತಂದಿತು. ಪಂಜಾಬಿನಲ್ಲಿ ೧೯೯೪ರ ಮೇ ತಿಂಗಳಿನಲ್ಲಿ ಆ ಕಾನೂನು ಜಾರಿಗೆ ಬಂದಿತು. ಅನಂತರ ದೇಶದ ಎಲ್ಲ ಭಾಗಗಳಲ್ಲಿ ಗರ್ಭಾವಸ್ಥೆಯಲ್ಲಿ ಲಿಂಗ ಪತ್ತೆಮಾಡುವ ತಂತ್ರ (ನಿಬಂಧನೆ ಮತ್ತು ತಡೆ ಅಥವಾ ನಿರ್ಬಂಧದ ದುರುಪಯೋಗ)ದ ಆ್ಯಕ್ಟ್ ೨೮ ಸೆಪ್ಟೆಂಬರ್ ೧೯೯೪ರಲ್ಲಿ ಬಂದಿತು. ಇದರ ಪ್ರಕಾರ ಕಾನೂನು ಉಲ್ಲಂಘಿಸಿದವರಿಗೆ ಮೂರು ವರ್ಷ ಜೈಲು ಶಿಕ್ಷೆ ಮತ್ತು ೧೦,೦೦೦ ರೂ. ದಂಡ.

ಯೂನಿಸೆಫ್ ಅಧ್ಯಯನದ ಪ್ರಕಾರ ಸಿಕ್ಕಿಂ, ನಾಗಾಲ್ಯಾಂಡ್, ಮೇಘಾಲಯ, ಮಿಜೊರಾಮ್ ಮತ್ತು ಕೇರಳಗಳಲ್ಲಿ ಹೆಣ್ಣು ಭ್ರೂಣಹತ್ಯೆ ಅಥವಾ ಹೆಣ್ಣು ಶಿಶು ಹತ್ಯೆಯ ಪ್ರಕರಣಗಳು ಆಗಿಲ್ಲ. ಆದರೆ ಹರ್ಯಾಣ, ಪಂಜಾಬ್, ದೆಹಲಿ, ಯುಪಿ, ಬಿಹಾರ ಮತ್ತು ಗುಜರಾತ್ ರಾಜ್ಯಗಳಲ್ಲಿ ಪ್ರತಿ ೧೦೦೦ ಗಂಡುಮಕ್ಕಳಿಗೆ ೮೦೦ ಹೆಣ್ಣು ಮಕ್ಕಳಿರುವರು. ಮಹಿಳೆ ಮತ್ತು ಮಕ್ಕಳ ಸಾಗಾಣಿಕೆ ಇದೇ ಕಾರಣಕ್ಕೆ ಆಗುತ್ತಿರುವುದು. ೧೯೮೦ರಿಂದ ನಿರಂತರವಾಗಿ ದೇಶದ ವಿವಿಧೆಡೆಯಿರುವ ಮಹಿಳಾ ಸಂಘಟನೆಗಳು ಜಾಗೃತಿ ಮೂಡಿಸುವ ಕಾರ್ಯದಲ್ಲಿ ನಿರತವಾದವು. ಶಾಲೆ ಕಾಲೇಜುಗಳಲ್ಲಿ ಅರಿವು ಮೂಡಿಸುವ ವಿಷಯದ ಚರ್ಚೆ, ಭಾಷಣ, ಪ್ರತಿಭಟನೆ, ಮೆರವಣಿಗೆ, ಭ್ರೂಣ ಪತ್ತೆಹಚ್ಚುವ ಕೇಂದ್ರಗಳ ಮುಂದೆ ಧರಣಿ, ಭ್ರೂಣ ಪತ್ತೆಮಾಡಿ ಹಣ ಗಳಿಸುವ ವೈದ್ಯರ ವಿರುದ್ಧ ಕೇಸು ದಾಖಲೆ ಮಾಡುವುದು, ಮಹಿಳೆಯರಲ್ಲಿ ಅರಿವು ಮೂಡಿಸುವುದು ಇತ್ಯಾದಿ ಕಾರ್ಯಕ್ರಮಗಳಲ್ಲಿ ತೊಡಗಿಕೊಂಡಿರುವುದಲ್ಲದೆ ರಾಷ್ಟ್ರೀಯ ಮಹಿಳಾ ಸಮ್ಮೇಳನದಲ್ಲಿ ಈ ವಿಷಯದ ಬಗ್ಗೆ ಚರ್ಚಿಸಿ ಅನೇಕ ನಿರ್ಧಾರಗಳನ್ನೂ ತೆಗೆದುಕೊಂಡಿವೆ. ಇಂದಿನ ರಾಜಕೀಯದವರಿಗೆ ತಮ್ಮ ಸಂಪತ್ತಿನ, ಓಟಿನ ಬಗ್ಗೆ ಆಸಕ್ತಿ ಮತ್ತು ಗಮನವೇ ಹೊರತು ಸಮಾಜದ ಸ್ವಾಸ್ಥ್ಯ ಅವರಿಗೆ ಮುಖ್ಯವಾಗಿ ಕಾಣಿಸುತ್ತಿಲ್ಲ. ರಾಜಕೀಯದಲ್ಲಿ ಮಹಿಳೆಯರ ಪ್ರಾತಿನಿಧ್ಯ ೧೧% ಮೀರಿಲ್ಲ. ಹೆಣ್ಣು ಭ್ರೂಣ ಹತ್ಯೆಯನ್ನು ತಡೆಯುವ ಜವಾಬ್ದಾರಿ ಕೇವಲ ಮಹಿಳೆಯರದು ಮಾತ್ರ ಅಲ್ಲ. ಹೆಣ್ಣು ಅಥವಾ ಗಂಡು ಮಗುವಾಗಬೇಕಾದರೆ ಪುರುಷ ಮಹಿಳೆ ಇಬ್ಬರೂ ಕಾರಣಕರ್ತರು. ಇಂದು ಸಮಾಜದಲ್ಲಿ ಹಾಹಾಕಾರ ವೆಬ್ಬಿಸಿರುವ ಹೆಣ್ಣು ಭ್ರೂಣಹತ್ಯೆ ನಿಷೇಧಕ್ಕೆ ಮಹಿಳಾ ಸಂಘಟನೆಗಳು ಮಾತ್ರ ಹೋರಾಡಬೇಕೆ? ಇದು ಪುರುಷರಿಗೂ ಸಂಬಂಧಪಟ್ಟಿಲ್ಲವೆ? ಸ್ವಸ್ಥ ಸಮಾಜ ಮಹಿಳೆಯರಿಂದ ಮಾತ್ರವೇ ನಿರ್ಮಾಣವಾಗಲು ಸಾಧ್ಯವೆ? ಈ ಪ್ರಶ್ನೆಗೆ ನನ್ನ ಉತ್ತರ: 'ಇಲ್ಲ, ಆಗುವುದಿಲ್ಲ' ಎಂಬುದು. ಎಲ್ಲಿಯವರೆಗೆ ಈ ದೇಶದ ಶಾಸಕಾಂಗ, ಕಾರ್ಯಾಂಗ, ನ್ಯಾಯಾಂಗಗಳಲ್ಲಿ ಸಮ ಪ್ರಮಾಣದಲ್ಲಿ ಮಹಿಳೆ ಮತ್ತು ಪುರುಷರಿರುವುದಿಲ್ಲವೊ ಅಲ್ಲಿಯವರೆಗೆ ಇದೇ ರೀತಿ ಭಾಷಣ, ಚರ್ಚೆಗಳಲ್ಲಿಯೇ ಈ ವಿಷಯಗಳು ಪರ್ಯವಸಾನವಾಗುತ್ತವೆ. ಸಮಾಜ ತನ್ನ ಸಮತೋಲನ, ಸ್ವಾಸ್ಥ್ಯ ಕಳೆದುಕೊಳ್ಳುತ್ತ, ಅವನತಿಯತ್ತ ಅಧಃಪತನದತ್ತ ವೇಗದಿಂದ ಸಾಗುತ್ತಲೇ ಇರುತ್ತದೆ. ದುರಂತವನ್ನು ತಡೆಯುವ ಶಕ್ತಿ ಪುರುಷರಲ್ಲಾಗಲಿ, ಸ್ತ್ರೀಯರಲ್ಲಾಗಲಿ ಸಾಧ್ಯ ಆಗದಂಥ ಘೋರ ಸ್ಥಿತಿ ನಿರ್ಮಾಣವಾಗುವ ಕಾಲ ದೂರವಿಲ್ಲ. ಜಾಗೃತರಾಗಿ ಹೋರಾಡದೆ ಕಾಯುತ್ತ ಕೂರುವುದಕ್ಕೆ ಇನ್ನು ಕಾಲಾವಕಾಶ ಉಳಿದಿಲ್ಲ.

ಈ ದೇಶದ, ಸಮಾಜದ ಸಮಸ್ಯೆ ನನ್ನದು ಎಂದು ಪ್ರತಿಯೊಬ್ಬ ಪ್ರಜೆಗೂ ಅನ್ನಿಸದ ಹೊರತು ಯಾವುದೇ ಬದಲಾವಣೆ ಸಾಧ್ಯವಿಲ್ಲ. ೧೯ನೇ ಶತಮಾನದಿಂದ ಅನೇಕ ಸುಧಾರಣಾವಾದಿಗಳು (ಎಲ್ಲರೂ ಪುರುಷರೇ) ಸತಿಯಂಥ ಪದ್ಧತಿಗೆ ಮಂಗಳ ಹಾಡಿದರು. ಬಾಲ್ಯ ವಿವಾಹದ ವಿರುದ್ಧ ಜಾಗೃತಿ ಮೂಡಿಸಿದರು. ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಿದರು. ಬಹುಪತ್ನಿತ್ವ ವಿರೋಧಿಸಿದರು. ಕನ್ಯಾಶಾಲೆಗಳನ್ನು ತೆರೆದು ಹೆಣ್ಣು

ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದರು. ಅಂತೆಯೇ ನಾವಿಂದು ಅವರಷ್ಟು ದೊಡ್ಡ ಕೆಲಸ ಮಾಡಲಾಗದಿದ್ದರೂ 'ನನ್ನ' ಎಂಬ ಪದವನ್ನು ಬಿಟ್ಟು 'ನಮ್ಮ' ಎಂದು ಯೋಚಿಸೋಣ. ಈ ವಿಷಯವನ್ನು ಮುಖ್ಯವಾಗಿಟ್ಟುಕೊಂಡು ಸಮಾಜದ ಚಿಕ್ಕ ಘಟಕವಾದ ಕುಟುಂಬದಲ್ಲಿ ಮೊದಲು ಬದಲಾವಣೆ ತರೋಣ. ಹೆಣಕ್ಕೆ ಬೆಂಕಿ ಹಚ್ಚುವುದಕ್ಕೆ, ತಿಥಿ ಮಾಡುವುದಕ್ಕೆ ಗಂಡು ಮಗನೇ ಬೇಕು ಎಂಬ ಮೂಢನಂಬಿಕೆ ಬಿಟ್ಟುಬಿಡಬೇಕು. ಮೂರು-ನಾಲ್ಕು ಹೆಣ್ಣಾದವು ಎಂದು ಗಂಡು ಮಗುವಿಗಾಗಿ ಮರಳಿ ಯತ್ನವನ್ನು ಮಾಡುವುದು ಬೇಡ. ಅದಕ್ಕಿಂತ ಜೀವಂತವಿರುವಾಗ ಸುಖ ಸಂತೋಷ ನೆಮ್ಮದಿಯಿಂದ ಇರುವುದು ಮುಖ್ಯ. ಅದು ನಮ್ಮ ಕೈಯಲ್ಲೇ ಇದೆ. ಸರಕಾರದ ಕುಟುಂಬ ಕಲ್ಯಾಣ ಇಲಾಖೆ 'ನಾವಿಬ್ಬರು, ನಮಗೊಂದು ಮಗು' ಎಂದು ಹೇಳಿದೆ. ನಮ್ಮ ಸಮಾಜದ ಐಕ್ಯಕ್ಕಾಗಿ, ಸ್ವಾಸ್ಥ್ಯಕ್ಕಾಗಿ, ಜನಗಳ ಹಿತಕ್ಕಾಗಿ ಗಂಡು ಹೆಣ್ಣು ಎಂಬ ಭೇದವಿಲ್ಲದೆ ನಾವೆಲ್ಲ ದುಡಿಯೋಣ.

ವಿವೇಕ, ಧೈರ್ಯ, ಆತ್ಮವಿಶ್ವಾಸಗಳನ್ನು ಕಳೆದುಕೊಂಡ ಯಾವ ಸಮಾಜವೂ, ಯಾವ ಜನಾಂಗವೂ ಉದ್ಧಾರವಾದ, ಆತ್ಮಗೌರವದಿಂದ ತಲೆಎತ್ತಿ ಬಾಳಿದ ಉದಾಹರಣೆ ಚರಿತ್ರೆಯಲ್ಲಿ ಇಲ್ಲ. ಹಿಂದೆ ಸ್ವಾತಂತ್ರ್ಯ ಹೋರಾಟಕ್ಕೆ ಧುಮುಕಿದ ನಮ್ಮ ನಾಡಿನ ವೀರರ ಚರಿತ್ರೆಯನ್ನು ಮತ್ತೆ ನೆನಪಿಗೆ ತಂದುಕೊಳ್ಳೋಣ. ನಮ್ಮ ಚರಿತ್ರೆ ಎಂಥದಾಗಬೇಕು ಎಂಬುದನ್ನು ಪುರುಷರೂ ಸ್ತ್ರೀಯರೂ ಬೇರೆ ಬೇರೆ ಎಂದು ಯೋಚಿಸದೆ ಜೊತೆಗೂಡಿಯೇ ಚಿಂತಿಸಿ, ತೀರ್ಮಾನಿಸಿ ಕಾರ್ಯಪ್ರವೃತ್ತರಾಗಿ ನಾಗರಿಕತೆ ಪತನಮುಖಿಯಾಗದಂತೆ ಉಳಿಸಿಕೊಳ್ಳಬೇಕಾದ ದೊಡ್ಡ ಜವಾಬ್ದಾರಿ ನಮ್ಮ ಮೇಲಿದೆ.

ಮೈಸೂರು **ಮೀರಾ ನಾಯಕ**

### ಮಾಧ್ಯಮಗಳು ಬುಡಕಟ್ಟು ಜನಾಂಗದ ರಕ್ಷಣೆಗೆ ಶ್ರಮಿಸಲಿ

ಆದಿವಾಸಿಗಳು ಇಂದು ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಆದಿವಾಸಿಗಳನ್ನು ಮುಖ್ಯವಾಹಿನಿಗೆ ತರಲು ರಾಜಕೀಯ ಇಚ್ಛಾಶಕ್ತಿಯನ್ನು ಬೆಳೆಸುವ ಮತ್ತು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಇಂದಿನ ಎಲ್ಲಾ ಮಾಧ್ಯಮಗಳು ಅವರ ಏಳಿಗೆಗಾಗಿ ಶ್ರಮಿಸಬೇಕಾಗಿದೆ. ಈ ನಿಟ್ಟಿನಲ್ಲಿ ಆದಿವಾಸಿ ಬುಡಕಟ್ಟು ಜನರು ವಾಸಿಸುವ ಕಡೆ ಹೋಗಿ ಅವರ ಬದುಕು ಬವಣೆಗಳನ್ನು ಚಿತ್ರಿಸುವುದರ ಜೊತೆಗೆ ನಾಡಿನ ಸರ್ವತೋಮುಖ ಕಾರ್ಯಕ್ರಮಗಳಲ್ಲಿ ಭಾಗವಹಿಸುವಂತೆ ಪ್ರೇರೇಪಿಸಬೇಕು.

ರಂಗಾಯಣದ ಬಹುರೂಪಿ ಉತ್ಸವದಲ್ಲಿ ಶ್ರೀರಂಗ ಮಂದಿರದಲ್ಲಿ ಚಲನಚಿತ್ರೋತ್ಸವ ಉದ್ಘಾಟನಾ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿ ಮಾತನಾಡಿದ ಮೈಸೂರು ವಿಶ್ವವಿದ್ಯಾನಿಲಯದ ರಾಜ್ಯಶಾಸ್ತ್ರ ವಿಭಾಗದ ಅಧ್ಯಕ್ಷ ಪ್ರೊ|| ಮುಜಾಫರ್ ಅಸ್ಸಾದಿಯವರ ಅಭಿಪ್ರಾಯದಂತೆ ದೇಶಾದ್ಯಂತ ಮೂರು ಕೋಟಿಗೂ ಹೆಚ್ಚು ಬುಡಕಟ್ಟು ಜನಾಂಗದ ಜನರು ಚದುರಿಹೋಗಿದ್ದಾರೆ. ಅವರೆಲ್ಲರನ್ನೂ ಒಗ್ಗೂಡಿಸುವ ಕಾರ್ಯವನ್ನು ಮಾಧ್ಯಮಗಳು ಮಾಡಬೇಕಾಗಿದೆ. ಸಂಪರ್ಕ ಮಾಧ್ಯಮಗಳಲ್ಲೆಲ್ಲಾ ಇಂದು ಸಿನಿಮಾ ಒಂದು ಭಾರೀ ಪರಿಣಾಮಕಾರಿಯಾಗಿದೆ. ಸಿನಿಮಾ ನೋಡುವುದು ಇಂದು ಜನರ ಅವಿಭಾಜ್ಯ ಅಂಗವೇ ಆಗಿದೆ ಎನ್ನುವಷ್ಟು ಸಿನಿಮಾವೂ ಜನರ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದಾಗಿದೆ. ರಾಜ್ಯಾದ್ಯಂತ ಆದಿವಾಸಿ ಬುಡಕಟ್ಟು ಜನರ ಕಲ್ಯಾಣದ ಬಗ್ಗೆ ಹಲವಾರು ರಾಜ್ಯಮಟ್ಟದ ಸಮ್ಮೇಳನಗಳು ಮತ್ತು ಗೋಷ್ಠಿಗಳು ಇಂದು ಜರುಗುತ್ತಿರುವುದನ್ನು ಕಾಣುತ್ತಿದ್ದೇವೆ. ಆದರೂ ಸಹ ಇಂದು ಆದಿವಾಸಿಗಳು ನರಕಯಾತನೆ ಬದುಕು ಸವೆಸುತ್ತಿದ್ದಾರೆ. ವಿಪರ್ಯಾಸದ ಸಂಗತಿ ಎಂದರೆ ನಾಗರಿಕ ಜನರಲ್ಲಿ ಬುಡಕಟ್ಟಿನ ಜನಾಂಗದವರ ಬಗ್ಗೆ ಸರಿಯಾದ ಮಾಹಿತಿಯೂ ದೊರೆತಿಲ್ಲವಾದ್ದರಿಂದ ಅವರೆಡೆಗೆ ಬಹಳ ತಿರಸ್ಕೃತ ಹಾಗೂ ತಾತ್ಸಾರ ಭಾವನೆಯನ್ನು ಬೆಳೆಸಿಕೊಂಡಿರುವುದನ್ನು ನಾವು ಇಂದು ಕಾಣಬಹುದು. ಹಾಗೇ ಮತ್ತೆ ಕೆಲವರ ಅಭಿಪ್ರಾಯದಲ್ಲಿ ಅವರು ಒರಟರು, ಕಾಡುಮೃಗ ಗಳಂತೆ ಜೀವನ ನಡೆಸುತ್ತಿರುವವರು ಎಂಬುವುದರ ಜೊತೆಗೆ ನಾಗರಿಕರಂತೆ ಅವರಿಗೆ ಜೀವನ ನಡೆಸಲು ಬರುವುದಿಲ್ಲ, ಅವರು ನಮ್ಮಂತೆ ನಾಗರಿಕರಾಗಿ ಬದುಕಲು ಸಾಧ್ಯವೇ ಇಲ್ಲ, ಅವರು ಕಾಡುಮೃಗಗಳಂತೆ ಗೆಡ್ಡೆಗೆಣಸು ತಿಂದು ಬದುಕಲು ಲಾಯಕ್ಕು – ಎಂಬ ಅವಹೇಳನಕಾರಿ ಭಾವನೆಯೂ ಸಹ ನಾಗರಿಕ ಜನರಲ್ಲಿ ಮೂಡಿದೆ. ಅದನ್ನೆಲ್ಲಾ ತೊಡೆದು ಹಾಕಬೇಕೆಂದರೆ ಮಾಧ್ಯಮಗಳು ಬುಡಕಟ್ಟು ಜನಾಂಗದವರಿಗಾಗಿ ಶ್ರಮಿಸಬೇಕಾಗಿದೆ.

ಸಿನಿಮಾಗಳಲ್ಲಿ ಬುಡಕಟ್ಟು ಜನಾಂಗದವರ ಜನಜೀವನವನ್ನು ಬಿಂಬಿಸುವ, ಅವರ ಅಗತ್ಯ ಮತ್ತು ಅನಗತ್ಯಗಳ ಬಗ್ಗೆ ತಿಳಿಸುವ ಚಿತ್ರಗಳನ್ನು ತೆಗೆಯಬೇಕಾಗಿದೆ. ಅವರಲ್ಲಿ ಎಷ್ಟು ಪಂಗಡಗಳಿವೆ. ಅವರ ವೇಷಭೂಷಣ, ಅವರ ಆಹಾರ ಪದ್ಧತಿ, ಅವರ ಸಾಂಸ್ಕೃತಿಕ ಜೀವನ, ಅವರ ಆರ್ಥಿಕ ಜೀವನ ಈ ರೀತಿ ಅವರ ಸಂಪೂರ್ಣ ಜೀವನ ಶೈಲಿಯ ಚಿತ್ರಣವನ್ನು ನಾಗರಿಕ ಜನರಿಗೆ ಸಿನಿಮಾವೂ ಉತ್ತಮವಾದ ಬುಡಕಟ್ಟಿನ ಜನಾಂಗಕ್ಕೆ ಸಂಬಂಧಿಸಿದ ಚಿತ್ರಗಳನ್ನು ತೆಗೆಯುವುದರ ಮೂಲಕ ತಿಳಿಸಿಕೊಡಬೇಕಾಗಿದೆ. ಅದರೊಂದಿಗೆ ಬುಡಕಟ್ಟು ಸಂಸ್ಕೃತಿಯ ಜನರ ಜೀವನ ಯಾವುದೇ ನಾಗರಿಕ ಜೀವನಕ್ಕಿಂತ ಕಡಿಮೆಯೇನೂ ಇಲ್ಲ ಎಂಬುದನ್ನು ಜನರಿಗೆ ಮನದಟ್ಟಾಗುವಂತೆ ಸಿನಿಮಾದಲ್ಲಿ ಬಿಂಬಿಸಬೇಕಾಗಿದೆ. ಹಾಗೇ ಬುಡಕಟ್ಟು ಸಂಸ್ಕೃತಿಯ ವಸ್ತುಸ್ಥಿತಿಯನ್ನು ತೋರಿಸುವ ಉತ್ತಮ ಚಿತ್ರದ ಕೊರತೆಯನ್ನು ಸಿನಿಮಾ ಪೂರೈಸಬೇಕು.

ನಮ್ಮ ನಾಡಿನ ಕಲೆ, ಸಂಸ್ಕೃತಿ ಇಂದು ವೇದಿಕೆಯಲ್ಲಿ ರಾರಾಜಿಸುತ್ತಿವೆ ಎಂದರೆ ಇಂದಿನ ಆದಿವಾಸಿಗಳೇ ಮೂಲ ರೂವಾರಿಯಾಗಿದ್ದಾರೆ. ಪರಂಪರೆಯಾಗಿ ಬೆಳೆದು ಬಂದ ವೈಚಾರಿಕತೆಯನ್ನು ಮುನ್ನಡೆಸುವ ಬುಡಕಟ್ಟು ಜನರ ಅಭಿವೃದ್ಧಿಯಾಗುವುದರ ಜೊತೆಗೆ ಅವರ ಮೇಲಿನ ಕೀಳರಿಮೆ ಮನೋಭಾವನೆಗಳನ್ನು ತೊರೆಯಬೇಕಾಗಿದೆ. ಅವರಲ್ಲಿ ಒಗ್ಗಟ್ಟಿನ ಅರಿವು ಮೂಡಿಸಿ ಹೋರಾಟದ ಹಾದಿಯಲ್ಲಿ ಪಾಲ್ಗೊಳ್ಳುವಂತೆ ಎಚ್ಚರಿಸಬೇಕಾಗಿದೆ. ಬುಡಕಟ್ಟು ಜನರನ್ನು ಮುಖ್ಯವಾಹಿನಿಗೆ ತರಲು ಹೆಚ್ಚಾಗಿ ಮಾಧ್ಯಮಗಳು ಸರ್ಕಾರದ ಗಮನಕ್ಕೆ ತರುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಬೇಕು.

ಮೈಸೂರು **ಸಂಗೀತ ಲೆವಿಸ್**

---

*ಸಂಪಾದಕೀಯ* *(೩ನೇ ಪುಟದಿಂದ)*

ಕೆಲವರನ್ನು ಕಿಚಾಯಿಸುತ್ತಾರೆ, ತಿಂಡಿ-ತೀರ್ಥವನ್ನು ಇತರರೊಡನೆ ಹಂಚಿಕೊಳ್ಳದಿದ್ದಾಗ ಮತ್ತು ಬೇರೆಯವರು ತಿನ್ನುವುದನ್ನು ನೋಡಿ ಕರುಬುವಾಗ. ಬುಷ್-ರೈಸ್ ಸಿದ್ಧಾಂತವು ಹೊಟ್ಟೆಕಿಚ್ಚಿನ ಪರಮಾವಧಿಯನ್ನು ಮುಟ್ಟಿದೆ. ಮಾನವ ಜನಾಂಗ ಎಚ್ಚರದಿಂದಿರಬೇಕು.

## ಟಿಬೆಟ್‌ಗೆ ಹಿಂದಿರುಗುವರೇ ?

**ಟಿ**ಬೆಟ್ಟಿನ ಜನರ ಬೇಡಿಕೆಗಳು ಮತ್ತು ಹಕ್ಕೊತ್ತಾಯಗಳು ಈಚೆಗೆ ಸಮಗ್ರವಾಗಿ ಪರಿಹಾರವಾಗಿವೆಯೆ ? ಇಲ್ಲವಾದಲ್ಲಿ, ಸುಮಾರು ಒಂದು ತಿಂಗಳ ಕಾಲ ಸುದ್ದಿಮಾಡಿದ್ದ ಚಟುವಟಿಕೆಗಳು ಈಗೇಕೆ ತಣ್ಣಗಾಗಿವೆ ? ದಲೈಲಾಮಾ ತನ್ನ ಅನುಯಾಯಿಗಳಿಗೆ ಗಲಭೆಗಳನ್ನು ನಿಲ್ಲಿಸಬೇಕೆಂದು ಆಣತಿ ನೀಡಿರಬಹುದೆ ? ಟಿಬೆಟ್ಟಿನಲ್ಲಿ ಬಡತನ, ಅನಕ್ಷರತೆ ಮುಂತಾದುವೆಲ್ಲಾ ಹೇರಳವಾಗಿವೆ. ಪಿಥೋರಾಗಢದ ಕಡೆಯಿಂದಲಾಗಲಿ, ಕಠ್ಮಂಡು ಕಡೆಯಿಂದಾಗಲಿ ಕೈಲಾಸ-ಮಾನಸ ಸರೋವರಗಳಿಗೆ ಹೋಗಿಬಂದಿರುವವರಿಗೆ ಅದರ ಪ್ರತ್ಯಕ್ಷ ದರ್ಶನವಾಗಿರುತ್ತದೆ. ಬಡತನವನ್ನು ಮಾನವ ಹಕ್ಕುಗಳ ನಿರಾಕರಣೆಯೆಂದು ಭಾವಿಸುವುದರಲ್ಲಿ ಯಾವ ತಪ್ಪೂ ಇಲ್ಲ. ಟಿಬೆಟ್ಟಿನಿಂದ ದಲೈಲಾಮಾ ಜೊತೆ ಭಾರತಕ್ಕೆ ಬಂದವರು ಅಲ್ಲಿಯೂ ಬಡವರಾಗಿರಲಿಲ್ಲ, ಇಲ್ಲಿಯೂ ಬಡವರಾಗಿಲ್ಲ. ಅಂತೆಯೇ, ಬೇರೆ ದೇಶಗಳಿಗೆ ಹೋಗಿರುವ ಟಿಬೆಟನ್ನರು ಸಹ ಬಡತನದಲ್ಲಿ ಬೆಂದುಹೋಗುತ್ತಿಲ್ಲ. ಆದ್ದರಿಂದ, ಅವರು ಟಿಬೆಟ್ಟಿನ ಜನರಿಗೆ ಮಾನವ ಹಕ್ಕುಗಳನ್ನು ನಿರಾಕರಿಸಲಾಗಿದೆಯೆಂದು ಆಪಾದಿಸುವಾಗ ಬಡತನ ಮುಂತಾದ ಪಿಡುಗುಗಳ ಬಗ್ಗೆ ವ್ಯಗ್ರರಾಗಿರುವುದಿಲ್ಲ. ಅವರ ರಾಜಕೀಯವೇ ಬೇರೆ. ದಲೈಲಾಮಾ ಟಿಬೆಟ್ಟಿಗೆ ಯಾವ ಹಕ್ಕುಗಳಿಗಾಗಿ ಆಗ್ರಹಿಸುತ್ತಾರೋ ಅವೆಲ್ಲಾ ಪೂರೈಸಿದರೂ ಭಾರತ ಮತ್ತು ಇತರ ದೇಶಗಳಲ್ಲಿ ನೆಲೆಸಿರುವ ಟಿಬೆಟನ್ನರು ಖಂಡಿತ ಟಿಬೆಟ್ಟಿಗೆ ಹಿಂದಿರುಗುವುದಿಲ್ಲ, ಈಗ ಟಿಬೆಟ್ಟಿನಲ್ಲಿರುವ ಸಾಮಾನ್ಯ ಜನ ಇವರನ್ನು ಸ್ವಾಗತಿಸುವುದೂ ಇಲ್ಲ. ನಮ್ಮ ದೇಶದ ''ಅನಿವಾಸಿ ಭಾರತೀಯ''ರಂತೆ ಇವರು ಸದಾ ಅನಿವಾಸಿ ಟಿಬೆಟನ್ನರಾಗಿರುತ್ತಾರೆ. ನಮ್ಮ ದೇಶದಲ್ಲಿ ಪ್ರಜಾಪ್ರಭುತ್ವ ಎಷ್ಟೇ ಸೊಗಸಾಗಿ ವಿಕಸಿಸಿದರೂ 'ಅನಿವಾಸಿಗಳು' ಅದನ್ನು ದೂರದಿಂದಲೇ ಸವಿಯುತ್ತಾರೆ, ಅದರಲ್ಲಿ ಪಾಲ್ಗೊಳ್ಳಲು ಬರುವುದಿಲ್ಲ. ಷಾಂಘೈನಲ್ಲಿ ನೆಲೆಸಿರುವ ಟಿಬೆಟನ್ನರು ಎಂದೋ ಒಂದು ದಿನ ಲಾಸಾಕ್ಕೆ ಹಿಂದಿರುಗಬಹುದು, ಆದರೆ ಧರ್ಮಶಾಲಾ ಮತ್ತು ಮೆಕ್ಲಾಡ್‌ಗಂಜಗಳಲ್ಲಿರುವ ದಲೈಲಾಮಾ ಪರಿವಾರ ಸದಾ ಅಲ್ಲೇ ಇರಬಯಸುತ್ತಾರೆ. ಇದರ ಸೂಕ್ಷ್ಮಗಳೇನಿರಬಹುದೆಂಬುದು ಚಿಂತನಾಯೋಗ್ಯವಾಗಿದೆ.

ಈ ತಿಂಗಳು (೩ನೇ ಪುಟದಿಂದ)

ಘೋಷಿಸಿಕೊಳ್ಳಲು ಅನುಸರಿಸಿದ ಈ ಅಕ್ರಮವನ್ನು ಚುನಾವಣಾ ಆಯೋಗವು ಗಮನಿಸಿದೆಯೇ ಮತ್ತು ಗಮನಿಸಿದ್ದರೆ ಏನು ಮಾಡುತ್ತದೆ ? ಇದೊಂದು ಚಿಕ್ಕ ಉದಾಹರಣೆ ಅಷ್ಟೆ. ಮತ ಧಾರ್ಮಿಕ ಜಡ್ಡುತನದ ಪ್ರತಿಪಾದಕರು ಎಲ್ಲ ಮತ ಕ್ಷೇತ್ರಗಳಲ್ಲೂ ಬೇರೆ ಬೇರೆ ರೀತಿಯ ಅಕ್ರಮಗಳಲ್ಲಿ ತೊಡಗಿದ್ದುದು ವರದಿಯಾಗಿದೆ. ರಾಮ-ರಾವಣ, ಕೌರವ-ಪಾಂಡವ, ಹರಿಶ್ಚಂದ್ರ-ನಕ್ಷತ್ರಿಕ ಹೀಗೆ ಎಲ್ಲರೂ ಚುನಾವಣೆಯ ಭಾಷಣಗಳಲ್ಲಿ ಬಂದು ಹೋಗುತ್ತಾರೆ. ಅದನ್ನು ತಡೆಗಟ್ಟುವ ಚುನಾವಣಾ ಆಯೋಗವು ದೊಡ್ಡ ಅಕ್ರಮಗಳನ್ನು ತಡೆಯಲು ಇನ್ನೂ ಸಜ್ಜಾಗಿಲ್ಲ, ಸಮರ್ಥವಾಗಿಲ್ಲ.

* * *

ಕಾಂಗ್ರೆಸ್‌ಗೆ ಚುನಾವಣೆಯಲ್ಲಿ ನಿಚ್ಚಳ ಬಹುಮತ ದೊರೆಯುವುದಿಲ್ಲವೆಂದು ಹೇಳುತ್ತಾರೆ. ಅದು ಸುಳ್ಳಾದರೆ ಕಾಂಗ್ರೆಸ್ ಪಾಳೆಯದಲ್ಲಿ ಎಷ್ಟೊಂದು ಮಂದಿ 'ಹೀರೋಗಳು' ತಮ್ಮಿಂದಾಗಿಯೇ ಬಹುಮತ ದೊರೆಯಿತೆಂದು ಕೊಚ್ಚಿಕೊಳ್ಳಬಹುದು ಮತ್ತು ಕಚ್ಚಾಡಬಹುದು ! ಕೃಷ್ಣ, ಖರ್ಗೆ, ರಾಹುಲ್, ಸಿದ್ಧರಾಮಯ್ಯ, ಸೋನಿಯಾ, ಮನಮೋಹನ್, ಹೀಗೆ ಉದ್ದದ ಪಟ್ಟಿ ಇದೆ. ಮುಖ್ಯಮಂತ್ರಿಯಾಗಲೆಂದೇ ಮುಂಬೈಯಿಂದ ಧಾವಿಸಿ ಬಂದಿರುವ ಕೃಷ್ಣ ತಮ್ಮನ್ನು ಅಂಡಮಾನಿಗೆ ಕಳುಹಿಸಲಾಗುವುದಿಲ್ಲವೆಂಬ ಭರವಸೆ ಇಟ್ಟುಕೊಂಡಿದ್ದಾರೆ. ಇನ್ನೊಮ್ಮೆ ಮುಖ್ಯಮಂತ್ರಿಯ ಮನೆಗೆ ವಾಸ್ತುಪುರುಷನ ದರ್ಶನ ಮಾಡಿಸಬಹುದು; ಇಲ್ಲವೇ, ಪುರೋಹಿತರ ದಂಡನ್ನು ತಂದು ವಿಧಾನಸೌಧದಲ್ಲಿ ಅಗ್ನಿಯ ಆವಾಹನೆ ಮಾಡಲು ಮಾನ್ಯ ಯಡಿಯೂರಪ್ಪನವರಿಗೆ ಅವಕಾಶ ನೀಡಬಹುದು. ಏನೇ ಇರಲಿ, ಅವರು ಬೆಂಗಳೂರನ್ನು ತಮ್ಮ ಪಾದಸ್ಪರ್ಶದಿಂದ ಪಾವನ ಮಾಡಿದ ಶ್ರೀ ಎಸ್. ಎಂ. ಕೃಷ್ಣ ಮೊಟ್ಟಮೊದಲಿಗೆ ತಮ್ಮ ಬೆಂಬಲ ಸೂಚಿಸಿದ್ದು 'ನೈಸ್' ಖೇನಿಗೆ ಮತ್ತು ದೇವನಹಳ್ಳಿ ವಿಮಾನ ನಿಲ್ದಾಣದ ಕಂಟ್ರಾಕ್ಟರಿಗೆ. ಮೂವತ್ತು ಸಾವಿರ ಕೋಟಿ ರೂಪಾಯಿ ಬೆಲೆಯ ೨೭೦೦ ಎಕರೆ ಭೂಮಿಯನ್ನು ಅಕ್ರಮವಾಗಿ ಪಡೆಯುವ ಕಂಪನಿ ಬಗ್ಗೆ ಕೃಷ್ಣ ಅವರಿಗೆ ವಿಪರೀತ ಅನುಕಂಪ; ಏಕೆಂದರೆ, ಆ ಅಕ್ರಮ ಭೂಕಬಳಿಕೆ ಇಲ್ಲದಿದ್ದರೆ ಬೆಂಗಳೂರು ಸಿಂಗಪುರವಾಗದೆ ಕೇವಲ ಕೃಷಿಪುರವಾಗಿಬಿಡುತ್ತದೆ ! ರಾಜ್ಯಪಾಲರು ಚುನಾವಣಾ ಸಂದರ್ಭದಲ್ಲಿ ತರಾತುರಿಯಲ್ಲಿ 'ನೈಸ್' ಪರವಾದ ಆಜ್ಞೆ ಹೊರಡಿಸಿದ್ದುದರ ಹಿನ್ನೆಲೆಯಲ್ಲಿ ಯಾವೆಲ್ಲಾ ಕೈಗಳು ಕೆಲಸ ಮಾಡಿದ್ದುವೆಂಬುದನ್ನು ಸಂಶೋಧಿಸಿ ತಿಳಿವಳಿಕೆ ನೀಡಲು ನಮ್ಮ ಮಾಧ್ಯಮಗಳು ಶ್ರಮಿಸಲೆಂದು ಆಶಿಸಬೇಕಾಗಿದೆ.

* * *

'ಪೋಟೋ' ಕಾಯಿದೆಯೊಂದಿದ್ದರೆ ಎಲ್ಲ ಭಯೋತ್ಪಾದಕರನ್ನೂ ಹತೋಟಿಯಲ್ಲಿಟ್ಟುಕೊಳ್ಳಬಹುದೆಂಬ ಮಿಥ್ಯಾವಾದವನ್ನು ಉಗ್ರವಾಗಿ ಪ್ರತಿಪಾದಿಸಿರುವ ಭಾರತೀಯ ಜನತಾ ಪಕ್ಷದ ಆಳ್ವಿಕೆಯಲ್ಲಿರುವ ರಾಜಸ್ಥಾನದಲ್ಲಿ ಹತ್ತಾರು ಜನರು ಹತರಾಗುವಂತೆ ಜಡ್ಡು ಮತಾಂಧತೆಯಿಂದ ಪ್ರೇರಿತರಾದ ಮತ್ತು ಬಹುಮಟ್ಟಿಗೆ ನಮ್ಮ ನೆರೆ ರಾಜ್ಯಗಳಿಂದ ಬೆಂಬಲಿತರಾದ ಕೆಲವು ಉಗ್ರರು ಜೈಪುರದಲ್ಲಿ ಬಾಂಬುಗಳನ್ನು ಸಿಡಿಸಿದ್ದಾರೆ. ಇಂತಹ ಖಂಡನೀಯ ದುಷ್ಕೃತ್ಯಗಳಿಂದ ಯಾವ ಮತಧರ್ಮದವರೂ ಉದ್ಧಾರವಾಗುವುದಿಲ್ಲ. ಅಂತೆಯೇ, ಅವರನ್ನು ಖಂಡಿಸುವುದರಿಂದಷ್ಟೇ ಸಮಸ್ಯೆಗೆ ಪರಿಹಾರವೂ ದೊರಕುವುದಿಲ್ಲ. ಇದೊಂದು ಸರಪಳಿ ಕ್ರಿಯೆಯ ಭಾಗ : ಮೊದಲು ಹೊಡೆದವರು ಯಾರೆಂದು ನಿರಂತರವಾಗಿ ವ್ಯರ್ಥ ಚರ್ಚೆ ನಡೆಸುತ್ತಲೇ ಇರಬಹುದಾದಂತಹ ಪ್ರಸಂಗ. ರಾಜಕೀಯ ಕಾರಣಗಳಲ್ಲದೆ ಜಡ್ಡು ಮತೀಯ ದುರಭಿಮಾನ ಮತ್ತು ದರ್ಪ ಸಹ ಇಲ್ಲಿ ಕೆಲಸ ಮಾಡುತ್ತಿವೆ. ಮಸೀದಿ-ಮಂದಿರ ಎಂಬ ಪ್ರಶ್ನೆ ಉದ್ಭವಿಸಿದ ಮೇಲಂತೂ ಉಗ್ರಗಾಮಿ ದುಷ್ಕೃತ್ಯಗಳಿಗೆ ಕಾರ್ಯ-ಕಾರಣ ಸಂಬಂಧ ಗುರುತಿಸುವುದೇ ದುಷ್ಕರವಾಗಿದೆ. ಒಂದು ಬೃಹತ್ ದೇಶದಲ್ಲಿ ಎಷ್ಟು ಮೂಲೆಗಳನ್ನು ಸಂರಕ್ಷಿಸಲು ತಾನೆ ಸಾಧ್ಯ ! ಒಡನಾಟ, ಸಮಾನತೆ, ಸಹನೆ ಮುಂತಾದ ಲಕ್ಷಣಗಳು ಜನರ ಮನಸ್ಸನ್ನು ತುಂಬುವಂತಾಗುವ ಕ್ರಮಗಳು ಮುಖ್ಯವೇ ವಿನಾ ಬಂದೂಕದಿಂದ ಎಲ್ಲವನ್ನೂ ನಿಯಂತ್ರಿಸಲಾಗುವುದಿಲ್ಲ. ಒಮ್ಮೊಮ್ಮೆ ಒಂದೊಂದು ರಾಜಕೀಯ ಪಕ್ಷವನ್ನು ಉಗ್ರರ ಸಮರ್ಥಕರೆಂದು ಜರಿಯುತ್ತಾ ಕಾಲಹರಣ ಮಾಡುವುದು ಮೃತರ ಬಗ್ಗೆ ನಮ್ಮ ಸಾಂತ್ವನದ ದ್ಯೋತಕವಾಗುವುದಿಲ್ಲ. ಎಷ್ಟೆಲ್ಲಾ ಕಾನೂನುಗಳಿದ್ದರೂ ಕೊಲೆ-ಸುಲಿಗೆ ನಡೆಯುತ್ತಿಲ್ಲವೇ ? (ಗಣಿಗಾರಿಕೆ ಮತ್ತು ಭೂಕಬಳಿಕೆ ಸಹ ಕೊಲೆಗಳಿಗೆ ನೆಲೆ ಒದಗಿಸಿವೆ). ಪರಾಧೀನತೆಯನ್ನು ಹೇರುವ ಮನೋಭಾವವನ್ನು ಬಿಟ್ಟುಕೊಟ್ಟರೆ ಮುಂದಿನ ಹೆಜ್ಜೆಗಳು ಸಾಧ್ಯವಾಗುವುದು ಖಚಿತ. ಉಗ್ರರ ಹತ್ತಿಗೆ ಇನ್ನಾರೂ ಬಲಿಯಾಗಕೂಡದು ಎಂಬ ಧೋರಣೆಗೆ ಬಲ ಬರುವುದು ಸಾಮಾಜಿಕ-ಸಾಂಸ್ಕೃತಿಕ ಜೀವನವನ್ನು ಸಮತಲದಲ್ಲಿರಿಸಿದಾಗ. ಅಲ್ಲಿಯವರೆಗೆ ವಸುಂಧರಾ, ಅಡ್ವಾನಿ ಮತ್ತು ಮನಮೋಹನ ಸಿಂಗ್, ಸೋನಿಯಾ ಕನಿಕರದ ಹೇಳಿಕೆಗಳನ್ನು ನೀಡಬಹುದು, ಪರಸ್ಪರರನ್ನು ದೂಷಿಸಬಹುದು. ಮೃತರಿಗೆ ಮತ್ತು ಅವರ ಕುಟುಂಬಗಳವರಿಗೆ ಹಾಗೂ ನಾಗರಿಕ ಸಮಾಜಕ್ಕೆ ಈ ಮಾತುಗಳು ವಿಕಟ ಸ್ವರೂಪದವಾಗಿ ಕಾಣುತ್ತಿರುತ್ತವೆ. ಶವಗಳ ಮೇಲಿನ ಮೋಹಿನಿ ನೃತ್ಯವು ಅಸಹ್ಯಕರವೆಂದು ಈಗಲಾದರೂ ಅಡ್ವಾನಿ-ಸೋನಿಯಾ ಮತ್ತವರ ಸಹಚರರು ತಿಳಿಯಬೇಕು.

* * *

ಬರ್ಮಾ ಅಥವಾ ಮಾಯನ್ಮಾರ್‌ನಲ್ಲಿ ಭೀಕರ ಸಾವು-ನೋವುಗಳು ಸಂಭವಿಸಿವೆ. ಆ ಹಿನ್ನೆಲೆಯಲ್ಲಿ ನೆರವು ನೀಡುವ ರಾಜಕೀಯವು ತನ್ನ ಬೀಭತ್ಸತೆಯನ್ನು ತೋರ್ಪಡಿಸಿದೆ. ನೆರವಿನ ಸಾಮಗ್ರಿಯನ್ನು ಸಂತ್ರಸ್ತರಿಗೆ ತಲುಪಿಸಲು ತನ್ನ ಗುಪ್ತಚರರನ್ನು ''ವಿಶೇಷ ಪರಿಣತಿ ಪಡೆದವರು'' ಎಂಬ ಹೆಸರಿನಲ್ಲಿ ಒಳನುಗ್ಗಿಸುವ ಉದ್ದೇಶ ಅಮೆರಿಕಾದ್ದು. ಜನರ ಕಷ್ಟ ಏನೇ ಇರಲಿ, ಅಮೆರಿಕಾದ ಬೇಹುಗಾರರಿಗೆ ಅವಕಾಶ ಕೂಡದೆಂಬುದು ಆಳುವ ಮಿಲಿಟರಿ ನಾಯಕರ ಅಭಿಪ್ರಾಯ. ಮತ್ತೊಮ್ಮೆ ''ಶವಗಳ ಮೇಲಿನ ನೃತ್ಯ'' ಎಂಬ ಹೀನಾಯವಾದ ನಡತೆಯೇ ! ಕಡೆಗೆ ನೆರವು ಸಾಮಗ್ರಿಯನ್ನು ಸರ್ಕಾರೇತರ ಸಂಸ್ಥೆಗಳಿಗೆ ನೀಡಲಾಗಿದೆಯೆಂದು ವರದಿಯಾಗಿದೆ. ಈ ''ಎನ್ ಜೀವಗಳು'' ಜನರ ಪರವೋ, ಮಿಲಿಟರಿ ಪರವೋ, ಅಮೆರಿಕಾ ಪರವೋ ಅಥವಾ ನಮ್ಮ ಹಲವು ''ಎನ್ ಜೀವ''ಗಳಂತೆ ಸ್ವ-ಹಿತ ಪರರೋ ತಿಳಿದವರಾರು ! ಪ್ರಪಂಚದಲ್ಲಿ ಸಂಪತ್ತಿದೆ, ಜ್ಞಾನವಿದೆ, ಸಂಪರ್ಕ ಸಾಧನಗಳಿವೆ. ವಿಶ್ವದ ಎಲ್ಲರಿಗೂ ಒಂದಷ್ಟು ಒಳ್ಳೆಯ ಜೀವನ ನೀಡಲು ಇವೆಲ್ಲಾ ಸಾಕು. ಆದರೆ ಅದನ್ನು ನೀಡಲಾಗುತ್ತಿಲ್ಲ. ದೊಡ್ಡಣ್ಣಗಳ ಉಸ್ತುವಾರಿಯಲ್ಲಿ ಜನರಿಗೆ ಸಿಗುವುದು ಬಾಂಬು, ವಿಷ ಮತ್ತು ಕ್ರೋಧ, ಅಷ್ಟೆ. ಈ ದೊಡ್ಡಣ್ಣಗಳಿಗೆಲ್ಲಾ ದೊಡ್ಡಣ್ಣನೆಂದರೆ ಅಮೆರಿಕಾದ ಪ್ರಭುತ್ವ. ಅದು ಹೇಳಿದಂತೆ ಕೇಳಿದ್ದರೆ ಮಾಯನ್ಮಾರ್‌ನ ಮಿಲಿಟರಿ ದಂಡನಾಯಕರು ಕೂಡ ಸುಸಂಸ್ಕೃತ ಪ್ರಜಾಪ್ರಭುತ್ವವಾದಿಗಳೆಂಬ ಹೆಗ್ಗಳಿಕೆಗೆ ಪಾತ್ರರಾಗಬಹುದಿತ್ತೇನೋ !

* * *

ಮಾಯನ್ಮಾರ್ ಅನುಭವಿಸಿದ ಪ್ರಕೃತಿ ವಿಕೋಪವನ್ನು ಮೀರಿಸುವ ವಿಕೋಪವನ್ನು ಚೀಣಾ ಅನುಭವಿಸಿದೆ. ಮಾನವನ ಜ್ಞಾನದ ಮಿತಿ ಮತ್ತು ಅಸಹಾಯಕತೆಗೆ ಭೂಕಂಪಗಳು ಒಂದು ನಿದರ್ಶನ ಹಾಗೂ ಸವಾಲು. ಪ್ರಕೃತಿ ವಿಕೋಪದಿಂದ ಉಂಟಾದ ಅನಾಹುತಕ್ಕೆ ಮಾನವ ಯಂತ್ರದ ಪರಿಣಾಮಕಾರಿ ಪ್ರತಿಕ್ರಿಯೆ ಹೇಗಿರಬೇಕೆಂಬುದಕ್ಕೆ ಚೀಣಾ ಒಂದು ದೃಷ್ಟಾಂತ ಒದಗಿಸಿದೆ. ''ಪ್ರಭುತ್ವದ ಕ್ರಿಯಾಶಾಲಿತ್ವ ಹಾಗಿರಬೇಕು'' ಎನ್ನುವಂತೆ ಚೀಣಾ ಸರ್ಕಾರ ಪರಿಹಾರ ಒದಗಿಸಲು ಶ್ರಮಿಸಿದೆ, ಇಡೀ ಜನತೆಯನ್ನು ಈ ಕೆಲಸದಲ್ಲಿ ಭಾಗಿಗಳನ್ನಾಗಿಸಿದೆ. ಸಾವು-ನೋವುಗಳ ಕಪ್ಪು ಛಾಯೆಯನ್ನು ಸ್ವಲ್ಪಮಟ್ಟಿಗಾದರೂ ತಡೆಯುವಂತಹ ವಿಧಾನ ಇದು.

* * *

ಮೇ ಮುಗಿದರೂ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪದವಿ ಪರೀಕ್ಷೆಗಳು ಇನ್ನೂ ಆರಂಭವಾಗಿಲ್ಲ. ವಿದ್ಯಾರ್ಥಿಗಳು ಕಂಗಾಲಾಗಿದ್ದಾರೆ. ಉನ್ನತ ಅಧ್ಯಯನಕ್ಕೆ ಬೇರೆಲ್ಲೂ ಹೋಗಲಾಗದ ಪರಿಸ್ಥಿತಿ ಇದು. ಕನಿಷ್ಠ ಒಂದು ವರ್ಷ ಅನಧ್ಯಯನ ! ವಿದ್ಯಾರ್ಥಿಗಳ ಭವಿಷ್ಯದ ಬಗ್ಗೆ ವಿಶ್ವವಿದ್ಯಾನಿಲಯಗಳು ಇಷ್ಟೊಂದು ನಿರಾಸಕ್ತಿ ತೋರಬಾರದು. ಹೀಗೆ ಬಲವಂತದ ಒಂದು ವರ್ಷದ ಅನಧ್ಯಯನದ ಅವಧಿಯನ್ನು ಮಾದರಿ ಪ್ರಾಧ್ಯಾಪಕ ಡಾ|| ಮೈಲಾರಪ್ಪನವರಂತೆ ವಿನಿಯೋಗಿಸಿಕೊಳ್ಳಬೇಕೆಂದು ವಿದ್ಯಾರ್ಥಿಗಳಿಗೆ ಇದು ಸೂಚನೆಯೇ ? ಅವರು ಕೆಲವು ಆಪಾದನೆಗಳಿಗೆ ಗುರಿಯಾಗಿ ಸದ್ಯಕ್ಕೆ ಕೆಲಸದಿಂದ ಮುಕ್ತರಾಗಿದ್ದಾರೆ. ಆದ್ದರಿಂದ ಭಾರತೀಯ ಜನತಾ ಪಕ್ಷದ ಅಭ್ಯರ್ಥಿಯಾಗಿ ಚುನಾವಣೆಗೆ ಇಳಿದರು. ಅಂತಹ ಶ್ರೇಷ್ಠ ಅಭ್ಯರ್ಥಿ ಸಿಕ್ಕಿದಾಗ ಭಾಜಪ ಹೇಗೆ ತಾನೇ ಟಿಕೇಟನ್ನು ನಿರಾಕರಿಸಲು ಸಾಧ್ಯ ! ಕೆಲವು ವಿದ್ಯಾರ್ಥಿ ನಾಯಕರ ಭವಿಷ್ಯವು ಪ್ರಕಾಶಮಾನವಾಗಿರಬಲ್ಲುದೆಂಬುದಕ್ಕೆ ಇದು ಪ್ರಚಂಡ ಸೂಚನೆ. ಜೈ ಭಾಜಪ !

* * *

ಡಾ|| ವೇಣುಗೋಪಾಲನೆಂಬ ಖಳ ವೈದ್ಯ ಮತ್ತು ಹಿಂದುಳಿದ ಪಂಗಡಗಳ ವಿದ್ಯಾರ್ಥಿಗಳ ಕಡುವೈರಿ ಮತ್ತೆ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯ ನಿರ್ದೇಶಕನಾಗಿ ಹಿಂದಿರುಗಿರುವುದು ನಮ್ಮ ದೇಶದಲ್ಲಿ ನ್ಯಾಯ ಹೇಗೆ ರಾರಾಜಿಸುತ್ತದೆ ಎಂಬುದಕ್ಕೆ ಒಂದು ಭೂತ ಕನ್ನಡಿ. ಜೊತೆಗೆ, ಹಿಂದುಳಿದ ಪಂಗಡಗಳ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಮೀಸಲಾತಿಯು ಸಂವಿಧಾನಬಾಹಿರವೆಂದು ಪಶ್ಚಿಮ ಬಂಗಾಲದ ಉಚ್ಚ ನ್ಯಾಯಾಲಯ ಸೂಚಿಸಿದೆ. ಸರ್ವೋಚ್ಚ ನ್ಯಾಯಾಲಯವು ಅದನ್ನು ತಿರಸ್ಕರಿಸಿದೆ.

ಈ ಸಂದರ್ಭದಲ್ಲಿ ಒಂದು ಗಹನವಾದ ಬೌದ್ಧಿಕ ಸಮಸ್ಯೆ ಉಂಟಾಗಿದೆ : ಸಂವಿಧಾನದ ಅರ್ಥವನ್ನು ಹೇಳುವವರು ನ್ಯಾಯಾಲಯಗಳ ನ್ಯಾಯಮೂರ್ತಿಗಳು. ನ್ಯಾಯಾಲಯದ ಜನ ವಿರೋಧಿ ತೀರ್ಪು ಏನಾದರೂ ಇದ್ದರೆ ಅದೂ ಕೂಡ ಸಂವಿಧಾನದ ನಿಜಾರ್ಥವೇ ಆಗಿರುತ್ತದೆ. ಆದ್ದರಿಂದ ಸಂವಿಧಾನವು ಜನವಿರೋಧಿ ಎಂಬ ಸಮೀಕರಣ ಅನಿವಾರ್ಯವಾಗುತ್ತದೆಯಲ್ಲವೆ ?

ಪದವಿ ಪೂರ್ವ ಪರೀಕ್ಷೆಯಲ್ಲಿ ವಿದ್ಯಾರ್ಥಿಗಳ ಉತ್ತರ ಪತ್ರಿಕೆಯ ತಪ್ಪು ಮೌಲ್ಯಮಾಪನ ಮಾಡಿದವರಿಗೆ ಶಿಕ್ಷೆಯುಂಟು. ಹಾಗಾದರೆ ಸಂವಿಧಾನಕ್ಕೆ ಅಪಾರ್ಥ ನೀಡಿದವರಿಗೆ ಶಿಕ್ಷೆ ಸಾಧುವಲ್ಲವೆ ?

ಹೀಗೊಂದು ಚರ್ಚೆ ಇತ್ತೀಚಿನ ಸಭೆಯೊಂದರಲ್ಲಿ ನಡೆಯುತ್ತಿದ್ದುದು ಕುತೂಹಲಕರವಾಗಿತ್ತು.

# ಚುನಾವಣೆ ಬಂತು - ಹೋಯ್ತು

ಚುನಾವಣಾ ಆಯೋಗವು ಇಡೀ ವರ್ಷ ಚುನಾವಣೆಯ ಪ್ರಕ್ರಿಯೆಯನ್ನು ನಡೆಸುತ್ತಲೇ ಇರುತ್ತದೆಂಬ ಭಾವನೆ ಬಂದು, ಆಮೇಲೆ ಸುಮಾರು ಮೂರು ತಿಂಗಳಲ್ಲೇ ಅದು ಮುಗಿದುಹೋದ್ದು ನಮ್ಮ ಬಸವನಗುಡಿ ಕ್ಷೇತ್ರದ ಪವಿತ್ರ ಮತದಾರ ಮಹಾಶಯನಿಗೆ ಬೇಸರ. ಬೇರೆ ಕ್ಷೇತ್ರಗಳವರಿಗೂ ಅದೇ ಅನುಭವ ಇರಬೇಕು. ಅವಕಾಶ ದೊರೆತರೆ ಸಾಕು, ನಮ್ಮ ಅಧಿಕಾರಿಗಳು ಒಂದು ಥರಾ ಸರ್ವಾಧಿಕಾರಿಗಳಾಗಿಬಿಡುತ್ತಾರೆ. ಪ್ರಭುತ್ವದ ಎಲ್ಲ ಅಂಗಗಳಿಗೂ ಇದು ಅನ್ವಯವಾಗುತ್ತದೆ. ರಸ್ತೆ ರಿಪೇರಿ ಕೂಡದು, ಸೀಮೆಯೆಣ್ಣೆ ಮಾರಬಾರದು, ತರಕಾರಿ ಬೆಲೆ ಇಳಿಸಬಾರದು, ಕುಡಿಯಲು ಹಾಲು ಕೊಡುತ್ತೇವೆಂದು ಹೇಳಕೂಡದು, ಬಸ್ಸುಗಳನ್ನು ಕಾಲಕಾಲಕ್ಕೆ ಓಡಿಸಬಾರದು, ಹೀಗೆ ಚುನಾವಣಾ ಆಯೋಗವು ತನ್ನ ಮೋಜಿನ ನಿಯಮಗಳನ್ನು ಜಾರಿಗೆ ತರುತ್ತದೆ. ಎಲ್ಲವೂ ಸರಿಯಾಗಿ ನಡೆದರೆ ಮತದಾರರಿಗೆ ಆಮಿಷ ಒಡ್ಡಿದಂತಾಗಿಬಿಡುತ್ತದಾದ್ದರಿಂದ ಎಲ್ಲವನ್ನೂ ಅಡ್ಡಾದಿಡ್ಡಿ ಮಾಡಬೇಕು. ಎಲ್ಲ ಮತದಾರರ ಹೆಸರುಗಳನ್ನೂ ಪಟ್ಟಿಗೆ ಸೇರಿಸಿದರೆ ಅದೂ ಅವರಿಗೆ ಪ್ರಲೋಭನೆ ಆದೀತೆಂಬ ಭಯದಿಂದ ಆಯೋಗವು ಒಂದಷ್ಟು ಲಕ್ಷ ಮತದಾರರನ್ನು ಪಟ್ಟಿಯ ಹೊರಗಿರಿಸುತ್ತದೆ. ವಸ್ತುನಿಷ್ಠ ನಡತೆಗೆ ಇದೊಂದು ದೊಡ್ಡ ಸಂಕೇತ. ಅಷ್ಟೂ ತಿಳಿಯದವರು ಸುಮ್ಮನೆ ದೂರುತ್ತಾರೆ!

ಈ ಬಾರಿ ಕರ್ನಾಟಕದ ಭಾಗ್ಯಕ್ಕೆ ಎಣೆಯಿಲ್ಲ. ಏಕೆಂದರೆ ಜನರ ''ಸೇವೆ'' ಮಾಡಲು ಬಹುಮಂದಿ ಕೋಟ್ಯಾಧೀಶ್ವರರು ಮತದಾರರ ಕಾಲಿಗೆರಗಿದ್ದಾರೆ. ಇಷ್ಟೊಂದು ದುಬಾರಿ ಜನಸೇವಕರನ್ನು ನೇಮಿಸಿಕೊಂಡರೆ ರಾಜ್ಯದ ನೆಮ್ಮದಿ ನೆಟ್ಟಗಾಗುತ್ತದೆಂಬ ಭೀತಿಯನ್ನು ನಮ್ಮ ಶ್ರೇಷ್ಠ ಮಾಧ್ಯಮಗಳು ಎಲ್ಲೂ ಗುರುತಿಸಿಲ್ಲ. ಆದ್ದರಿಂದ ಈ ಧನವರಾಹಗಳನ್ನು ಜನ ನಂಬಿದ್ದಾರೆಂದೇ ತೀರ್ಮಾನಿಸಬೇಕು. ''ಕೋಟಿ ಇರುವವರು ಅದನ್ನು ನೂರ್ಮಡಿ ಮಾಡಿಕೊಳ್ಳುವ ಪ್ರತಿಭೆ ಉಳ್ಳವರು'' ಎಂಬುದನ್ನು ಜನ ಮುಂದಿನ ಎರಡು-ಮೂರು ವರ್ಷಗಳಲ್ಲಿ ತಿಳಿದುಕೊಳ್ಳಬಹುದು! ದೊಡ್ಡ ಐ.ಎ.ಎಸ್. - ಐ.ಪಿ.ಎಸ್. ಅಧಿಕಾರಿಗಳು ಕೋಟಿ ಗುಳುಂ ಮಾಡುತ್ತಾರೆಂದರೆ ಅವರೂ ಅದನ್ನು ಯಾವುದೋ ಧನಿಕನಿಂದ ಪಡೆದಿರಬೇಕು. ಅವರು ಅದನ್ನು ಪಡೆದು ಯಾರಿಗೂ ಕಾನೂನುಬಾಹಿರವಾಗಿ ಸಹಾಯ ಮಾಡುವುದಿಲ್ಲವೆಂಬ ಐತಿಹ್ಯ ನಮ್ಮಲ್ಲಿ ಬಲವಾಗಿದೆ. ಅದೇನಿದ್ದರೂ ಹೆಂಡ-ಬಟ್ಟೆ-ಊಟ ಪಡೆಯುವ ಸಾಮಾನ್ಯರ ಲಕ್ಷಣ. ಏನನ್ನೋ ಪಡೆದು ಮತ ಕೊಟ್ಟುಬಿಡುತ್ತಾರೆ! ಅವರು ಐ.ಎ.ಎಸ್. ಧೀಮಂತರಂತೆ ಬುದ್ಧಿವಂತರಲ್ಲವಲ್ಲ, ಆದ್ದರಿಂದ ಅವರನ್ನು ನಂಬಲಾಗದು. ಹಾಗೆಂದು ಚುನಾವಣಾ ಆಯೋಗಕ್ಕೆ ದೈವ ಪ್ರೇರಣೆಯಾಗಿರಬೇಕು. ಆದ್ದರಿಂದಲೇ ಎಂತೆಂತಹದ್ದೋ ನಿಯಮಾವಳಿ ರೂಪಿಸುತ್ತಾರೆ. ನೈಸ್ ಕಂಪನಿಯ ಖೇಣಿಯಿಂದ ರಾಜ್ಯಪಾಲರಾಗಲಿ, ಅವರ ಸಲಹೆಗಾರರಾಗಲಿ ಲಂಚ ಪಡೆದು ಅಸಿಂಧುವಾದ ಆಜ್ಞೆಯನ್ನು ಹೊರಡಿಸಿದ್ದರೆ? ಖಂಡಿತ ಇಲ್ಲ, ಅವರೆಲ್ಲಾ ಸದ್ಗುಣಿಗಳು, ಅವರು ಹಾಗೆ ಮಾಡುವುದಿಲ್ಲ. ಚುನಾವಣಾ ಆಯೋಗಕ್ಕೆ ಅದು ತಿಳಿಯದು. ಆದ್ದರಿಂದ ಅವರು ರಾಜ್ಯದ ''ಅಭಿವೃದ್ಧಿ''ಗಾಗಿ ಹೊರಡಿಸಿದ್ದ ಆದೇಶಗಳನ್ನು ಆಯೋಗವು ರದ್ದುಮಾಡಿಸಿಬಿಟ್ಟಿತು. ನಮ್ಮ ದೇಶದ ಜನ ಒಂದು ರೀತಿ ಕೆಲವು ಸರ್ಕಾರಿ ಅಧಿಕಾರಿಗಳ ರೀತಿಯವರೆಂದು ಆಯೋಗ ನಂಬುವುದಿಲ್ಲ. ಆ ಅಧಿಕಾರಿಗಳು 'ಚಿತ್ರಾನ್ನ' ತುಂಬಿಕೊಳ್ಳುತ್ತಾರೆ. ಆದರೆ ಕೆಲಸ ಮಾಡಿಕೊಡುವುದಿಲ್ಲ. ಹಾಗೆಯೇ ನಮ್ಮ ಮತದಾರರು ಸೀರೆ-ಮಂಗಳಾರತಿ ತಟ್ಟೆ ಕಾಸು, ಹೀಗೆ ಏನೇ ಪಡೆದರೂ ಕಣ್ಣುಮುಚ್ಚಿ ದಾತಾರರಿಗೆ ಮತ ದಾನ ಮಾಡುವುದಿಲ್ಲ; ಅಧಿಕಾರಿಗಳಿಗಿಂತಲೂ ದೇಶದ ಕಾಳಜಿ ಅವರಿಗೆ ತುಸು ಜಾಸ್ತಿಯಾಗಿರುತ್ತದೆ.

''ಮತ ಚಲಾಯಿಸುವುದು ನಿಮ್ಮ ಹಕ್ಕು, ಕರ್ತವ್ಯ, ಒಳ್ಳೆಯವರನ್ನು ಆಯ್ಕೆ ಮಾಡಿ.'' - ಈ ಅರ್ಥ ಬರುವ ಲಕ್ಷ ಮಾತುಗಳನ್ನು ಕೇಳಿ ಅದೇ ಬಸವನಗುಡಿ ಮತದಾರ ಖಿನ್ನನಾಗಿದ್ದಾನೆ. ನೂರೂ ಜನ ಮತ ಚಲಾಯಿಸಿದರೆ, ಮೂರು ಜನ ಅಭ್ಯರ್ಥಿಗಳಲ್ಲದೆ ನಾಲ್ಕನೆಯವರು ಪ್ರತ್ಯಕ್ಷರಾಗುತ್ತಾರೆಯೆ? ಯಂಕ-ಶೀನ-ನಾಣಿ ಮೂವರೂ ಕೋಟಿಪತಿಗಳೇ ಆಗಿರುವಾಗ ಮತದಾನ ಶೇ.೫೦ ಆದರೇನು ಶೇ. ೯೫ ಆದರೇನು! ಹೇಳಿ ಕೇಳಿ, ಹಿಂದೊಮ್ಮೆ ಬಸವನಗುಡಿಯು ''ಮೌಲ್ಯಾಧಾರಿತ ರಾಜಕಾರಣಿ'' ರಾಮಕೃಷ್ಣ ಹೆಗಡೆಯವರನ್ನು ಆರಿಸಿ ಕಳಿಸಿತ್ತು. ಆಗ ಶೇ.೯೦ ಮತದಾನ ನಡೆದಿತ್ತೆ? ಮತದಾರರು ಶಬ್ದಕೋಶ ಹುಡುಕಿ ತೆಗೆದು ''ಮೌಲ್ಯ'' ಎಂಬುದರ ಅರ್ಥ ತಿಳಿದುಕೊಂಡರು. ''ಮೌಲ್ಯ=ಬೆಲೆ'' ಎಂದು ಬರೆದಿತ್ತು. ಆಹಾ, ಈ ಹೆಗಡೆ ಸಾಚಾ ಆಸಾಮಿ, ಎಲ್ಲಾ ಬಹಿರಂಗವಾಗಿ ಹೇಳುತ್ತಿದ್ದಾರೆ ಎಂದು ಮತದಾರರು ಪಾನಕ ಕುಡಿದರು. ಅಂದರೆ, ''ಇಂತಹ ಆಜ್ಞೆ ಹೊರಡಿಸಲು ಇಷ್ಟು ಬೆಲೆ'' ಎಂದರ್ಥ. ಮೆಡಿಕಲ್ ಕಾಲೇಜು ಬೇಕೆ, ಇಷ್ಟು ಕೋಟಿ ಕೊಡಿ, ಹೌಸಿಂಗ್ ಸೊಸೈಟಿಗೆ ಜಮೀನು ಬೇಕೆ, ಇಷ್ಟು ಕೋಟಿ ಕೊಡಿ, ಇತ್ಯಾದಿ. ಸರ್ವಾರ್ಥದಲ್ಲೂ ಅವರದು ಮೌಲ್ಯಾಧಾರಿತವೇ! ಅಳಿಯ ಸಂತಾನದ ಕ್ಷೇಮಾಭಿವೃದ್ಧಿಗಾಗಿ ಹೆಗಡೆಯವರು ಅಪಾರವಾಗಿ ದುಡಿದರು. ಅವರ ರೇವಜಿತು ಹಗರಣ ಬಸವನಗುಡಿಯ ಮತದಾರನ ಮನಸ್ಸಿನಿಂದ ಅಳಿಸಿಹೋಗಿದೆಯೇ? ಹೌದು ಎನ್ನುವುದಾದರೆ ಆ ಮಮತಾ ನಿಚಾನಿ ಎಂಬ ಶ್ರೀ ಹೆಗಡೆ ಸುಪುತ್ರಿ ಇಲ್ಲೇ ನಿಂತು ಸೋಲಬಹುದಿತ್ತು. ರಾಮನಗರಕ್ಕೆ ಹೋಗಿ ಬಿಸಿಲಿನಲ್ಲಿ ಸುತ್ತಾಡುವ ಅಗತ್ಯವೇನಿತ್ತು! ತಮ್ಮ ಸ್ನೇಹಿತೆ ಪ್ರತಿಮಾ ಬೇಡಿಗೆ ನೃತ್ಯಗ್ರಾಮಕ್ಕಾಗಿ ರೈತರ ಜಮೀನು ಕಿತ್ತು ಕೊಡಿಸಿದ್ದವರು ಹೆಗಡೆ. ಆ ಭೂಮಿಯಲ್ಲಿ ನೃತ್ಯವಿದೆಯೋ ವ್ಯಾಪಾರವಿದೆಯೋ ವಿಚಾರಿಸಿದವರು ಯಾರು! ಮೌಲ್ಯದ ಮಾತು ಹೇಗಾದರೂ ಇರಲಿ, ಬೇರೆಡೆಗಳಲ್ಲಿದ್ದಂತೆ ಮಹಾನ್ ಬಸವನಗುಡಿ ಮತದಾರನ ಮುಂದೆಯೂ ಪ್ರಜಾಪ್ರಭುತ್ವದ ಆಯ್ಕೆಯ ಗಹನ ಪ್ರಶ್ನೆ ಇದ್ದಿತು. ಇಲ್ಲಿಯ ವಿದ್ಯಮಾನಗಳು ಇನ್ನುಳಿದ ೨೨೩ ಕ್ಷೇತ್ರಗಳ ಕತೆಯೂ ಆಗಿರಬಹುದು. ಇಲ್ಲಂತೂ ಒಬ್ಬ ''ಮಧ್ಯಮ ವರ್ಗದ ವಿದ್ಯಾವಂತ ಬ್ರಾಹ್ಮಣ'', ಒಬ್ಬ ''ಪದ್ಯಗಳನ್ನು ಬರೆದವರನ್ನು ಮೆರೆಸುವ ಉದಾತ್ತ ಜೀವಿ'' ಮತ್ತು ಒಬ್ಬ ''ಸ್ವಂತ ಹೆಸರಿಲ್ಲದ, ಆದರೆ ದೊಡ್ಡಗೌಡರ ಹೆಸರಿನ ಲಾಂಛನ ಹೊತ್ತ, ಜನಾನುರಾಗಿ'' ಅಭ್ಯಾರ್ಥಿಗಳಾಗಿ ಸೇವೆ ಮಾಡಲು ಕ್ಯೂನಲ್ಲಿ ನಿಂತಿದ್ದರು. ಮಧ್ಯಮ ವರ್ಗದವನೆಂದು ಘೋಷಿಸಿಕೊಂಡಿದ್ದ ಶ್ರೀಮಂತ ನಿಜಕ್ಕೂ ಕೋಟಿಗಟ್ಟಲೆಯ ಅಧಿಪತಿ. ಆತ ಅನೇಕ ಅಪರಾಧಿಗಳ ನೇಹಿಗನೂ ಇರಬೇಕು. ಏಕೆಂದರೆ ಕತ್ರಿಗುಪ್ಪೆಯ ಒಂದು ಮತಕಟ್ಟೆಯಲ್ಲಿದ್ದ ಪೊಲೀಸ್ ಅಧಿಕಾರಿಯೊಬ್ಬರು ಕೂಡ ಸೂರ್ಯ ಸರ್ಪವೆಂಬ ಅಭ್ಯರ್ಥಿಗೇ ಮತ ನೀಡಬೇಕೆಂದು ಕೇಳಿಕೊಂಡ. ''ನಿಮ್ಮ ಹಳೆಯ ವಿದ್ಯಾರ್ಥಿ ಸಾರ್ ನಾನು'' ಎಂಬ ಒತ್ತಡವನ್ನೂ ಹೇರಿದ ಆತ. ಹೀಗಿರುವಾಗ ಪ್ರಜಾಪ್ರಭುತ್ವದ ಜವಾಬ್ದಾರಿ ನಿರ್ವಹಿಸಲು ಬಸವನಗುಡಿ ಮತದಾರ ಏನು ಮಾಡಬೇಕು? ಒಬ್ಬ ಭಾಜಪ, ಇನ್ನೊಬ್ಬ ಕಾಂಗ್ರೆಸ್, ಮತ್ತೊಬ್ಬ ಏನೆಂದು ಹೇಳುವುದೇ ಬೇಡ. ಕಾಂಗ್ರೆಸ್ ನಾಯಕ ಹೇಳಿದ: ''ರಷ್ಯಾ-ಸೋಮಾಲಿಯಾಗಳಲ್ಲಿ ಪ್ರಜಾಪ್ರಭುತ್ವ ಸೋತಿದೆ, ಕರ್ನಾಟಕದಲ್ಲಿ ಹಾಗಾಗುವುದು ಬೇಡ.'' ಶಾಭಾಶ್ ವೀರ, ನಿನಗೆ ಸೋಮಾಲಿಯಾ ಚರಿತ್ರೆ ಅಲ್ಲದಿದ್ದರೂ ಆ ಹೆಸರಾದರೂ ಗೊತ್ತಿದೆಯಲ್ಲ, ನಿನ್ನನ್ನು ಆರಿಸಿ ಹನುಮಂತನಗರದ ಒಂದು ಗಲ್ಲಿಗೆ ನನ್ನದೇ ಹೆಸರಿಡುವಂತೆ ಮಾಡಲು ನಾನೂ ಒಂದು ಕವನ ಹೊಸೆದುಬಿಡುತ್ತೇನೆ ಬಿಡು, ಎಂದುಕೊಂಡ ನಮ್ಮ ಘನ ಮತದಾರ. ಭಾಜಪ ಅಭ್ಯರ್ಥಿ ಹೇಳಿದ, ನಾನು ಮ್ಯಾನೇಜ್‌ಮೆಂಟ್ ಗುರು, ಎಂದು. ಬಳ್ಳಾರಿಯ ರೆಡ್ಡಿ ಮಹಾಶಯ ಅಂತಹ ಗುರುವಲ್ಲದೆಯೂ ಏನೆಲ್ಲಾ ಅವಾಂತರ ಮಾಡಿದ್ದಾನೆ, ಹೀಗಿರುವಾಗ ಈ ಗುರುವನ್ನು ಎಷ್ಟು ಎತ್ತರಕ್ಕೆ ಎತ್ತಬೇಕು? ಇದು ಮತದಾರನ ಗೊಂದಲ. ದೊಡ್ಡಗೌಡರ ಭಟ ಹೇಳಿದ, ನಮ್ಮ ದೊಡ್ಡವರು ಹೇಳಿದ್ದಾರೆ, ನೀವು ಮತ ನೀಡದಿದ್ದರೂ ನಾನು ಗೆಲ್ಲುತ್ತೇನೆ ಎಂದು, ಹೀಗಿರುವಾಗ ನಿಮ್ಮ ಮರ್ಜಿ ಏಕೆ ಬೇಕು! ನಮ್ಮ ಮತದಾರನ ಫಜೀತಿಯನ್ನು ಹೇಗೆ ಬಣ್ಣಿಸೋಣ? ಕಾಂಗ್ರೆಸ್ಸಿಗೆ ಮತ ನೀಡಲು ಕೈ ಬರುವುದಿಲ್ಲ; ಏಕೆಂದರೆ ಆ ಪಕ್ಷವು ನಮ್ಮ ದೇಶವನ್ನು ಅಮೆರಿಕಾದ ಪದತಲಕ್ಕೆ ದೂಡುತ್ತಿದೆ. ಭಾಜಪಕ್ಕೂ ಸಾಧ್ಯವಿಲ್ಲ, ಏಕೆಂದರೆ ಅವರದು ವೀರಾಗ್ರಣಿ ನರಮೇಧೇಂದ್ರ ಮೋದಿ ಮಾಡಲ್; ದೊಡ್ಡಗೌಡರಿಗೂ ಕೂಡದು, ಏಕೆಂದರೆ ಅವರದ್ದು ವಂಶಾಭಿವೃದ್ಧಿ ಕಾರ್ಯಕ್ರಮದ ಪಕ್ಷ, ಅಯ್ಯೋ ಸೌಭಾಗ್ಯವೇ, ಎನಿಸಿತು.

ನೋಡಿದ, ಇವರನ್ನೆಲ್ಲಾ ಹೊರದೂಡಿ ''ಒಳ್ಳೆಯವರನ್ನು'' ಆರಿಸಿಬಿಡುತ್ತೇನೆ ಎಂದುಕೊಂಡ. ಈ ಮೂವರೊಳಗೆ ಯಾರೂ ನನಗೆ ಹಿತವರಲ್ಲ, ಬೇರೆಯವರನ್ನೇ ಹುಡುಕಿಕೊಳ್ಳುತ್ತೇನೆ ಎಂದು ಮನಸ್ಸು ಗಟ್ಟಿಮಾಡಿಕೊಂಡ. ಕೊನೆಗೆ, ಮಮತಾ ಬ್ಯಾನರ್ಜಿ ನೇತೃತ್ವದಲ್ಲಿ ಕ್ರಾಂತಿ ಮಾಡಲು ತೀರ್ಮಾನಿಸಿರುವ ಪಕ್ಷದ ಹುರಿಯಾಳನ್ನೇ ಆರಿಸಿದರೆ ಹೇಗೆ, ಎಂದು ತಲೆ ತುರಿಸಿಕೊಂಡ. ''ರಾಜಕೀಯ ರಂಗ ಜನಪರರೋ'' (ಅಂದರೆ, ರಂಗಸ್ಥಳದಲ್ಲಿದ್ದಾಗ ಜನಪರರಂತೆ ನಟಿಸುವ ಶ್ರೇಷ್ಠರು) ಬೇಕೋ, ಅಥವಾ ''ಜನಪರ ರಾಜಕೀಯ ರಂಗ''ದವರು ಬೇಕೋ, ಎಂದು ಲೆಕ್ಕ ಹಾಕಿದ. ಆದರೆ ಬಸವನಗುಡಿ ಜನರ ಪರವಾಗಿ ಈ ಜನಪರ ರಾಜಕೀಯ ರಂಗ ಏನನ್ನೂ ಮಾಡಲಾಗುವುದಿಲ್ಲವೆಂದು ತಿಳಿದು ಅವರು ಅಭ್ಯರ್ಥಿಯನ್ನೇ ಹಾಕಿರಲಿಲ್ಲ. ಯಾರೂ ಬೇಡ, ಏಕೈಕ ಸೈದ್ಧಾಂತಿಕ ಚತುರನಿದ್ದರೆ ಅವನನ್ನೇ ಆಯ್ಕೆ ಮಾಡುವುದು ಜನತಾ ಪ್ರಜಾಪ್ರಭುತ್ವಕ್ಕೆ ಏಣಿ ಹಾಕಿದಂತೆ ಎಂದು ಭಾವಿಸಿ ಆ ಮಹಾನುಭಾವ ಪಂಥದವರ ಹೆಸರನ್ನು ಅರಸಿದ ನಮ್ಮ ಬಸವನಗುಡಿ ಮತದಾರ. ಸಿದ್ಧಾಂತಕ್ಕೂ ಬಸವನಗುಡಿಗೂ ಬಹುದೂರವೆಂದು ಅವನಿಗೆ ಜ್ಞಾನೋದಯವಾಯಿತು.

ನೀವೇ ಊಹಿಸಿ, ಕಡೆಗೆ ಅವನು ಯಾರಿಗೆ ಮತ ನೀಡಿರಬಹುದು ಎಂಬುದನ್ನು ಊಹೆ ಸರಿಯಾದರೆ ಕೋಟಿಗಳ ನುಂಗಣ್ಣ ನಿಮ್ಮ ಸೇವೆಗಾಗಿ ಕೊಡಲಿ ಹಿಡಿದು ನಿಂತಿದ್ದಾನೆ. ನಿಮ್ಮ ಮೌಲ್ಯವೆಷ್ಟೆಂದು ಹೇಳಿಬಿಡಿ, ಸಾಕು.

- ಭಾರತಭವಿ

# ಶಾಂತರಸರೊಡನೆ ನಿರಂತರ ೬೫ ವರ್ಷಗಳ ಒಡನಾಟ



**ಮ್ಯಾ**ಟ್ರಿಕ್ ಪಾಸಾದ ಮೇಲೆ, ರಾಯಚೂರಿನ ಹಮ್‌ದರ್ದ್ ಹೈಸ್ಕೂಲಿನಲ್ಲಿ 'ಹಾಲಿ' (ಹಾಲಿ ಎಂದರೆ ನಿಜಾಮರ ನಾಣ್ಯ, 'ಸಿಕ್ಕೆ ಉಸ್ಮಾನಿಯಾ'. ಬ್ರಿಟಿಷ್ ಇಂಡಿಯಾದ ನಾಣ್ಯ [ಗಾಡಿ ಎಂದು ಹೈದರಾಬಾದ ಕನ್ನಡಿಗರು ಕರೆಯುತ್ತಿದ್ದರು]ಕ್ಕಿಂತಲೂ ಎರಡು ಆಣೆ ನಾಲ್ಕು ಪೈ ಕಡಿಮೆ). ಮುವ್ವತ್ತು ರೂಪಾಯಿಗಳಿಗೆ ಪ್ರಾಥಮಿಕ ಶಿಕ್ಷಕರಾಗಿ ಸೇರಿದ ಶಾಂತರಸರು ಅಸಹಾಯ ಶೂರರಾಗಿ ಎಂ.ಎ., ಬಿ.ಎಡ್. ಪದವೀಧರರಾಗಿ ಅದೇ ಹಮ್‌ದರ್ದ್ ಶಾಲೆಯ ಜೂನಿಯರ್ ಕಾಲೇಜಿನ ಪ್ರಿನ್ಸಿಪಾಲರಾಗಿ ನಿವೃತ್ತರಾದುದು, ಅವರ ಅಸೀಮ ಸಾಹಸತನಕ್ಕೆ ನಿದರ್ಶನವಾಗಿದೆ.

ರಾಯಚೂರಿನಲ್ಲಿ ಸ್ವಾತಂತ್ರ್ಯಪೂರ್ವದ ಸಂಗಡಿಗರ ಸಮಿತಿಯಿಂದ ಶಾಂತರಸರೇ ಸಂಪಾದಕರಾಗಿದ್ದ – ಪ್ರಕಟವಾದ 'ಮುಸುಕು ತೆರೆ'ಯಲ್ಲಿ ಶಾಂತರಸರು ಬರೆದ - 'ದೊಡ್ಡವರ ತಪ್ಪು – ತತ್ವ' – ಎಂಬ ಕವಿತೆ ಅವರ ವೈಚಾರಿಕ ಪ್ರಜ್ಞೆಗೆ ಸಾಕ್ಷಿಯಾಗಿದೆ: (ದೈತ್ಯರ ದಾಳಿಗೆ ಹೆದರಿ ಹೌಹಾರಿದ ದೇವತೆಗಳು ಕೃಷ್ಣನ ಮೊರೆ ಹೋಗುತ್ತಾರೆ. ಕೃಷ್ಣನು ಶಿವನನ್ನು ಎಚ್ಚರಿಸಲು ಕಾಮನಿಗೆ ಒಪ್ಪಿಸುತ್ತಾನೆ. ಲೋಕ ಕಲ್ಯಾಣಕ್ಕಾಗಿ, ತಾನು ಸುಟ್ಟು, ಭಸ್ಮವಾಗಿ ಹೋಗುತ್ತೇನೆಂಬುದು ಗೊತ್ತಿದ್ದೂ ಕಾಮನು ಮುಂದಾಗಿ ಪಂಚಬಾಣಗಳಿಂದ ಶಿವನನ್ನು ಎಚ್ಚರಿಸುತ್ತಾನೆ. ಕಾಮ ಸುಟ್ಟು ಭಸ್ಮವಾಗುತ್ತಾನೆ. ಕಾಮನು ಮಾಡಿದ ತಪ್ಪೇನು ? ಶಿವ ಮಾಡಿದ್ದು ತಪ್ಪಲ್ಲವೆ ?). ಆದರಿಂದು ನಾವು ಕಾಮನ ಹೆಸರಿನಲ್ಲಿ ಸಂತೋಷದಿಂದ ಪುಳಕಿತರಾಗಿ, ಬಣ್ಣ ಪರಸ್ಪರ ಎರಚಿಕೊಂಡು ನಲಿದಾಡುತ್ತಿದ್ದೇವೆ. ತತ್ವವಾಗಿ ಒಪ್ಪಿ, ದೊಡ್ಡವರ ಇಂಥ ತಪ್ಪುಗಳನ್ನು ಹೊಗಳುತ್ತೇವೆ. ಕಿರಿಯರು, ಲೋಕಹಿತಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡವರನ್ನು ನಾವು ಸ್ಮರಿಸುವುದಿಲ್ಲ. ಸಂಯುಕ್ತ ಕರ್ನಾಟಕವು 'ಮುಸುಕು ತೆರೆ'ಯನ್ನು ವಿಮರ್ಶಿಸುತ್ತ, ಶಾಂತರಸರ 'ದೊಡ್ಡವರ ತಪ್ಪು-ತತ್ವ' ಎಂಬುದನ್ನು ಮೆಚ್ಚಿ, ಪ್ರಶಂಸಿಸಿದ್ದಿತು.

---

ನಿತ್ಯ ಸ್ನೇಹಿ, ನಾಡೋಜ, ಡಾ|| ಶಾಂತರಸರು
ಏಪ್ರಿಲ್ ೧೩ರಂದು ಅಸುನೀಗಿದರು.
ಅವರೊಡನೆ ೬೫ ವರ್ಷಗಳ ಕಾಲ ಒಡನಾಟವಿದ್ದ
ಮಾನ್ಯ ಶ್ರೀ ಚೆನ್ನಬಸವಪ್ಪ ಬೆಟ್ಟದೂರು ಅವರು ತಮ್ಮ
ಆತ್ಮೀಯರನ್ನು ನೆನೆದು ಗೌರವ ಸಲ್ಲಿಸಿದ್ದಾರೆ.

---

**ಚೆನ್ನಬಸವಪ್ಪ ಬೆಟ್ಟದೂರು**

ಶ್ರೀ ಲಂಕೇಶರು, ಕರ್ನಾಟಕದ ಪ್ರಾತಿನಿಧಿಕ ಕಾವ್ಯವೆಂದು ಹೇಳಿಕೊಂಡು 'ಅಕ್ಷರ ಕಾವ್ಯ' ಎಂಬ ಸಂಕಲನದಲ್ಲಿ ಹೈದರಾಬಾದ ಕರ್ನಾಟಕವನ್ನು ಕಡೆಗಣಿಸಿದ್ದರು. ಅದನ್ನು ಪ್ರತಿಭಟಿಸಿ, 'ಬೆನ್ನ ಹಿಂದಿನ ಬೆಳಕ'ನ್ನು ಪ್ರಕಟಿಸಿದ ಧೈರ್ಯಶಾಲಿ.

ಶಾಂತರಸರು ತಾವಷ್ಟೇ ಬೆಳೆಯಲಿಲ್ಲ, ತಮ್ಮೊಡನೆ ಕಿರಿಯರನ್ನೂ ಮುನ್ನಡೆಸಿದ್ದಾರೆ. ಪ್ರಾರಂಭದ ಹಂತದಲ್ಲಿ ಹಿರಿಯ ಪ್ರಸಿದ್ಧ ಹಿಂದಿ ಸಾಹಿತಿಗಳಾದ ಚಂದ್ರಕಾಂತ ಕುಸನೂರು, ಡಾ|| ಚೆನ್ನಣ್ಣ ವಾಲೀಕಾರ, ಕವಿ ಕೃಷ್ಣರಾವ್, ಪ್ರಸಿದ್ಧ ಕವಿಗಳಾದ ಜಂಬಣ್ಣ ಅಮರಚಿಂತ, ಗುರುಬಸವಯ್ಯಾ ಅಮ್ಮಾಪುರ (ಶಾಂತರಸರ ಮೆಚ್ಚಿನ ಶಿಷ್ಯ), ಅಮರಾನಂದ ಬೆಟ್ಟದೂರು (ನಾನು), ಶಿವಲಿಂಕ ರಾಯಚೂರು (ಸರಾಫ ಗದ್ವಾಲ ಶಂಕ್ರಣ್ಣ) – ಮೊದಲಾದವರು ಶಾಂತರಸರಿಂದ ಒಂದಿಲ್ಲೊಂದು ಪ್ರಸಂಗದಲ್ಲಿ ಸಹಾಯ ಪಡೆದು, ಶಾಂತರಸರಿಗೆ ಋಣಿಗಳಾಗಿದ್ದಾರೆ.

ಶಾಂತರಸರ ಸತ್ಯ-ನಿಷ್ಠುರ ನುಡಿಗಳಿಂದ ದೂರವಾದವರು, ಪಶ್ಚಾತ್ತಾಪವಾಗಿ, ಮತ್ತೆ ಅವರ ಗೆಳೆತನ ಸಂಪಾದಿಸಿದ್ದಾರೆ. ಅಂಥವರನ್ನು ಹಿಂದಿನ ಪ್ರಸಂಗಗಳನ್ನು ಗಣನೆಗೆ ತಾರದೆ ಮುನ್ನಿನಂತೆ ಸ್ನೇಹ-ಪ್ರೀತಿಯಿಂದ ಕಂಡ ವಿಶಾಲ ಹೃದಯಿ.

ನಗೆಮಾರಿ ತಂದೆಯೆಂದೇ ಖ್ಯಾತರಾದ ನೀರಮಾನ್ವಿ ವೀರಣ್ಣಗೌಡರು ಮಾತ್ರ ಶಾಂತರಸರನ್ನು ಏಕವಚನದಿಂದಷ್ಟೇ ಅಲ್ಲದೆ ''ಲೆ, ಅಲೆ'' ಎಂದು ಕೂಡ ಕರೆಯುತ್ತ ''ಅಲೇ, ಶಾಂತಾಗಾ'' – ಎಂದರೆ, ಶಾಂತರಸರು ವೀರಣ್ಣಗೌಡರನ್ನು ''ಎಲೇ, ಈರಗಾ'' ಎಂದು ಪರಸ್ಪರ ಸಂಬೋಧಿಸುತ್ತಿದ್ದರು. ನನಗೆ ಶಾಂತರಸರು, ವೀರಣ್ಣಗೌಡರಿಗಿಂತ ಮೊದಲು ಪರಿಚಯವಾಗಿ, ಆತ್ಮೀಯರಾಗಿದ್ದರೂ ನಾವು ಪರಸ್ಪರ ಬಹುವಚನದಿಂದಲೇ ಸಂಬೋಧಿಸುತ್ತಿದ್ದೆವು. ಶಾಂತರಸರ ಸಿಟ್ಟನ್ನು ಗಮನಿಸಿ, ''ನಿನಗೆ ಶಾಂತರಸ (ಇಟ್ಟ ಹೆಸರು ಶಾಂತಯ್ಯ. ಕಾವ್ಯನಾಮ ಶಾಂತರಸ) ಎಂದು ಹೆಸರಿಟ್ಟು ತಪ್ಪು ಮಾಡಿದ್ದಾರೆ. ರುದ್ರರಸ ಎಂದು ಕರೆಯಬೇಕಾಗಿತ್ತು'' - ಎಂದು ಗೇಲಿ ಮಾಡುತ್ತಿದ್ದರು. ಇದನ್ನು ಕೇಳಿ ಲಕ್ಷ್ಮಿದೇವಿಯವರು ಮುಗುಳ್ನಕ್ಕ ವೀರಣ್ಣಗೌಡರನ್ನು ಸಮರ್ಥಿಸುತ್ತಿದ್ದರು.

ಶಾಂತರಸರು ಬರೆದ ಕಲ್ಬುರ್ಗಿಯ ಶರಣ ಬಸವೇಶ್ವರರ ಸುಪ್ರಭಾತವನ್ನು ಸಿದ್ಧರಾಮ ಜಂಬಲದಿನ್ನಿ ಮತ್ತು ತಾರಮ್ಮ ಜಂಬಲದಿನ್ನಿಯವರು ಹಾಡಿದುದನ್ನು ಮನಸಾರೆ ಮೆಚ್ಚಿದ ಹಿರಿಯರೊಬ್ಬರು ಬಂದು, ಹಾವೇರಿಯ ಮಠಾಧಿಪತಿಗಳನ್ನು ಕುರಿತು ಸುಪ್ರಭಾತವನ್ನು ಶಾಂತರಸರೇ ಬರೆಯಬೇಕು, ಸಿದ್ಧರಾಮ ಜಂಬಲದಿನ್ನಿ ಮತ್ತು ತಾರಮ್ಮನವರು ಕೂಡಿಯೇ ಹಾಡಬೇಕೆಂಬ ಬೇಡಿಕೆಯನ್ನು ಶಾಂತರಸರ ಮುಂದಿಟ್ಟರು. ಇನ್ನೊಬ್ಬರಾಗಿದ್ದರೆ ಮನಸ್ಸಿನಲ್ಲಿ ಹಿರಿಹಿರಿ ಹಿಗ್ಗುತ್ತಿದ್ದರು. ಶಾಂತರಸರು ಅವರಿಗೆ ಉತ್ತರಿಸಿದ ರೀತಿಯಿಂದ, ಅವರು ಹಣದಾಸೆಗಾಗಿ ಸಾಹಿತ್ಯದ ಕೃಷಿಯನ್ನವಲಂಬಿಸಿದವರಲ್ಲ ಎಂಬುದು ಎದೆಯಾಳದ ಸತ್ವದರ್ಶನ ಮಾಡಿಸುತ್ತದೆ:

''ನೋಡ್ರೀ, ನಾನು ಶರಣಬಸವೇಶ್ವರ ಸುಪ್ರಭಾತವನ್ನು ರಚಿಸಿದುದು ಯಾರ ಹೇಳಿಕೆ-ಕೇಳಿಕೆಯಿಂದಲೂ ಅಲ್ಲ, ನಾನೇ, ನಮ್ಮ ಭಾಗದಲ್ಲಿ ಶರಣಬಸವೇಶ್ವರರು ಸಕಲಜೀವಾತ್ಮರ [illegible]ಗಾಗಿ ಕೈಗೊಂಡ ತ್ರಿವಿಧ ದಾಸೋಹದ ಮಣಿಹ, ಜನಮನದ ಮೇಲೆ ಆಳವಾದ ಪರಿಣಾಮ ಬೀರಿದಂತೆ ನನ್ನ ಹೃದಯದ ಮೇಲೆ ಬಹಳ ಪರಿಣಾಮ ಬೀರಿದೆ. ಅದರಿಂದ ಪ್ರೇರಣೆ ಪಡೆದು, ಹೃದಯ ತುಂಬಿ [illegible] ಬರೆದುದು-ಶರಣಬಸವೇಶ್ವರ ಸುಪ್ರಭಾತ. ಅದನ್ನು ನಾನೇ ಬರೆದೆನೆಂಬುದು [illegible]ಮಾತ್ರ. [illegible] ಬರೆಯುವ ದಿಲ್ಲವೆಂದು ಹೇಳುವುದಿಲ್ಲ. ಶರಣ ಬಸವೇಶ್ವರ ಸುಪ್ರಭಾತದಷ್ಟು, ಜಂಬಲದಿನ್ನಿಯವರೇ ಹಾಡಿದರೂ ಪರಿಣಾಮವಾಗಲಿಕ್ಕಿಲ್ಲ. ಆಮೇಲೆ ನನ್ನನ್ನೂ ಜಂಬಲದಿನ್ನಿಯವರನ್ನೂ [illegible]'' ಎಂದು ತಮ್ಮ ಹೃದಯವನ್ನೇ ತೆರೆದಿಟ್ಟರು. ''ಇಲ್ಲ, [illegible] ಇರಲಿ; ಏನೇ ಆಗಲಿ ನೀವೇ ಬರೆಯಬೇಕು'' ಎಂದು (ಸಿದ್ಧರಾಮ) ಜಂಬಲದಿನ್ನಿಯವರೇ ಹಾಡಬೇಕೆಂದು ಒತ್ತಾಯಪಡಿಸಿದರು. ನಾನೂ ಅವರ ಪರವಾಗಿ ದನಿಗೂಡಿಸಿದೆ. ಇದು, ಶಾಂತರಸರ ಎದು ಹೃದಯದ [illegible]ಕತೆಯನ್ನು ಪ್ರದರ್ಶಿಸುತ್ತದೆ.

ನಾನು ವಕೀಲಿ ವೃತ್ತಿಯನ್ನು ತೊರೆದು, ನನ್ನೂರು- ಬೆಟ್ಟದೂರಲ್ಲಿ ವಾಸಿಸುತ್ತಿದ್ದೆ. ನನ್ನನ್ನು ಎಳೆತಂದು ೬,೭,೮,೯ನೆಯ ಕ್ಲಾಸುಗಳ ಪಠ್ಯಪುಸ್ತಕಗಳ ರಚನೆಯಲ್ಲಿ, ತಮ್ಮೊಡನೆ ನನ್ನನ್ನು ಸೇರಿಸಿಕೊಂಡರು.

ಸ್ವಾತಂತ್ರ್ಯಪೂರ್ವದಲ್ಲಿ, ಸಂಗಡಿಗರ ಸಮಿತಿಯನ್ನು ರಚಿಸಿಕೊಂಡು. ಅದರ ಮೂಲಕ ಸಾಹಿತ್ಯದ ಕೃತಿಗಳನ್ನು ಪ್ರಕಟಿಸಬೇಕೆಂದು ನಿರ್ಧರಿಸಿದೆವು. ಮೊಟ್ಟಮೊದಲಿಗೆ 'ಮುಸುಕು ತೆರೆ' ಎಂಬ [illegible] ಪ್ರಬಂಧಗಳನ್ನೊಗೊಂಡ ಸಂಗ್ರಹವೊಂದನ್ನು ಹೊರತಂದುದು ಬರಡು [illegible] ಬೆಳೆಸಿದಷ್ಟು ಸಂತೋಷವುಂಟಾಗಿತ್ತು – ನಮ್ಮ ಸಂಗಡಿಗರೆಲ್ಲರಿಗೆ. ಅದರಲ್ಲಿ [illegible]

ಕವಿಗಳಾದ 'ಕಾವ್ಯಾನಂದ' (ಸಿದ್ದಯ್ಯ ಪುರಾಣಿಕರು)ರಿಗೆ ತಮ್ಮ ಕವಿತೆಗಳಲ್ಲಿ ಅವರಿಗೆ ಅತ್ಯಂತ ಮೆಚ್ಚುಕೆಯಾದ ಕವಿತೆಯೆಂದರೆ 'ಸಲಾಮಸಾಬ'. ಅದರಲ್ಲಿಯ ವಿಷಯವೆಂದರೆ: ಕವಿ ರೈಲಿನಿಂದ ಇಳಿದಾಗ, ವಯಸ್ಸಾದ, ಬರಿಮೈಯ್ಯ ಹರಕು ಒಲ್ಲಿ ತಲೆಗೆ ಸುತ್ತಿದ, ಗಡ್ಡಧಾರಿ ಮುಸಲ್ಮಾನ, ಬೆನ್ನು-ಹೊಟ್ಟೆ ಒಂದಾದ, ತೀರ ಹಸಿದ, ಹಣ್ಣಾದ ಮುಸಲ್ಮಾನ ಮುದುಕನೊಬ್ಬ 'ಸಲಾಮ್‌ಸಾಬ್' ಎಂದು ಭಿಕ್ಷೆಗಾಗಿ ಅಂಗಲಾಚುತ್ತಾನೆ. ಕವಿ (ವ್ಯಕ್ತಿ) ಕೊಡುತ್ತಾನೆ. ಈ ಘಟನೆಯನ್ನು ಕುರಿತು, ಸ್ವಾತಂತ್ರ್ಯಪೂರ್ವದಲ್ಲಿ ಮುಹಮ್ಮದ್ ಅಲಿ ಜಿನ್ನಾರವರ ಪಾಕಿಸ್ತಾನದ ಬೇಡಿಕೆ, ಮುಸಲ್ಮಾ ನೇತರರ ಮನಸ್ಸಿನಲ್ಲಿ ಕ್ಷೋಭೆಯುಂಟಾಗಿತ್ತು. ಈ ಹಿನ್ನೆಲೆಯಲ್ಲಿಯಿಂದ ಪ್ರೇರಿತವಾದ ಕಾವ್ಯಾನಂದರಿಂದ ರಚಿತವಾದ ಕವಿತೆ 'ಸಲಾಮ್ ಸಾಬ್' ಕವಿಯ ಅಂತರಂಗದಲ್ಲಿ ನಡೆದ ತುಮುಲವನ್ನು ವ್ಯಕ್ತಗೊಳಿಸುತ್ತ –

*ಇವ ತುರುಕ : ಭಾರತದ ಅರಮನೆಯ ಮುರುಕ*
*ಇವ ಮ್ಲೇಂಛ : ಭಾರತವ ಹಂಚಹಾಕಿದ ಹೊಂಚ*
*ಕರೆದು ನೆರವನು ಕೊಟ್ಟ ಜನರಿವಗೆ 'ಕಾಫರ'ರು.*
*ತಕ್ಕವರೆ ಕರುಣೆಗೆ ? ಸಾಯಲಿವರದೆ ರೀತಿ*

– ಎಂದು ಗುಡುಗಿದ ಧ್ವನಿಗೆ, ಎದೆಯಾಳದಿಂದ ಮರುದನಿಯೊಂದು

*ಕನಲದಿರು ಕರುಣೆಯೇ! ಬಡತುರುಕ ಬೇಡುವುದ*
*ಅನ್ನ-ಅಲ್ಲ-ಪಾಕಿಸ್ತಾನ್*
*ಕರಿಬಿಳಿಯ ವರ್ಣವಿರೆ*
*ಕರುಣಕ್ಕೆ ಕುಲವುಂಟೆ ?*
*ಜಡ ತನುವಿಗಿರಬಹುದು;*
*ಬಡತನಕ್ಕೆ ಕುಲವುಂಟೆ ?*

– ಎಂದು ಕರುಣೆಯಿಂದ ನಾಲ್ಕಾಣೆ ಕೊಡುತ್ತಾನೆ. ಈ ದಿನ ಹೊಟ್ಟೆ ತುಂಬ ಉಣ್ಣುತ್ತಾನೆ (ಆ ಕಾಲದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ನಾಲ್ಕಾಣೆಗೆ ಹಾಲು-ಮೊಸರು, ತುಪ್ಪ ಸಹಿತ ಒಳ್ಳೆಯ ಊಟ ಸಿಗುತ್ತಿತ್ತು) ಎಂದು ಆನಂದಿಸುತ್ತಾನೆ.

ಈ ಕವಿತೆಯ ಮಹೋನ್ನತ ಭಾವನೆಯನ್ನರಿಯದ ರಜಾಕಾರರ ಕೆಂಗಣ್ಣಿಗೆ ಬೀಳಬಾರದೆಂದು, ರಾಯಚೂರಿನಲ್ಲಿ ವೈದ್ಯ ಶೀನಪ್ಪಾಚಾರ್ಯರನ್ನು – ಶಾಂತರಸರು ವಾಸಿಸುತ್ತಿದ್ದ ಕೋಣೆಯಲ್ಲಿ ಮೇಲ್ಮಾಳಿಗೆಯ ಕೋಣೆಯಲ್ಲಿ – ಯಾರ ಕಣ್ಣಿಗೂ ಬೀಳದಂತೆ ಬಚ್ಚಿಟ್ಟದ್ದೆವು. (ಕಾವ್ಯಾನಂದರಿಗೂ ಆ ಭಯವಿತ್ತು. ಕವಿತೆಯನ್ನು ತಿದ್ದಿ ಕಳಿಸಿದ್ದರು. ಆದರೆ ನಾವು ಇದ್ದಕ್ಕಿದ್ದಂತೆ ಪ್ರಕಟಿಸಿದ್ದೆವು.)

ಶಾಂತರಸರೂ ನಾನು ಕೂಡಿಯೇ ಗ್ರಂಥ ಸಂಪಾದನೆ ಮಾಡಿದ್ದೇವೆ. ಇದರಲ್ಲಿ ಮುಖ್ಯವಾದವುಗಳೆಂದರೆ 'ಕಲ್ಯಾಣ ದೀಪ' ಮಠದ ಪೀಠಾಧ್ಯಕ್ಷರಾಗಿದ್ದ ಲಿಂ॥ ಡಾ॥ ಚೆನ್ನಬಸವ ಪಟ್ಟದ್ದೇವರು ಇವರ ಸ್ಮರಣೆಗಾಗಿ 'ಕಾಯಕ ಪರಿಣಾಮ' ಎಂಬ ೧೪೦೦ ಪುಟಗಳ ಬಹದ್ಗ್ರಂಥವನ್ನು ಕರ್ನಾಟಕದ ಸಿದ್ಧ-ಪ್ರಸಿದ್ಧ ಸಾಹಿತಿಗಳು, ಅನುಭಾವಿಗಳು, ಸಂಶೋಧಕರಿಂದ ಅಭ್ಯಾಸಪೂರ್ಣ ಲೇಖನಗಳನ್ನು ಬರಮಾಡಿಕೊಂಡು, ಅದೊಂದು ಆಕರ ಗ್ರಂಥವಾಗುವಂತೆ ಶಾಂತರಸರೂ ನಾನೂ ಕೂಡಿ ಪ್ರಧಾನ ಸಂಪಾದಕರಾಗಿ ತುಂಬಾ ಶ್ರಮಿಸಿದ್ದೇವೆ.

ಶಾಂತರಸರ ಮೊಟ್ಟಮೊದಲ ಕೃತಿ 'ಸತ್ಯ ಸ್ನೇಹಿ' ಗೀತನಾಟಕವನ್ನು ಹಿರಿಯರಾದ ಡಾ॥ ಸಿಂಪಿ ಲಿಂಗಣ್ಣ ನವರು ತಮ್ಮ ಅರವಿಂದ ಗ್ರಂಥಮಾಲೆಯಿಂದ ಪ್ರಕಟಿಸುವುದಾಗಿ ಹೇಳಿದರು. ಆದರೆ, ಅವರು ೧೨೫ ಪುಟಗಳ ಮಿತಿ ಹಾಕಿದ್ದರು. ಶಾಂತರಸರು ಬರೆದುದು ಇದ್ದುದಿದ್ದಂತೆ ಪ್ರಕಟಿಸಿದರೆ ೨೦೦ ಪುಟಗಳಿಗೂ ಮೇಲ್ಪಟ್ಟಾಗುತ್ತಿತ್ತು. ಅದನ್ನು ಸಂಕ್ಷಿಪ್ತಗೊಳಿಸಲು ನನಗೊಪ್ಪಿಸಿದರು. ಸಂಕ್ಷಿಪ್ತಗೊಳಿಸಿದ ಮೇಲೆ ನಾನು ಶಾಂತರಸರನ್ನು ಪರಿಶೀಲಿಸಲು ಹೇಳಿದೆ. "ನೀವು ಮಾಡಿದ್ದೀರಿ ಎಂದ ಮೇಲೆ ನಾನೇಕೆ ಮತ್ತೂ ಮೂಲ ಏಕೆ ನೋಡಬೇಕು?'' ಎಂದು ಪ್ರಕಟಣೆಗೆ ಕಳಿಸಿದರು. ಆ ಗೀತನಾಟಕಕ್ಕೆ ಕರ್ನಾಟಕ ರಾಜ್ಯದ ಪ್ರಶಸ್ತಿ ಬಂತೆಂಬುದು ಶಾಂತರಸರಿಗಿಂತಲೂ



ಎಡದಿಂದ ಬಲಕ್ಕೆ ಅನುಕ್ರಮವಾಗಿ ಶಂಕ್ರಪ್ಪ ಚೆಟ್ಟದೂರು, ಚೆನ್ನಬಸಪ್ಪ ಬೆಟ್ಟದೂರು, ಡಾ॥ ಶಾಂತರಸ ಹೆಂಬೇರಾಳು, ಗುರುಬಸಯ್ಯ ಅಮ್ಮಾಪೂರ

ನನಗೇ ಹೆಚ್ಚು ಸಂತೋಷವಾಗಿತ್ತು. ನನ್ನ ಮೇಲೆ ಅಷ್ಟೊಂದು ಅಚಲವಿಶ್ವಾಸ, ಶಾಂತರಸರಿಗೆ.

ಶಾಂತರಸರು ಪವಾಡ ಕಥೆಗಳನ್ನು ವೈಚಾರಿಕವಾಗಿ, ವೈಜ್ಞಾನಿಕವಾಗಿ ಚಿತ್ರಿಸುವಲ್ಲಿ ಸಿದ್ಧಹಸ್ತರು. ಅವರ 'ಕಂಬಳಿನಾಗಿದೇ' ಎಂಬ ಸಣ್ಣಕತೆಯನ್ನು ನಾನು ನಾಟಕಕ್ಕೆ ಪರಿವರ್ತಿಸಿದೆ. ಆ ನಾಟಕವು ರಾಯಚೂರು ಜಿಲ್ಲಾ ನಾಟಕೋತ್ಸವದಲ್ಲಿ ಪ್ರಥಮ ಬಹುಮಾನ ಪಡೆಯಿತೆಂಬುದನ್ನು ನಾನು ನೆನೆದು, ಸುಖಿಸುತ್ತೇನೆ. ಇಲ್ಲಿಯೂ ಶಾಂತರಸರು ನಾಟಕವನ್ನು ತಾವು ಪರಿಶೀಲಿಸಲಿಲ್ಲ, ರಂಗಭೂಮಿಯ ಮೇಲೆ ಪ್ರದರ್ಶನವಾದಾಗ ನೋಡಿ ಆನಂದಿಸಿದರು. ಈ ನಾಟಕದ ದಿಗ್ದರ್ಶಕರಾಗಿ, ನಗೆ ಮಾರಿತಂದೆ-ವೀರಣ್ಣಗೌಡರು ಪ್ರಶಂಸೆಗೆ ಪಾತ್ರರಾದರು.

ಶಾಂತರಸರಿಗೆ ಅಕ್ಕ ಬೂದೆಮ್ಮನೆಂದರೆ ಎಲ್ಲಿಲ್ಲದ ಅಕ್ಕರೆ; ಪ್ರೀತಿ. ಶಾಂತರಸರಿಗೆ ಸಂಬಂಧಪಟ್ಟ ಕಾರ್ಯಕ್ರಮಗಳಲ್ಲಿ ಅಕ್ಕನಿರಲೇಬೇಕು. ವಿಶ್ವವಿದ್ಯಾಲಯ ಡಾಕ್ಟರೇಟ್ ಪದವಿ ನೀಡಲಿ, ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನ ನೀಡಲಿ, ಹಂಪಿ ಕನ್ನಡ ವಿಶ್ವವಿದ್ಯಾಲಯ ನಾಡೋಜ ಗೌರವ ಪದವಿ ನೀಡಲಿ, 'ಸತ್ಯಸ್ನೇಹಿ'-ಶಾಂತರಸರ ಬದುಕು-ಬರಹ ಸಾಕ್ಷ್ಯಚಿತ್ರವಿರಲಿ - ಅಲ್ಲಿ ಅಕ್ಕ ಸಾಕ್ಷಿಯಾಗಿರಬೇಕು.

ತಾಯಿಯನ್ನು ಚಿಕ್ಕಂದಿನಲ್ಲಿ ಕಳೆದುಕೊಂಡ ಶಾಂತರಸರಿಗೆ ಬೂದೆಮ್ಮ, ಶಾಂತರಸರಿಗೆ ಅಕ್ಕನಾಗದೆ, ತಾಯಿಯಾಗಿ ಪೋಷಣೆ ಮಾಡಿದಳು. ೯೨ ವರ್ಷದ ಅಕ್ಕ ಬೂದೆಮ್ಮನವರು ಒಂದರ್ಥದಲ್ಲಿ ಪರದೇಶಿಯೆ ಸರಿ.

ಶಾಂತರಸರ ಒಡನಾಟದ ೬೫ ವರ್ಷಗಳು ಕೇವಲ ಸಾಹಿತ್ಯ, ಸಂಗೀತ, ಕಲೆ, ಸಂಸ್ಕೃತಿಗೆ ಮಾತ್ರ ಸೀಮಿತವಾಗಿರಲಿಲ್ಲ, ವೈಯಕ್ತಿಕ, ಕೌಟುಂಬಿಕ ನೆಲೆಯಲ್ಲಿ ಸುಖ-ದುಃಖಗಳನ್ನು ಸಮನಾಗಿ ಹಂಚಿಕೊಂಡಿದ್ದೇವೆ. ಅನುಭವಿಸಿದ್ದೇವೆ. ಶಾಂತರಸರು ನನಗೆ ನಿಜವಾಗಿಯೂ ಸತ್ಯ ಸ್ನೇಹಿಗಳಾಗಿದ್ದರು. ಅದು ಅವರಿಗೆ ಗೊತ್ತು : ನನಗೆ ಗೊತ್ತು.

ಇಷ್ಟಿದ್ದರೂ ಎರಡು ಸಾರೆ ನಾನು ಶಾಂತರಸರೊಡನೆ ಜಗಳವಾಡಿದ್ದೇನೆ-ತೀಕ್ಷ್ಣವಾಗಿ. ಆದರೂ ಶಾಂತರಸರು ಅದನ್ನು ಗಣನೆಗೆ ತಾರದೆ, ಏನೂ ಆಗಿಲ್ಲವೆಂಬಂತೆ ನನ್ನನ್ನು ಆತ್ಮೀಯತೆಯಿಂದ ಬರಮಾಡಿಕೊಂಡಿದ್ದಾರೆ.

೬೫ ವರ್ಷಗಳು, ಯಾವ ಮಹತ್ವದ ಕಾರ್ಯಕ್ರಮಗಳಲ್ಲಿ ಅಗಲಲಾರದೆ ಇದ್ದ ನಾನು, ತೀವ್ರ ಅನಾರೋಗ್ಯದ ಕಾರಣದಿಂದಾಗಿ ಕೊನೆಯ, ಬೀಳ್ಕೊಡುವ ಸಮಾರಂಭದಲ್ಲಿ ಪಾಲ್ಗೊಳ್ಳದಿರುವುದು ನನ್ನ ಬಾಳಿನ ಘೋರದುರಂತವೆಂದು ಭಾವಿಸಿದ್ದೇನೆ.

ಮೊಟ್ಟಮೊದಲಿಗೆ, ಶಾಂತರಸರು, ವೀರಣ್ಣಗೌಡ, ನೀರಮಾನ್ವಿ ವಚನ ಸಂಗೀತದಲ್ಲಿ ಅದ್ವಿತೀಯರಾದ ಸಿದ್ಧರಾಮ ಜಂಬಲದಿನ್ನಿ ಮತ್ತು ನಾನು ಕೂಡಿ ಪ್ರಾರಂಭವಾದ ನಮ್ಮ ಗೆಳೆತನ ಚತುಷ್ಟಯರಲ್ಲಿ ಇಂದು ನಾನೊಬ್ಬನೇ! ಮಹಾನುಭಾವ ಬಸವಣ್ಣನವರು ತಮ್ಮ ಕೊನೆಗಾಲದಲ್ಲಿ ಶರಣರನ್ನು ಅಗಲಿದಾಗ ನುಡಿದ ವಚನ.

*ಜಜ್ಜನೆ ಜರಿದೆನು, ಜಜ್ಜನೆ ಜರಿದೆನು, ಜಜ್ಜನೆ ಜರಿದೆ ನೋಡಯ್ಯ*
*ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆನು, ಬಿಬ್ಬನೆ ಬಿರಿದೆ ನೋಡಯ್ಯಾ,*
*ನಾನೊಬ್ಬನೆ ಉಳಿದೆನು, ನಾನೊಬ್ಬನೆ ಉಳಿದೆನು, ನಾನೊಬ್ಬನೆ*
*ಉಳಿದೆ ನೋಡಯ್ಯ.*

ಕೂಡಲಸಂಗಮದೇವಾ, ನಿಮ್ಮ ಶರಣರನಗಲಿದ ಕಾರಣ

– ಎಂಬ ವಚನ ನೆನಪಾಗಿ ದುಃಖ ಉಮ್ಮಳಿಸುತ್ತದೆ.

ನಾಡೋಜ, ಡಾ॥ ಶಾಂತರಸರು ತಮ್ಮ ಸಾರ್ಥಕಗಳ ೮೪ ವರ್ಷ ಬಾಳಿದರು. ವಚನ ಸಾಹಿತ್ಯ, ಕನ್ನಡ ಸಾಹಿತ್ಯ ಉಳಿದಿರುವವರೆಗೆ ಕನ್ನಡಿಗರ ಹೃನ್ಮನಗಳಲ್ಲಿ ಚಿರಸ್ಥಾಯಿಯಾಗಿ ನೆಲೆಸಿರುತ್ತಾರೆ.

ಅವರಿಗೆ ನನ್ನ ಹೃತ್ಪೂರ್ವಕ ಶರಣು; ಶರಣಾರ್ಥಿ !

ಧಾರವಾಡ, ೧೬-೪-೨೦೦೮

**ಚೆನ್ನಬಸವಪ್ಪ ಬೆಟ್ಟದೂರು**
C/o ಬಿ. ಎಚ್. ಪೂಜಾರ, 'ಗಜಲಕ್ಷ್ಮಿ ಕೃಪಾ', ಮನೆ ನಂ. ೫೭
ಸಿ.ಐ.ಟಿ.ಬಿ. ಕಾಲೋನಿ, ಜಯನಗರ, ಧಾರವಾಡ - ೫೮೦ ೦೦೧

# ಮುನ್ನೂರು ರಾಮಾಯಣಗಳು !?

‘ರಾಮಾಯಣ’ ಎಂಬುದು ಒಂದು ಮಹಾಕಾವ್ಯ. ವಾಲ್ಮೀಕಿ ಬರೆದದ್ದು ಇದು ಎಂದು ಪ್ರಸಿದ್ಧವಾಗಿದೆ. ಆದರೆ ಅದೊಂದೇ ರಾಮಾಯಣವಲ್ಲ, ಅನೇಕ ರಾಮಾಯಣಗಳಿವೆ. ಹಾಗೆಂದರೆ ಆಶ್ಚರ್ಯಪಡಬೇಕಾಗಿಲ್ಲ. ಜನರು ವಿಭಿನ್ನ ರೀತಿಗಳಲ್ಲಿ ಅದನ್ನು ತಮ್ಮದಾಗಿಸಿಕೊಂಡರು. ಅಂತಹ ಅದ್ಭುತ ಕಥಾನಕ ಅದು. ರಾಮಾಯಣದ ಬೇರೆ ಬೇರೆ ರೂಪಗಳನ್ನು ಪರಿಚಯಿಸುವ ಶ್ರೀ ಎ. ಕೆ. ರಾಮಾನುಜನ್ ಅವರ ಪ್ರಬಂಧವನ್ನು ಇಲ್ಲಿ ಸಾದರ ಪಡಿಸಲಾಗಿದೆ. ದೆಹಲಿ ವಿಶ್ವವಿದ್ಯಾಲಯದ ಇತಿಹಾಸ ವಿಭಾಗದ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಓದಬೇಕಾದ ಪ್ರಬಂಧವೆಂದು ಇದನ್ನು ಸೇರಿಸಲಾಗಿತ್ತು. ಬೌದ್ಧಿಕ ದಿವಾಳಿತನ ಮತ್ತು ಸಾಂಸ್ಕೃತಿಕ ಬಾಲಿಶತನಕ್ಕೆ ಹೆಸರಾದ ಒಂದು ಪಂಥದವರು ಅದನ್ನು ವಿರೋಧಿಸಿ ಇತಿಹಾಸ ವಿಭಾಗಕ್ಕೆ ನುಗ್ಗಿ ಹಲ್ಲೆ ನಡೆಸಿದ್ದು ಆತಂಕದ ವಿಷಯ. ರಾಮಾಯಣದ ಬಗ್ಗೆ ಗೌರವವಿರುವವರು ಹಾಗೆ ಮಾಡುವುದಿಲ್ಲ, ಮಾಡಬಾರದು.

ಎ. ಕೆ. ರಾಮಾನುಜನ್

ಎಷ್ಟು ರಾಮಾಯಣಗಳು ? ಮುನ್ನೂರೇ ? ಮೂರು ಸಾವಿರವೇ ? ‘‘ಎಷ್ಟು ರಾಮಾಯಣಗಳಿವೆ ?’’ ಎಂಬ ಪ್ರಶ್ನೆ ಕೆಲವು ‘ರಾಮಾಯಣ’ಗಳ ಕೊನೆಯಲ್ಲಿ ಬರುತ್ತದೆ. ಈ ಪ್ರಶ್ನೆಗೆ ಉತ್ತರರೂಪದಲ್ಲಿ ಕೆಲವು ಕಥೆಗಳೂ ಹುಟ್ಟಿಕೊಂಡಿವೆ. ಅಂಥ ಒಂದು ಕಥೆ ಇಲ್ಲಿದೆ.

ಒಂದು ದಿವಸ ರಾಮ ಸಿಂಹಾಸನದಲ್ಲಿದ್ದಾಗ ಅವನ ಉಂಗುರ ಕೆಳಗೆ ಬಿತ್ತು. ಅದು ನೆಲದಲ್ಲಿ ತೂತು ಕೊರೆದು ಮಾಯವಾಯಿತು. ರಾಮನ ಭಂಟ ಹನುಮಂತ ರಾಮನ ಕಾಲಬುಡದಲ್ಲಿ ಕುಳಿತಿದ್ದ. ‘‘ನೋಡು , ನನ್ನ ಉಂಗುರ ಕಳೆದುಹೋಗಿದೆ. ಅದನ್ನು ಹುಡುಕಿಕೊಡು’’ ಎಂದು ರಾಮ ಹನುಮಂತನಿಗೆ ಹೇಳಿದ.

ಹನುಮಂತ ಅಲ್ಲಿ ಇಲ್ಲಿ ಅಲೆದು ಅಲೆದು ಪಾತಾಳಕ್ಕೆ ಇಳಿದ. ಪಾತಾಳದಲ್ಲಿದ್ದ ಹೆಂಗಸರು ‘‘ನೋಡಿ ನೋಡಿ, ಒಂದು ಪುಟ್ಟ ಕೋತಿ ಮೇಲಿನಿಂದ ಬಿದ್ದಿದೆ’’ ಎಂದರು. ಅವರು ಅವನನ್ನು ಹಿಡಿದು ಒಂದು ತಟ್ಟೆ (ಥಾಲಿ) ಯಲ್ಲಿಟ್ಟರು. ಭೂತರಾಜನಿಗೆ ಪ್ರಾಣಿಮಾಂಸವೆಂದರೆ ಬಲು ಇಷ್ಟ. ಇತರ ತರಕಾರಿಗಳ ಜೊತೆ ಹನುಮಂತನನ್ನು ಆಹಾರವಾಗಿ ಈ ಭೂತರಾಜನಿಗೆ ಒಪ್ಪಿಸಿದರು. ‘‘ಏನು ಮಾಡುವುದಪ್ಪಾ’’ ಎಂದು ಚಿಂತಿಸುತ್ತ ಹನುಮಂತ ತಟ್ಟೆಯಲ್ಲಿ ಕುಳಿತಿದ್ದ.

ಪಾತಾಳಲೋಕದಲ್ಲಿ ಇದೆಲ್ಲ ನಡೆಯುತ್ತಿದ್ದಾಗ ಭೂಲೋಕದಲ್ಲಿ ರಾಮ ಸಿಂಹಾಸನದ ಮೇಲೆ ಕುಳಿತಿದ್ದ. ಬ್ರಹ್ಮ ಮತ್ತು ವಸಿಷ್ಠ ಋಷಿಗಳು ಅವನನ್ನು ನೋಡಲು ಬಂದರು. ‘‘ನಾವು ನಿನ್ನ ಜೊತೆ ಏಕಾಂತದಲ್ಲಿ ಮಾತನಾಡಲು ಬಂದಿದ್ದೇವೆ. ನಮ್ಮ ಮಾತುಗಳನ್ನು ಬೇರೆ ಯಾರೂ ಕೇಳಬಾರದು. ನಾವು ಮಾತನಾಡುತ್ತಿರುವಾಗ ಬೇರೆ ಯಾರೂ ಇಲ್ಲಿಗೆ ಬರಕೂಡದು. ಆಗಬಹುದೇ ?’’ ಎಂದು ಕೇಳಿದರು. ‘‘ಆಗಲಿ, ಅದಕ್ಕೇನಂತೆ, ಬನ್ನಿ ಮಾತನಾಡೋಣ’’ ಎಂದ ರಾಮ. ಆಗ ಅವರು ಹೇಳಿದರು ‘‘ನಾವು ಪರಸ್ಪರ ಮಾತನಾಡುತ್ತಿರುವಾಗ ಯಾರಾದರೂ ಬಂದರೆ ಅವರ ತಲೆ ಕಡಿಯುತ್ತೇನೆ ಎಂದು ಆಜ್ಞೆ ಹೊರಡಿಸು’’. ‘‘ಹಾಗೇ ಆಗಲಿ’’ ಎಂದ ರಾಮ.

ಹಾಗಾದರೆ ಬಾಗಿಲನ್ನು ಕಾಯುವ ವಿಶ್ವಾಸಪಾತ್ರ ವ್ಯಕ್ತಿ ಯಾರು ? ಹನುಮಂತ ಉಂಗುರ ಹುಡುಕಲು ಹೋಗಿದ್ದಾನೆ. ರಾಮನಿಗೆ ಲಕ್ಷ್ಮಣನಲ್ಲಿ ತುಂಬಾ ವಿಶ್ವಾಸ. ಹೀಗಾಗಿ ಅವನು ಲಕ್ಷ್ಮಣನನ್ನು ಕರೆದು ಬಾಗಿಲ ಬಳಿ ಕಾವಲು ನಿಲ್ಲುವಂತೆ ಹೇಳಿದ. ‘‘ಯಾರನ್ನೂ ಒಳಗೆ ಬಿಡಬೇಡ’’ ಎಂದು ಕಟ್ಟಪ್ಪಣೆ ವಿಧಿಸಿದ.

ಸ್ವಲ್ಪ ಹೊತ್ತಿನಲ್ಲಿ ಅಲ್ಲಿಗೆ ವಿಶ್ವಾಮಿತ್ರ ಋಷಿ ಬಂದ. ‘‘ನನಗೆ ಈಗಲೆ ತುರ್ತಾಗಿ ರಾಮನನ್ನು ಕಾಣಬೇಕು. ಎಲ್ಲಿದ್ದಾನೆ ರಾಮ ? ಹೇಳು’’ ಎಂದು ನುಡಿದ.

‘‘ರಾಮ ಗಣ್ಯರ ಜೊತೆ ಸಂಭಾಷಣೆಯಲ್ಲಿದ್ದಾನೆ. ಸ್ವಲ್ಪ ತಡೆಯಿರಿ. ಈಗ ಒಳಗೆ ಹೋಗಬೇಡಿ’’ ಎಂದು ಲಕ್ಷ್ಮಣ ಬಿನ್ನವಿಸಿಕೊಂಡ.



''ನನ್ನಲ್ಲಿ ಗುಟ್ಟುಮಾಡುವ ಅಂಥ ವಿಷಯವೇನು ? ನನ್ನನ್ನು ಒಳಗೆ ಬಿಡು, ನಾನೀಗಲೇ ಹೋಗುವೆ'' ಎಂದ ವಿಶ್ವಾಮಿತ್ರ.

ಆಗ ಲಕ್ಷ್ಮಣ ''ರಾಮನ ಅನುಮತಿಯಿಲ್ಲದೆ ನಾನು ಒಳಗೆ ಬಿಡಲಾರೆ'' ಎಂದ.

''ಹಾಗಾದರೆ ಹೋಗಿ ಕೇಳಿಕೊಂಡು ಬಾ.''

''ರಾಮ ಹೊರಗೆ ಬರುವವರೆಗೆ ನಾನು ಒಳಗೆ ಹೋಗುವಂತಿಲ್ಲ. ನೀವು ಸ್ವಲ್ಪ ಹೊತ್ತು ಕಾಯುತ್ತಿರಿ.'' ವಿಶ್ವಾಮಿತ್ರ ಕೋಪಗೊಂಡು ''ನೀನು ಈಗಲೇ ಒಳಗೆ ಹೋಗಿ ನಾನು ಬಂದಿರುವುದನ್ನು ರಾಮನಿಗೆ ತಿಳಿಸದಿದ್ದರೆ ಅಯೋಧ್ಯೆ ಸುಟ್ಟು ಬೂದಿಯಾಗಲಿ ಎಂದು ಶಾಪಕೊಡುತ್ತೇನೆ'' ಎಂದ.

''ಒಳಗೆ ಹೋದರೆ ಸಾಯುತ್ತೇನೆ; ಹೋಗದಿದ್ದರೆ ಈ ಮಹಾ ಸಿಡುಕನಿಂದಾಗಿ ಅಯೋಧ್ಯೆ ನಾಶವಾಗುತ್ತದೆ. ಸಕಲ ಚರಾಚರಗಳೂ ಸುಟ್ಟು ಬೂದಿಯಾಗುತ್ತವೆ. ಆದ್ದರಿಂದ ಸರ್ವನಾಶಕ್ಕೆ ಬದಲು ನಾನೊಬ್ಬನೇ ಸಾಯುವುದು ಲೇಸು'' ಎಂದು ಲಕ್ಷ್ಮಣ ಯೋಚಿಸಿ ನೇರವಾಗಿ ಕೋಣೆಯೊಳಗೆ ಪ್ರವೇಶಿಸಿದ.

''ಏನು ವಿಷಯ ?'' ರಾಮ ಕೇಳಿದ.

''ವಿಶ್ವಾಮಿತ್ರರು ಬಂದಿದ್ದಾರೆ.''

''ಅವರನ್ನು ಒಳಕ್ಕೆ ಕಳುಹಿಸು.''

ವಿಶ್ವಾಮಿತ್ರರು ಕೋಣೆಯನ್ನು ಪ್ರವೇಶಿಸಿದರು. ಅಷ್ಟು ಹೊತ್ತಿಗೆ ಸಂಭಾಷಣೆ ಮುಗಿದಿತ್ತು. ''ಮಾನವ ಜನ್ಮದಲ್ಲಿ ನಿನ್ನ ಕಾರ್ಯ ಪರಿಸಮಾಪ್ತಿಯಾಯಿತು. ನಿನ್ನ ರಾಮಾವತಾರ ಇಲ್ಲಿಗೆ ಮುಗಿಯಿತು. ನೀನು ಈ ದೇಹ ತ್ಯಜಿಸಿ ಮತ್ತೆ ದೇವಲೋಕ ಸೇರು'' ಎಂದು ಹೇಳಲು ಬ್ರಹ್ಮ ಹಾಗೂ ವಸಿಷ್ಠರು ಬಂದಿದ್ದರು.

''ಅಣ್ಣಾ, ನೀನು ನನ್ನ ಶಿರಚ್ಛೇದ ಮಾಡಿಸಬೇಕು'' ಎಂದು ಲಕ್ಷ್ಮಣ ನುಡಿದ. ರಾಮ ತಮ್ಮನನ್ನು ''ಏಕೆ ? ನಮ್ಮ ಮಾತುಕತೆ ಅದಾಗಲೆ ಮುಗಿದಿತ್ತು. ಹೀಗಿರುವಾಗ ನಿನ್ನ ತಲೆ ಕಡಿಯಬೇಕೇ ?'' ಎಂದು ಪ್ರಶ್ನಿಸಿದ. ''ನೀನು ಹಾಗೆ ಮಾಡಕೂಡದು. ತಮ್ಮ ಎಂಬ ಕಾರಣಕ್ಕೆ ನನಗೆ ರಿಯಾಯಿತಿ ತೋರಿಸಬೇಡ. ಇದರಿಂದ ರಾಮನಾಮಕ್ಕೆ ಕಳಂಕ ತಟ್ಟುತ್ತದೆ. ನೀನು ನಿನ್ನ ಪತ್ನಿಗೂ ರಿಯಾಯಿತಿ ಕೊಡದೆ ಅವಳನ್ನು ಕಾಡಿಗಟ್ಟಿದೆ. ನನಗೆ ಶಿಕ್ಷೆಯಾಗಲೇಬೇಕು. ಇಗೋ ನಾನು ಹೊರಟೆ'' ಎಂದು ಲಕ್ಷಣ ಹೇಳಿದ.

ವಿಷ್ಣುವಿನ ತಲ್ಪವಾಗಿರುವ ಆದಿಶೇಷನೇ ಲಕ್ಷ್ಮಣನಾಗಿ ಅವತಾರವೆತ್ತಿರುವುದು. ಅವತಾರವೂ ಮುಗಿಯುತ್ತಾ ಬಂದದ್ದರಿಂದ ಆತ ನೇರವಾಗಿ ಸರಯೂ ನದಿಗೆ ತೆರಳಿ ನೀರಿನಲ್ಲಿ ಧುಮುಕಿ ಅದೃಶ್ಯನಾದ.

ರಾಮನು ಕೂಡ ಲಕ್ಷ್ಮಣ ದೇಹತ್ಯಾಗ ಮಾಡಿದೊಡನೆ ವಿಭೀಷಣ, ಸುಗ್ರೀವ ಮತ್ತು ಇತರ ಅನುಯಾಯಿಗಳನ್ನು ಕರೆಯಿಸಿಕೊಂಡು ತನ್ನ ಮಕ್ಕಳಾದ ಲವ-ಕುಶರ ಕಿರೀಟಧಾರಣ ಸಮಾರಂಭಕ್ಕೆ ಸಕಲ ಏರ್ಪಾಟು ಮಾಡಿದ. ಬಳಿಕ ಅವನು ಕೂಡ ಲಕ್ಷ್ಮಣನಂತೆ ಸರಯೂ ನದಿಯಲ್ಲಿ ಮುಳುಗಿದ.

ಇದೆಲ್ಲ ಆಗುವಾಗ ಅಧೋಲೋಕದಲ್ಲಿ ಹನುಮಂತನನ್ನು ಭೂತರಾಜನ ಬಳಿಗೆ ಕರೆದೊಯ್ದರು. ಹನುಮಂತ 'ರಾಮ ರಾಮ ರಾಮ' ಎಂದು ರಾಮನಾಮ ಪಠಿಸುತ್ತಲೇ ಇದ್ದ.

ಭೂತ ರಾಜ ಪ್ರಶ್ನಿಸಿದ ''ಯಾರು ನೀನು ?''

''ಹನುಮಂತ.''

''ಹನುಮಂತನೇ, ಇಲ್ಲಿಗೇಕೆ ಬಂದೆ ?''

''ರಾಮನ ಉಂಗುರ ಒಂದು ತೂತಿನಲ್ಲಿ ಬಿತ್ತು. ಅದನ್ನು ಹುಡುಕಿಕೊಂಡು ಬಂದೆ.''

ರಾಜ ಅತ್ತಿತ್ತ ನೋಡಿ ಸಾವಿರಾರು ಉಂಗುರಗಳಿರುವ ತಟ್ಟೆಯನ್ನು ತೋರಿಸಿದ. ಅವೆಲ್ಲ ರಾಮನ ಉಂಗುರಗಳು. ರಾಜ ತಟ್ಟೆಯನ್ನು ಹನುಮಂತನ ಮುಂದಿಟ್ಟು ''ನಿನ್ನ ರಾಮನ ಉಂಗುರವನ್ನು ಹುಡುಕಿ ತೆಗೆದುಕೋ'' ಎಂದ. ಎಲ್ಲಾ ಉಂಗುರಗಳೂ ಒಂದೇ ರೀತಿಯಾಗಿದ್ದವು. ಹನುಮಂತ ತಲೆ ಅಲುಗಿಸುತ್ತಾ ''ಇದರಲ್ಲಿ ರಾಮನ ಉಂಗುರ ಯಾವುದೋ ನಾಕಾಣೆ'' ಎಂದ.

ಆಗ ಭೂತರಾಜ ಹೇಳಿದ : ''ಈ ತಟ್ಟೆಯಲ್ಲಿ ಎಷ್ಟು ಉಂಗುರಗಳಿವೆಯೋ ಅಷ್ಟು ರಾಮರಿದ್ದಾರೆ. ನೀನು ಭೂಲೋಕಕ್ಕೆ ಹಿಂದೆ ಹೋಗುತ್ತೀಯಲ್ಲ, ಆಗ ನಿನ್ನ ರಾಮ ಅಲ್ಲಿರುವುದಿಲ್ಲ. ಈ ರಾಮಾವತಾರ ಮುಗಿಯಿತು. ರಾಮಾವತಾರ ಮುಗಿಯುತ್ತಾ ಬಂದಾಗ ಆತನ ಉಂಗುರ ಕೆಳಗೆ ಬೀಳುತ್ತದೆ. ನಾನು ಅದನ್ನು ಸಂಗ್ರಹಿಸಿಡುತ್ತೇನೆ. ನೀನಿನ್ನು ಹೋಗಬಹುದು.''

ಹನುಮಂತ ಅಲ್ಲಿಂದ ಹೊರಟ !

ಪ್ರತಿಯೊಬ್ಬ ರಾಮನಿಗಾಗಿ ಒಂದು ರಾಮಾಯಣ ಸೃಷ್ಟಿಯಾಗುತ್ತದೆ ಎಂಬುದನ್ನು ಸೂಚಿಸಲು ಈ ಕಥೆಯನ್ನು ಸಾಮಾನ್ಯವಾಗಿ ಹೇಳುತ್ತಾರೆ. ರಾಮಾಯಣದ ಸಂಖ್ಯೆಗಳ ಮತ್ತು ಅವು ದಕ್ಷಿಣ ಮತ್ತು ಆಗ್ನೇಯ ಏಷ್ಯಾದ ಮೇಲೆ ಎರಡೂವರೆ ಸಾವಿರ ವರ್ಷಗಳಿಂದ ಬೀರುತ್ತಾ ಬಂದಿರುವ ಪ್ರಭಾವದ ವ್ಯಾಪ್ತಿ ವಿಸ್ಮಯಕರವಾಗಿದೆ. ರಾಮನ ಕಥೆಯನ್ನು ಒಳಗೊಂಡ ಭಾಷೆಗಳ ಪಟ್ಟಿ ನೋಡಿದರೆ ನಮ್ಮ ಉಸಿರು ನಿಂತೀತು; ಅಸ್ಸಾಮಿ, ಬಾಲಿ, ಬಂಗಾಳಿ, ಕಾಂಬೋಡಿಯನ್, ಚೀನಿ, ಗುಜರಾತಿ, ಜಾವ, ಕನ್ನಡ, ಕಾಶ್ಮೀರಿ, ಕೊಟ್ನೀಸ್, ಲಾವೋಶಿಯನ್, ಮಲೇಶ್ಯನ್, ಮರಾಠಿ, ಒರಿಯ, ಪ್ರಾಕೃತ, ಸಂಸ್ಕೃತ, ಸಂತಾಲಿ, ಸಿಂಹಳಿ, ತಮಿಳು, ತೆಲುಗು, ಥಾಯ್, ಟಿಬೆಟನ್. ಶತಮಾನಗಳುದ್ದಕ್ಕೂ, ಈ ಕೆಲವು ಭಾಷೆಗಳು ರಾಮ ಕಥೆಯ ಒಂದಕ್ಕಿಂತ ಅಧಿಕ 'ವಕ್ತವ್ಯ' (ಹೇಳುವಿಕೆ-ನಿರೂಪಣೆ)ಗಳಿಗೆ ಎಡೆಮಾಡಿ ಕೊಟ್ಟಿವೆ. ಸಂಸ್ಕೃತ ಭಾಷೆಯೊಂದರಲ್ಲೇ ಕಾವ್ಯ, ಪುರಾಣ ಎಂದು ಸುಮಾರು ೨೫ಕ್ಕೂ ಅಧಿಕ ವಕ್ತವ್ಯಗಳು ಕಂಡುಬರುತ್ತವೆ. ಇನ್ನು ಅಭಿಜಾತ ಹಾಗೂ ಜಾನಪದ ಪರಂಪರೆಯಲ್ಲಿ

ಕಂಡುಬರುವ ರೂಪಕ, ನಾಟಕ ಹಾಗೂ ನೃತ್ಯರೂಪಕದ ಪ್ರಕಾರಗಳನ್ನು ಪರಿಗಣಿಸಿದರೆ ರಾಮಾಯಣಗಳ ಸಂಖ್ಯೆ ಇಮ್ಮಡಿ ಮುಮ್ಮಡಿಯಾಗುತ್ತದೆ. ಈ ಸಂಖ್ಯೆಗೆ ಗೊಂಬೆಯಾಟ, ಮೊಗವಾಡ ನಾಟಕ, ಶಿಲ್ಪಕಲೆ, ನೆರಳಿನಾಟ ಇವನ್ನೆಲ್ಲ ಸೇರಿಸಬಹುದು. 'ರಾಮಾಯಣ'ದ ಅಧ್ಯಯನಕಾರ ಕ್ಯಾಮಿಲೆ ಬಲ್ಕ್ (೧೯೫೦) ಅವರು ಮುನ್ನೂರು ವಕ್ತವ್ಯಗಳನ್ನು ಗುರುತಿಸಿದ್ದಾರೆ. "ತಿಣುಕಿದನು ಫಣಿರಾಯ ರಾಮಾಯಣದ ಕವಿಗಳ ಭಾರದಲಿ." ಹೀಗಾಗಿ ಹದಿನಾಲ್ಕನೆಯ ಶತಮಾನದ ಕವಿ ಕುಮಾರವ್ಯಾಸ 'ಮಹಾಭಾರತ'ವನ್ನು ರಚಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ವಿವಿಧ ಸಂಸ್ಕೃತಿ, ಭಾಷೆ ಹಾಗೂ ಧಾರ್ಮಿಕ ಸಂಪ್ರದಾಯಗಳಲ್ಲಿ ಕಂಡುಬರುವ ಒಂದು ಕಥೆಯ ನೂರಾರು ವಿಭಿನ್ನ ವಕ್ತವ್ಯಗಳಲ್ಲಿ ಪರಸ್ಪರ ಹೊಂದಾಣಿಕೆಯಿದೆ. ಒಂದೇ ಕಥೆ ಅನುವಾದಕ್ಕೆ ಒಳಪಡಬಹುದು. ಅದರ "ಕಸಿಕಟ್ಟುವಿಕೆ" ಆಗಬಹುದು, ಇಲ್ಲವೆ ಸ್ಥಳಾಂತರಗೊಳ್ಳಬಹುದು.




**ವಾಲ್ಮೀಕಿ ಮತ್ತು ಕಂಬ - ಇಬ್ಬರು ಅಹಲ್ಯೆಯರು**

ಈ ನೂರಾರು ವಕ್ತವ್ಯಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. 'ಆವೃತ್ತಿ' ಅಥವಾ 'ಪಾಠಾಂತರ' ಎಂಬ ಮಾಮೂಲಿ ಬಳಕೆಯ ಪದಗಳ ಬದಲಾಗಿ ನಾನು 'ವಕ್ತವ್ಯ' ಎಂಬ ಪದವನ್ನು ಬಳಸಲು ಇಷ್ಟಪಡುತ್ತೇನೆ. ಏಕೆಂದರೆ ಆವೃತ್ತಿ ಅಥವಾ ಪಾಠಾಂತರ ಎಂಬ ಪದಗಳಲ್ಲಿ ಯಾವುದೋ ಒಂದು ಮೂಲ ಪಾಠವಿದೆ; ಅದು ಅತ್ಯಂತ ಪ್ರಾಚೀನವೂ ಮೌಲಿಕವೂ ಆದ ಸಂಸ್ಕೃತದ 'ವಾಲ್ಮೀಕಿ ರಾಮಾಯಣ' ಎಂಬ ಗ್ರಹೀತವನ್ನಿಟ್ಟುಕೊಂಡಿದೆ. ಆದರೆ, ವಾಲ್ಮೀಕಿ ರಾಮಾಯಣದ ಕಥೆಯೇ ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಯಥಾವತ್ತಾಗಿ ಬಂದುದಲ್ಲ ಎಂಬುದು ನಮಗೆ ಅಧ್ಯಯನಗಳಿಂದ ತಿಳಿದುಬರುತ್ತದೆ.

ಆರಂಭದಲ್ಲೇ ನಾವು ಕೆಲವು ವ್ಯತ್ಯಾಸಗಳನ್ನು ಗುರುತಿಸುವುದು ಒಳ್ಳೆಯದು. 'ರಾಮ ಕಥಾ' ಹಾಗೂ ವಾಲ್ಮೀಕಿ, ಕಂಬ ಅಥವಾ ಕೃತ್ತಿವಾಸ ಮೊದಲಾದ ನಿರ್ದಿಷ್ಟ ವ್ಯಕ್ತಿಗಳು ರಚಿಸಿದ ಕಾವ್ಯ – ಇವುಗಳ ನಡುವೆ ವ್ಯತ್ಯಾಸವನ್ನು ನಮ್ಮ ಸಂಪ್ರದಾಯವೇ ಎತ್ತಿ ಹೇಳುತ್ತದೆ. ಇವರು ರಚಿಸಿದ ಕೃತಿಗಳು ರಾಮಾಯಣ (ಕಂಬ ರಾಮಾಯಣ ಇತ್ಯಾದಿ) ಎಂದು ಜನಪ್ರಿಯವಾಗಿದ್ದರೂ ಕೆಲವು ಮಾತ್ರ 'ಇರಾಮಾವತಾರ', 'ರಾಮಚರಿತಮಾನಸ', 'ರಾಮಕೀನ್' ಎಂದೆಲ್ಲ ರಾಮಾಯಣ ಸಂಬಂಧಿ ಶೀರ್ಷಿಕೆ ಹೊತ್ತಿವೆ. ವಾಲ್ಮೀಕಿ ನಿರೂಪಿಸಿದ ರಾಮನ ಕಥೆಗೂ ಇವಕ್ಕೂ ಅಂತರವಿದೆ. 'ಕಥಾ' ಹಾಗೂ 'ಕಾವ್ಯ' ನಡುವಣ ಈ ಸಾಂಪ್ರದಾಯಿಕ ವ್ಯತ್ಯಾಸವು ಫ್ರೆಂಚ್ ಭಾಷೆಯಲ್ಲಿ ಕಂಡುಬರುವ 'ಸುಜೆ' ಹಾಗೂ 'ರೆಸಿ'ಗೆ ಅಥವಾ ಇಂಗ್ಲಿಷಿನ ಕಥೆ ಹಾಗೂ ಕಥನ ನಡುವಣ ವ್ಯತ್ಯಾಸಕ್ಕೆ ಸಂವಾದಿಯಾಗಿದೆ (ಚಾಟ್‌ಮನ್ ೧೯೭೮). ಅಲ್ಲದೆ ಇದು ವಾಕ್ಯ ಹಾಗೂ ಮಾತಿನ ಕ್ರಿಯೆಯ ನಡುವಣ ಅಂತರಕ್ಕೂ ಸಂವಾದಿಯಾಗಿದೆ. ಎರಡೂ ವಕ್ತವ್ಯಗಳಲ್ಲಿ ಕಥೆ ಒಂದೇ ಆಗಿರಬಹುದು. ಆದರೆ ಕಥನದಲ್ಲಿ ವ್ಯಾಪಕ ವ್ಯತ್ಯಾಸಗಳಾಗಬಹುದು. ಕಥಾಭಿತ್ತಿ ಹಾಗೂ ಘಟನಾವಳಿಗಳ ಕ್ರಮಾನುಗತಿ ಒಂದೇ ಆಗಿದ್ದರೂ ಶೈಲಿ, ವಿವರಗಳು, ಧ್ವನಿ ಹಾಗೂ ಸಂರಚನೆಯಲ್ಲಿ ಮತ್ತು ಒಟ್ಟಾರೆ ಪರಿಣಾಮದಲ್ಲಿ ಅಗಾಧ ಅಂತರ ಕಂಡುಬರಬಹುದು.

'ಒಂದೇ' ಪ್ರಕರಣದ ಎರಡು ವಕ್ತವ್ಯಗಳನ್ನು ನಾವಿಲ್ಲಿ ಗಮನಿಸೋಣ. ಈ ಎರಡೂ ಪ್ರಕರಣಗಳು ಕಥಾನಕದಲ್ಲಿ ಒಂದೇ ಸಂದರ್ಭದಲ್ಲಿ ಘಟಿಸುತ್ತವೆ. ಮೊದಲನೆಯದು ವಾಲ್ಮೀಕಿಯ 'ರಾಮಾಯಣ'ದ (ಸಂಸ್ಕೃತ) ಬಾಲಕಾಂಡದಲ್ಲಿ ಕಂಡುಬರುತ್ತದೆ. ಎರಡನೆಯದನ್ನು ಕಂಬನ 'ಇರಾಮಾವತಾರ' (ತಮಿಳು)ದ 'ಬಾಲಕಾಂಡಮ್'ನಿಂದ ಆಯ್ದುಕೊಳ್ಳಲಾಗಿದೆ. ಎರಡೂ ಅಹಲ್ಯೆಯ ಕಥೆಯನ್ನು ನಿರೂಪಿಸುತ್ತವೆ.

ಈ ಎರಡೂ ವಕ್ತವ್ಯಗಳಲ್ಲಿರುವ ಕೆಲವು ವ್ಯತ್ಯಾಸಗಳನ್ನು ಗಮನಿಸೋಣ. ವಾಲ್ಮೀಕಿಯ ಕಾವ್ಯದಲ್ಲಿ ಇಂದ್ರ ವ್ಯಾಮೋಹಿತಳಾದ ಅಹಲ್ಯೆಯ ಜೊತೆ ಸರಸವಾಡುತ್ತಾನೆ. ಕಂಬ ರಾಮಾಯಣದಲ್ಲಿ, ತಾನು ತಪ್ಪು ನಡೆಯುತ್ತಿದ್ದೇನೆಂದು ಅಹಲ್ಯೆಗೆ ಅರಿವಾಗುತ್ತದೆ; ಆದರೆ ಬಹಿಷ್ಕೃತವಾದ ಆ ಆನಂದವನ್ನು ಕೈಬಿಡಲು ಆಕೆಗೆ ಮನಸ್ಸಿಲ್ಲ. ಆಕೆಯ ಋಷಿ ಪತಿ ಪ್ರಚಂಡ ಕೋಪಿಷ್ಠನೆಂಬುದನ್ನು ಕಾವ್ಯದಲ್ಲಿ ಮೊದಲೇ ಸೂಚಿಸಲಾಗಿದೆ. ಈ ಎಲ್ಲ ವಿವರಗಳು ಸೇರಿಕೊಂಡದ್ದರಿಂದ ಶೀಲಭಂಗದ ಸಂದರ್ಭಕ್ಕೆ ಒಂದು ಮನೋವೈಜ್ಞಾನಿಕ ಸೂಕ್ಷ್ಮತೆ ಬಂದೊದಗಿದೆ. ಇಂದ್ರನಾದರೋ ಒಂದು ಬೆಕ್ಕಿನ ರೂಪದಲ್ಲಿ ಆಶ್ರಮದಿಂದ ತಪ್ಪಿಸಿಕೊಂಡು ಹೋಗಲು ಪ್ರಯತ್ನಿಸುತ್ತಾನೆ. ಇದೊಂದು ಶುದ್ಧಾಂಗ ಜಾನಪದೀಯ ಆಶಯವಾಗಿದೆ (ಹನ್ನೊಂದನೆಯ ಶತಮಾನದ ಸಂಸ್ಕೃತ ಸಂಕಲನ 'ಕಥಾ ಸರಿತ್ಸಾಗರ'ದಲ್ಲೂ ಇದು ಕಂಡುಬಂದಿದೆ. (ನೋಡಿ-ಟಾನಿ ೧೯೨೭). 'ಸಹಸ್ರಯೋನಿ'ಯಾಗು ಎಂಬುದಾಗಿ ಇಂದ್ರ ಶಪಿಸಲ್ಪಡುತ್ತಾನೆ. ಮುಂದೆ ಅದನ್ನು ಸಹಸ್ರಾಕ್ಷ ಎಂದು ಬದಲಿಸಲಾಗುತ್ತದೆ. ಅಹಲ್ಯೆ ಕಲ್ಲಾಗುತ್ತಾಳೆ. ಕಾವ್ಯದಲ್ಲಿ ಅವರವರು ಮಾಡಿದ ಅಪರಾಧಕ್ಕೆ ತಕ್ಕ ಶಾಸ್ತಿಯಾಗುತ್ತದೆ.

ಇಂದ್ರ ತನ್ನ ಕಾಮಪಿಪಾಸುತನಕ್ಕೆ ತಕ್ಕ ಚಿಹ್ನೆಯನ್ನು ದೇಹದಲ್ಲಿ ಧರಿಸಿದರೆ, ಅಹಲ್ಯೆ ಭಾವಶೂನ್ಯ ಕಲ್ಲಾಗುತ್ತಾಳೆ. ವಾಲ್ಮೀಕಿಯ ಕಾವ್ಯದಲ್ಲಿ ಕಾಣಸಿಗದ ಈ ಆಶಯಗಳು ದಕ್ಷಿಣ ಭಾರತದ ಜಾನಪದ ಸಂಪ್ರದಾಯ ಮತ್ತು ದಕ್ಷಿಣದ ಇತರ ರಾಮಕಥೆಗಳಲ್ಲಿ, ಶಾಸನಗಳಲ್ಲಿ, ಪ್ರಾಚೀನ ತಮಿಳು ಕಾವ್ಯಗಳಲ್ಲಿ ಹಾಗೂ ಇತರ ಮೂಲಗಳಲ್ಲಿ ಕಂಡುಬರುತ್ತವೆ. ಕಂಬನು ಇಲ್ಲಿ ಹಾಗೂ ಬೇರೆ ಭಾಗಗಳಲ್ಲಿ ತನಗೂ ಮೊದಲಿನ ವಾಲ್ಮೀಕಿಯ ಸಾಹಿತ್ಯವನ್ನು ಸಂಪೂರ್ಣವಾಗಿ ಬಳಸಿಕೊಳ್ಳುವುದಲ್ಲದೆ ಹಲವು ಪ್ರಾದೇಶಿಕ ಜಾನಪದ ಪರಂಪರೆಗಳನ್ನೂ ಅನಾವರಣಗೊಳಿಸುತ್ತಾನೆ. ಅವನ ಮೂಲಕವೇ ಈ ಜಾನಪದ ಪರಂಪರೆಗಳು ಇತರ ರಾಮಾಯಣಗಳ ಭಾಗವಾಗಿವೆ.

ತಂತ್ರದ ದೃಷ್ಟಿಯಿಂದಲೂ ಕೂಡ ವಾಲ್ಮೀಕಿಗಿಂತಲೂ ಹೆಚ್ಚಿನ ನಾಟಕೀಯತೆಯನ್ನು ಕಂಬ ಸಾಧಿಸುತ್ತಾನೆ. ರಾಮಪಾದ ಸೋಕಿದೊಡನೆ ಕಗ್ಗಲ್ಲಿನಂತಿದ್ದ ಅಹಲ್ಯೆ ಸಜೀವವಾಗುತ್ತಾಳೆ; ಆ ಬಳಿಕವೇ ಅವಳ ಕಥೆಯನ್ನು ನಿರೂಪಿಸಲಾಗುತ್ತದೆ. ಎತ್ತರದ ದಿಣ್ಣೆಯಲ್ಲಿ ರಾಮನಿಗಾಗಿ ಕಾಯುತ್ತಿರುವಂತಿರುವ ಕಗ್ಗಲ್ಲು ಅತ್ಯಂತ ಮಾರ್ಮಿಕವಾದ ಸಂಕೇತವಾಗಿದೆ. ಹೀಗೆ ಅಹಲ್ಯೆ ಮತ್ತೆ ರಕ್ತಮಾಂಸಗಳ ಮಾನುಷ ರೂಪಧಾರಣಮಾಡುವುದು ಹೃದಯಸ್ಪರ್ಶಿಯಾದ ಭಕ್ತಿ ಪ್ರದರ್ಶನಕ್ಕೆ ಎಡೆಮಾಡಿಕೊಡುತ್ತದೆ. ಸುಪ್ತವಾಗಿದ್ದ ಆತ್ಮ ಜಾಗೃತಗೊಂಡು ದೇವನಲ್ಲಿ ಲೀನವಾಗಲು ಹಾತೊರೆಯುವುದಕ್ಕೆ ಸಂಕೇತವಾಗುತ್ತದೆ.

ಕಾವ್ಯದಲ್ಲಿ ರಾಮನು ರಾಕ್ಷಸಿ ತಾಟಕಿಯನ್ನು ಸಂಹಾರಮಾಡುವ ಪ್ರಕರಣದೊಂದಿಗೆ ಅಹಲ್ಯೆಯ ಪ್ರಕರಣವು ಹೆಣೆದುಕೊಂಡಿದೆ. ತಾಟಕಿಯ ಪ್ರಕರಣದಲ್ಲಿ ರಾಮನು ಅನಿಷ್ಟ ನಿವಾರಕ; ತನ್ನ ಶತ್ರುಗಳ ಪಾಲಿಗೆ ಸಂತಾನ ಧ್ವಂಸಕ ಹಾಗೂ ಸಾಕ್ಷಾತ್ ಮೃತ್ಯು ಸ್ವರೂಪಿ. ಅಹಲ್ಯೆಯ ಪ್ರಕರಣದಲ್ಲಿ ಆತ ಅಹಲ್ಯೋದ್ಧಾರಕ, ಸಮೃದ್ಧಿ ಹಾಗೂ ಫಲವತ್ತತೆಯನ್ನು ಕರುಣಿಸುವ ನೀಲಮೇಘ ಶ್ಯಾಮ. ಉದಾರದಾನಿ ಹಾಗೂ ಶತ್ರುಸಂಹಾರಕ ಮತ್ತು ತಮಿಳು ನಾಯಕನೆಂದು ಕಂಬನ ಕಾವ್ಯದ ಉದ್ದಕ್ಕೂ ರಾಮನನ್ನು ಚಿತ್ರಿಸಲಾಗಿದೆ. ಇಹ ಜೀವನದ ಜಂಜಡಗಳಲ್ಲಿ ಮುಳುಗಿದ ಚೇತನಗಳನ್ನು ವಿಮೋಚನಗೊಳಿಸಲೆಂದೇ ರಾಮನ ಅವತಾರವಾಗಿದೆ ಎಂಬುದನ್ನು ಅಹಲ್ಯೋದ್ಧಾರದ ಪ್ರಕರಣದ ಮೂಲಕ ಭಕ್ತಿಪರವಾದ ದೃಷ್ಟಿಯು ಪ್ರತಿಪಾದಿಸುತ್ತದೆ.

ವಾಲ್ಮೀಕಿಯಲ್ಲಾದರೋ, ರಾಮನ ಪಾತ್ರವು ಕೇವಲ ದೇವಮಾನವನಂತೆ ಚಿತ್ರಿತವಾಗಿದೆ. ಆತ ಮಾನುಷರೂಪದ ಹಾಗೂ ಮನುಷ್ಯ ಜನ್ಮದ ಎಲ್ಲ ಇತಿಮಿತಿಗಳಿಗೆ ಬದ್ಧನಾಗಿ ಬದುಕಬೇಕು. ರಾಮನ ದೈವಿಶಕ್ತಿ, ರಾವಣನ ವಧೆಗೆ ಆತ ಅವತಾರ ತಾಳಿದ್ದು ಮತ್ತು ಮಹಾಕಾವ್ಯದ ಮೊದಲ ಹಾಗೂ ಕೊನೆಯ ಕಾಂಡಗಳಲ್ಲಿ ರಾಮನನ್ನು ದೇವರೆಂದು ಬಣ್ಣಿಸುವುದು ಇವೆಲ್ಲ ಪ್ರಕ್ಷಿಪ್ತಗಳೆಂದು ಕೆಲವರು ವಾದಿಸುತ್ತಾರೆ. ಅದು ಹೇಗಾದರೂ ಇರಲಿ, ಕಂಬನ ಕೃತಿಯಲ್ಲಿ ಆತ ನಿಶ್ಚಯವಾಗಿಯೂ ದೇವರೇ. ಹನ್ನೆರಡನೆಯ ಶತಮಾನದಲ್ಲಿ ಕಂಬನು ತಮಿಳು ಭಕ್ತಿಪಂಥದ ಪ್ರಭಾವದಿಂದಾಗಿ ಕಾವ್ಯ ರಚನೆ ಮಾಡಿದ. ಹೀಗಾಗಿ ಕಂಬನಿಗೆ ರಾಮ 'ದುಷ್ಟ ಶಿಕ್ಷಣ ಶಿಷ್ಟ ರಕ್ಷಣ'ದ ಜವಾಬ್ದಾರಿ ಹೊತ್ತ ದೇವರಾಗಿ ಕಾಣುತ್ತಾನೆ. ಈ ಸರಣಿಯಲ್ಲಿ ಅಹಲ್ಯೆಯ ಭೇಟಿ ಮೊದಲನೆಯದು. ಕೊನೆಗೆ ಇದು ರಾವಣನ ಮುಖಾಮುಖಿಯೊಂದಿಗೆ ಮುಕ್ತಾಯವಾಗುತ್ತದೆ. ಕಂಬನ ಗುರು ಎನಿಸಿದ ನಮ್ಮಾಳ್ವಾರ್ (ಒಂಬತ್ತನೆಯ ಶತಮಾನ ?) ಪಾಲಿಗೆ ರಾಮ ಸಚರಾಚರಗಳ ರಕ್ಷಕ. ನಮ್ಮಾಳ್ವಾರ್ ರಾಮನನ್ನು ಕಂಡರಿಸಿದ ರೀತಿಯಲ್ಲೇ ಕಂಬನ ಕಾವ್ಯವು ಕೂಡ ಆತನನ್ನು ಚಿತ್ರಿಸುತ್ತದೆ.

ಹೀಗೆ ಅಹಲ್ಯೆಯ ಪ್ರಕರಣವು ಮೂಲಭೂತವಾಗಿ ಎರಡೂ ಕಾವ್ಯಗಳಲ್ಲಿ ಒಂದೇ ಆಗಿದ್ದರೂ ಅದರ ಹೆಣಿಗೆ, ವಿನ್ಯಾಸ ಹಾಗೂ ಅದಕ್ಕೆ ನೀಡಿದ ಮೆರುಗು ಇವುಗಳಲ್ಲಿ ಅಗಾಧ ಅಂತರ ಕಂಡುಬರುತ್ತದೆ. ಅನಂತರದ ಕವಿಯ ಕಾವ್ಯದಲ್ಲಿ ಕಂಡುಬರುವ ಕಾವ್ಯ

ಸೌಂದರ್ಯಕ್ಕೆ ಪೂರ್ವಸೂರಿಯ ಕಾವ್ಯದ ಕಲಾತ್ಮಕ ಬಳಕೆಯೇ ಕಾರಣವೆನ್ನಬಹುದು. ಸ್ವಲ್ಪಮಟ್ಟಿಗೆ ಅನಂತರ ಬಂದ ಎಲ್ಲ ರಾಮಾಯಣಗಳೂ ಪೂರ್ವೋಕ್ತ ಕಾವ್ಯದ ವಿವರಗಳನ್ನೇ ಆಧರಿಸಿವೆ. ಅವೆಲ್ಲ ರಾಮಾಯಣದ ರೂಪಾಂತರಗಳು. ನನಗೆ ಬಹಳ ಪ್ರಿಯವಾದ ಉದಾಹರಣೆಯೊಂದನ್ನು ಇಲ್ಲಿ ಉಲ್ಲೇಖಿಸದೆ ಇರಲಾರೆ. ಅದೆಂದರೆ, ಅನಂತರ ಬಂದ ಹಲವು ರಾಮಾಯಣಗಳಲ್ಲಿ (೧೬ನೆಯ ಶತಮಾನದ ಅಧ್ಯಾತ್ಮ ರಾಮಾಯಣ ಇತ್ಯಾದಿ) ರಾಮ ವನವಾಸಕ್ಕೆ ಹೊರಟು ನಿಂತಾಗ ಸೀತೆಯು ತನ್ನ ಜೊತೆ ಕಾಡಿಗೆ ಬರುವುದನ್ನು ಇಷ್ಟಪಡುವುದಿಲ್ಲ. ಸೀತೆ ಅವನ ಜೊತೆ ವಾದ ಮಾಡುತ್ತಾಳೆ. ಪತ್ನಿಯಾದವಳು ಪತಿಯ ಕಷ್ಟಗಳಲ್ಲಿ ಭಾಗಿಯಾಗಬೇಕು. ಆದುದರಿಂದ ರಾಮನ ಜೊತೆ ತಾನೂ ವನವಾಸ ಅನುಭವಿಸಬೇಕು ಎಂದೆಲ್ಲ ಆಕೆ ಮಾಮೂಲಿಯಾದ ತರ್ಕ ಹೂಡುತ್ತಾಳೆ. ರಾಮ ಒಪ್ಪಿಗೆ ಕೊಡದಿದ್ದಾಗ ಕೋಪಗೊಳ್ಳುತ್ತಾಳೆ. ಆಕೆಯ ಸಹನೆಯ ಕಟ್ಟೆ ಒಡೆಯುತ್ತದೆ. ಇಷ್ಟರವರೆಗೆ ಅಸಂಖ್ಯಾತ ರಾಮಾಯಣಗಳು ರಚಿತವಾಗಿವೆ. ರಾಮನ ಜೊತೆ ಸೀತೆ ಕಾಡಿಗೆ ಹೋಗದೇ ಇರುವ ಯಾವುದಾದರೂ ರಾಮಾಯಣದ ಬಗ್ಗೆ ನಿಮಗೇನಾದರು ಗೊತ್ತಿದೆಯೇ ? ಈಗ ವಾದದಲ್ಲಿ ಸೀತೆಯ ಕೈಮೇಲಾಗುತ್ತದೆ. ಆಕೆ ರಾಮನ ಜೊತೆ ಕಾಡಿಗೆ ಹೊರಟು ನಿಲ್ಲುತ್ತಾಳೆ. (ಅಧ್ಯಾತ್ಮ ರಾಮಾಯಣ ೨.೪.೭೭-೮ ನೋಡಿ ನಾಥ್ ೧೯೧೩, ೩೯). ಈ ಆಶಯ ಕೂಡ ಒಂದಕ್ಕಿಂತ ಹೆಚ್ಚು ರಾಮಾಯಣಗಳಲ್ಲಿ ಉಲ್ಲೇಖಿತವಾಗಿದೆ.

ಕಂಬನ ತಮಿಳು ರಾಮಾಯಣವು ತನ್ನದೇ ಆದ ವಿಶೇಷ ಪ್ರಭಾವವಲಯಕ್ಕೆ ಹಾಗೂ ಪ್ರತಿರೂಪಗಳಿಗೆ ಹಾದಿಮಾಡಿಕೊಡುತ್ತದೆ. ತೆಲುಗು ಭಾಷೆಯಲ್ಲಿ ತೆಲುಗು ರಾಮಾಯಣವಾಗಿಯೂ ದೇವಾಲಯದ ಪೂಜಾವಿಧಿಗಳ ಸಂದರ್ಭದಲ್ಲಿ ಮಲೆಯಾಳ ಪ್ರಾಂತ್ಯದಲ್ಲಿ ನಾಟಕ ರೂಪವಾಗಿಯೂ ಕಂಡುಬಂದಿದ್ದು ಇದು ಆಗ್ನೇಯ ಏಷ್ಯದಲ್ಲಿ ರಾಮಕಥೆ ಪ್ರಚಲಿತಕ್ಕೆ ಬರಲು ಕಾರಣವಾಯಿತು. ಹದಿನಂಟನೆಯ ಶತಮಾನದ ಥಾಯ್ ಭಾಷೆಯ 'ರಾಮ್ ಕೀನ್' ಈ ತಮಿಳು ಮಹಾಕಾವ್ಯದ ವಿಶೇಷ ಪ್ರಭಾವಕ್ಕೆ ಒಳಗಾಗಿದೆ ಎಂಬುದು ಈಗಾಗಲೆ ಸಿದ್ಧವಾದ ವಿಷಯ. ಉದಾಹರಣೆಗೆ, ಥಾಯ್ ಕೃತಿಯಲ್ಲಿ ಕಂಡುಬರುವ ಹಲವು ಪಾತ್ರಗಳ ಹೆಸರುಗಳು ಸಂಸ್ಕೃತ ಹೆಸರುಗಳಲ್ಲ, ಅವು ಮುಖ್ಯವಾಗಿ ತಮಿಳು ಹೆಸರುಗಳು. (ಸಂಸ್ಕೃತದಲ್ಲಿ 'ಋಷ್ಯಶೃಂಗ' – ತಮಿಳಿನಲ್ಲಿ 'ಕಲೈಕ್ಕೋಟ್ಟು' ಆಗಿದೆ. ಈ 'ಕಲೈಕ್ಕೋಟ್ಟು' ಪದವೇ ಥಾಯ್ ಕೃತಿಯಲ್ಲಿ ಕಂಡುಬರುತ್ತದೆ.) ತುಲಸೀದಾಸನ ಹಿಂದಿ ಭಾಷೆಯ 'ರಾಮಚರಿತ ಮಾನಸ' ಮತ್ತು ಮಲೇಶ್ಯದ 'ಹಿಕಾಯತ್ ಸೆರಿ ರಾಮ' ಕಾವ್ಯಗಳಲ್ಲಿ ಕಂಡುಬರುವ ಹಲವು ವಿವರಗಳಿಗೆ ಕಂಬ ರಾಮಾಯಣವೇ ಮೂಲ (ಸಿಂಗಾರವೇಲು ೧೯೬೮).

ಹೀಗೆ ವಿವಿಧ ರೀತಿಯಲ್ಲಿ 'ಕಸಿ ಕಟ್ಟುವ' ಕೆಲಸ ನಡೆಯುತ್ತದೆ. ಕೆಲವು ಭಾಷೆಗಳಲ್ಲಿ ಚಹಾಕ್ಕೆ ಸಂಬಂಧಿಸಿದ ಶಬ್ದವು ಉತ್ತರ ಚೀನಾದ ಉಪಭಾಷೆಯ ಮೂಲದಿಂದ ಬಂದುದಾಗಿದ್ದರೆ ಮತ್ತೆ ಕೆಲವು ಭಾಷೆಗಳಲ್ಲಿ ದಕ್ಷಿಣದ ಉಪಭಾಷಾಮೂಲದಿಂದ ಉತ್ಪನ್ನವಾಗಿರುತ್ತದೆ. ಇಂಗ್ಲಿಷ್ ಮತ್ತು ಫ್ರೆಂಚ್ ಮೊದಲಾದ ಭಾಷೆಗಳಲ್ಲಿ 'ಟೀ'ಗೆ ಸಂಬಂಧಿಸಿದ ಪದವಿದ್ದರೆ ಹಿಂದಿ ಮತ್ತು ರಷ್ಯನ್ ಮೊದಲಾದ ಭಾಷೆಗಳಲ್ಲಿ 'ಚಾಯ್' ಎಂಬ ಪದವಿದೆ. ಅದೇ ರೀತಿ, ರಾಮ ಕಥೆಯು ಸಂತೋಷ ದೇಸಾಯಿಯವರ ಪ್ರಕಾರ ಮೂರು ಮಾರ್ಗಗಳಲ್ಲಿ ಸಂಚರಿಸಿರಬೇಕು. ಭೂಮಾರ್ಗವಾಗಿ ಅದು ಉತ್ತರದ ಹಾದಿಯಲ್ಲಿ ಪಂಜಾಬ್ ಮತ್ತು ಕಾಶ್ಮೀರದಿಂದ ಚೀನಾ, ಟಿಬೆಟ್ ಮತ್ತು ಪೂರ್ವ ತುರ್ಕಿಸ್ಥಾನಕ್ಕೆ, ಸಮುದ್ರ ಮಾರ್ಗವಾಗಿ ದಕ್ಷಿಣದ ಹಾದಿಯಲ್ಲಿ ಗುಜರಾತ್ ಮತ್ತು ದಕ್ಷಿಣ ಭಾರತದಿಂದ ಜಾವ, ಸುಮಾತ್ರ ಮತ್ತು ಮಲಯಕ್ಕೆ, ಮತ್ತೆ ಭೂಮಾರ್ಗವಾಗಿ ಪೂರ್ವದ ಹಾದಿಯಲ್ಲಿ ಬಂಗಾಳದಿಂದ ಬರ್ಮ, ಥಾಯ್ಲೆಂಡ್ ಮತ್ತು ಲಾವೋಸ್‌ಗೆ ಸಂಚರಿಸಿರ ಬೇಕು. ವಿಯೆಟ್ನಾಂ ಮತ್ತು ಕಾಂಬೋಡಿಯ ದೇಶಗಳಿಗೆ ರಾಮಕಥೆಯು ಸ್ವಲ್ಪಮಟ್ಟಿಗೆ ಜಾವಾ ಮತ್ತು ಭಾರತದಿಂದ ಪೂರ್ವದ ಹಾದಿಯಲ್ಲಿ ಸಂಚರಿಸಿರಬಹುದು (ದೇಸಾಯಿ ೧೯೭೦.೫).

### ಜೈನ ವಕ್ತವ್ಯಗಳು

ಜೈನ ವಕ್ತವ್ಯಗಳ ಲೋಕವನ್ನು ಪ್ರವೇಶಿಸಿ ನೋಡಿದರೆ ರಾಮಕಥೆಯು ಹಿಂದೂ ಮೌಲ್ಯಗಳಿಗೆ ವ್ಯತಿರಿಕ್ತವಾಗಿರುವುದು ಎದ್ದುಕಾಣುತ್ತದೆ. ಹಾಗೆ ನೋಡಿದರೆ ಹಿಂದೂಗಳು, ಅದರಲ್ಲೂ ಬ್ರಾಹ್ಮಣರು ರಾವಣನ ಮುಖಕ್ಕೆ ಮಸಿ ಬಳಿದು ಅವನನ್ನು ದುಷ್ಟನನ್ನಾಗಿ ಚಿತ್ರಿಸಿದ್ದಾರೆ ಎಂಬ ಭಾವನೆ ಜೈನ ಗ್ರಂಥಗಳಲ್ಲಿ ವ್ಯಕ್ತವಾಗಿದೆ. ಕೆಲವು ಪ್ರಶ್ನೆಗಳೊಂದಿಗೆ ಜೈನ ಗ್ರಂಥವೊಂದು ಆರಂಭವಾಗುತ್ತದೆ. "ರಾವಣನಂಥ ಪರಾಕ್ರಮಶಾಲಿ ರಾಕ್ಷಸ ವೀರರನ್ನು ಮಂಗಗಳು ಸಂಹರಿಸಲು ಹೇಗೆ ತಾನೆ ಸಾಧ್ಯ ? ರಾವಣನಂಥ ಪ್ರತಿಷ್ಠಿತರು ಹಾಗೂ ಜೈನ ಗಣ್ಯರು ಮಾಂಸ ತಿಂದು ನೆತ್ತರು ಕುಡಿಯುವುದು ಹೇಗೆ ತಾನೆ ಸಾಧ್ಯ ? ವರ್ಷದಲ್ಲಿ ಆರು ತಿಂಗಳು ಕುಂಭಕರ್ಣ ಅದು ಹೇಗೆ ಗಾಢನಿದ್ರೆ ಮಾಡಲು ಸಾಧ್ಯ ? ಅವನ ಕಿವಿಗಳಿಗೆ ಕುದಿಯುವ ಎಣ್ಣೆ ಸುರಿದರೂ, ಆನೆಗಳು ಅವನ ಮೈಮೇಲೆ ಧಡಧಡ ಓಡಾಡಿದರೂ,

## ಕಿರುಕತೆಗಳು



ಮ. ಶ್ರೀ. ಮುರಳಿಕೃಷ್ಣ

ನಂ.೧೦೨, ೨ನೇ 'ಎ' ಕ್ರಾಸ್, ಗವಿಪುರಂ ಬಡಾವಣೆ, ಬೆಂಗಳೂರು - ೫೬೦ ೦೧೯

### ಧರ್ಮಸೂಕ್ಷ್ಮ

ಸ್ವಾಮೀಜಿಯವರಿಂದ ಧರ್ಮ ಪ್ರವಚನ ಸಾಗುತ್ತಿತ್ತು: "ಎಲ್ಲ ಧರ್ಮಗಳ ಸಾರವೂ ಒಂದೇ... ಮಾರ್ಗಗಳು ಮಾತ್ರ ವಿಭಿನ್ನ. ಭಗವಂತನನ್ನು ಬೇರೆ ಬೇರೆ ದೃಷ್ಟಿಯಿಂದ ವಿಶ್ಲೇಷಿಸುತ್ತವೆ". ಅವರ ವಾಕ್ ಪ್ರವಾಹ ಹರಿದಿತ್ತು. ಸ್ವಲ್ಪ ಸಮಯದ ನಂತರ ಅನುಯಾಯಿಯೊಬ್ಬ ಅವರ ಕಿವಿಯಲ್ಲಿ ಏನೋ ಉಸುರಿದ. ಅವರ ಮುಖದಲ್ಲಿ ಕೋಪ ತಾಂಡವಮಾಡತೊಡಗಿತು. "ಈ ಏಕದೇವೋಪಾಸಕರದ್ದು ಜಾಸ್ತಿಯಾಯಿತು. ಅವರಿಗೆ ಪಾಠ ಕಲಿಸಬೇಕು" ಎಂದು ಬಡಬಡಿಸತೊಡಗಿದರು. ಆಗ ಸಭಿಕರಲ್ಲೊಬ್ಬ "ನೀವು ಹೇಳುತ್ತಿದ್ದ ಪ್ರವಚನಕ್ಕೆ ತದ್ವಿರುದ್ಧವಾಗಿಯೆಲ್ಲಾ ಈ ಹೇಳಿಕೆ?" ಎಂದು ಪ್ರಶ್ನಿಸಿದ. ಸ್ವಾಮೀಜಿ "ನಿಮಗೆ ಧರ್ಮಸೂಕ್ಷ್ಮಗಳು ತಿಳಿಯುವುದಿಲ್ಲ" ಎಂದು ಬಾಯಿ ಮುಚ್ಚಿಸಿದರು. ಇದನ್ನು ಕೇಳಿದ ಆ ಸಭಿಕ ನಸುನಕ್ಕ

### ಆಧುನಿಕತೆ

ಧರ್ಮ ಪ್ರವಾಚಕರೊಬ್ಬರು – "ಆಧುನಿಕತೆ ಎಂದು ಕಾಲಿಟ್ಟಿತೋ... ಅಂದೇ ಶುರುವಾಯಿತು ಧರ್ಮಗಳ ಹಿನ್ನಡೆ" ಎಂದು ಸಂದೇಶ ನೀಡುತ್ತಿದ್ದರು. ಸುಸಜ್ಜಿತ ಹವಾನಿಯಂತ್ರಿತ, ನವೀನ ಸಲಕರಣೆಗಳಿದ್ದ ಸಭಾಂಗಣದಲ್ಲಿ ಅವರ ಮಾತುಗಳಿಗೆ ಚಪ್ಪಾಳೆಯೋ ಚಪ್ಪಾಳೆ !!

ರಣಕಹಳೆಗಳು ನಗಾರಿ ಭೇರಿಗಳು ಕಿವಿಯ ಬಳಿಯಲ್ಲೇ ಮೊಳಗಿದರೂ ಅವನು ಎಚ್ಚರಗೊಳ್ಳದೇ ಇರಲು ಹೇಗೆ ಸಾಧ್ಯ ? ರಾವಣನು ಇಂದ್ರನನ್ನು ಬಂಧಿಸಿ ಹೆಡೆಮುರಿಕಟ್ಟಿ ಲಂಕೆಗೆ ಕರೆತಂದನಂತೆ; ಬೇರೆ ಯಾರಿಗೆ ತಾನೆ ಹೀಗೆ ಮಾಡಲು ಸಾಧ್ಯ ?'' ಇದೆಲ್ಲ ಅತಿಯಾದ ಕಲ್ಪನಾವಿಲಾಸ, ಸುಳ್ಳು ಹಾಗೂ ತರ್ಕಕ್ಕೆ ವಿರುದ್ಧವಾದುದು.

ಈ ಪ್ರಶ್ನೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಶ್ರೇಣಿಕ ರಾಜ ಗೌತಮ ಋಷಿಯ ಬಳಿಗೆ ತೆರಳಿ ತನಗೆ ನಿಜವಾದ ಕಥೆ ಹೇಳಬೇಕೆಂದು ಪ್ರಾರ್ಥಿಸುತ್ತಾನೆ. ಆಗ ಗೌತಮನು ''ಪ್ರಾಜ್ಞರಾದ ಜೈನರು ಏನು ಹೇಳುತ್ತಾರೋ ಅದನ್ನೇ ನಾನು ನಿನಗೆ ಹೇಳುತ್ತೇನೆ. ರಾವಣನು ರಾಕ್ಷಸನಲ್ಲ, ಆತ ನರಭಕ್ಷಕನೂ ಅಲ್ಲ; ಮಾಂಸಾಹಾರಿಯೂ ಅಲ್ಲ. ಮೂರ್ಖರು ಹಾಗೂ ಅವಿಚಾರರಮಣೀಯವಾಗಿ ಯೋಚಿಸುವ ಕವಿಗಳು ಈ ಸುಳ್ಳುಗಳನ್ನು ಹೇಳುತ್ತಾರೆ'' ಎನ್ನುತ್ತಾನೆ. ಮುಂದೆ ಆತ ತಾನು ಕಂಡುಕೊಂಡ ಕಥೆಯನ್ನು ನಿರೂಪಿಸುತ್ತಾನೆ (ಚಂದ್ರ ೧೯೭೦). ವಾಲ್ಮೀಕಿ ರಾಮಾಯಣವನ್ನು ಗಮನಿಸಿ ಅದರಲ್ಲಿ ಕಂಡುಬರುವ ಹಿಂದೂ ವಿಪರೀತ ಕಲ್ಪನೆಗಳನ್ನು ಮತ್ತು ವಿಸಂಗತಿಗಳನ್ನು ವಿಮಲಸೂರಿಯ 'ಪಉಮಚರಿಯ' (ಸಂಸ್ಕೃತದ 'ಪದ್ಮಚರಿತ' ಪದಕ್ಕೆ ಪ್ರಾಕೃತದ ಸಂವಾದಿ ಪದ) ಎಂಬ ಅಭಿಧಾನದ ಜೈನ ರಾಮಾಯಣವು ತಿದ್ದಿ ನಿರೂಪಿಸುತ್ತದೆ. ಇತರ ಜೈನ ಪುರಾಣಗಳಂತೆ ಇದೂ ಕೂಡ ಪ್ರತಿಪುರಾಣವೇ; ಅಂದರೆ ಪುರಾಣಕ್ಕೆ ಪ್ರತಿಯಾದ ವಿರುದ್ಧವಾದ ಪುರಾಣ ಎಂದರ್ಥ. 'ಪ್ರತಿ' ಎಂಬ ಉಪಸರ್ಗ ಜೈನ ಪರಿಭಾಷೆಯಲ್ಲಿ ವ್ಯಾಪಕವಾಗಿ ಕಂಡುಬರುತ್ತದೆ.

ಜೈನಧರ್ಮೀಯನಾದ ವಿಮಲಸೂರಿಯು ರಾಮನ ವಂಶಾವಳಿಯ ವರ್ಣನೆಯೊಂದಿಗೆ ತನ್ನ ಕಾವ್ಯವನ್ನು ಆರಂಭಿಸುವುದಿಲ್ಲ. ಅದಕ್ಕೆ ಬದಲಾಗಿ ರಾವಣನ ವರ್ಣನೆಯೊಂದಿಗೆ ಕಾವ್ಯವನ್ನು ಆರಂಭಿಸುತ್ತಾನೆ. ರಾವಣನು ಜೈನ ಪರಂಪರೆಯ ತ್ರಿಷಷ್ಠಿ ಶಲಾಕಾ ಪುರುಷರಲ್ಲಿ ಓರ್ವ. ಆತ ಓರ್ವ ವಿದ್ವಾಂಸ, ಉದಾರಿ, ತಪಸ್ಸಿನ ಬಲದಿಂದಲೇ ತನ್ನೆಲ್ಲ ಶಕ್ತಿ ಸಾಮರ್ಥ್ಯಗಳನ್ನೂ ಶಸ್ತ್ರಾಸ್ತ್ರಗಳನ್ನೂ ಸಂಪಾದಿಸಿದವನು; ಜೈನ ತೀರ್ಥಂಕರರ ಪರಮ ಭಕ್ತ. ಆತ ತನ್ನಲ್ಲಿ ಅನುರಕ್ತಳಾಗದ ಹೆಣ್ಣನ್ನು ತಾನು ಮುಟ್ಟುವುದಿಲ್ಲವೆಂದು ತೀರ್ಥಂಕರರನ್ನು ಮೆಚ್ಚಿಸಲು ಪ್ರತಿಜ್ಞೆ ಮಾಡುತ್ತಾನೆ. ಸ್ಮರಣೀಯವಾದ ಘಟನೆಯಿದು. ಆತ ಅಭೇದ್ಯವಾದ ಒಂದು ಕೋಟೆಗೆ ಮುತ್ತಿಗೆ ಹಾಕುತ್ತಾನೆ. ರಾವಣನನ್ನು ಕೂಡಬೇಕೆಂದು ಬಯಸಿದ ಅಲ್ಲಿನ ರಾಣಿ ಆತನ ಬಳಿಗೆ ತನ್ನ ದಾಸಿಯನ್ನು ಕಳುಹಿಸುತ್ತಾಳೆ. ಆಕೆ ನೀಡಿದ ಮಾಹಿತಿಯ ಮೇರೆಗೆ ರಾವಣ ಕೋಟೆಯನ್ನು ಭೇದಿಸಿ ರಾಜನನ್ನು ಸೋಲಿಸುತ್ತಾನೆ. ಯುದ್ಧದಲ್ಲಿ ಗೆದ್ದು ರಾಜನನ್ನು ಪರಾಜಿತನನ್ನಾಗಿ ಮಾಡಿದೊಡನೆಯೆ ಗೆದ್ದ ರಾಜ್ಯವನ್ನು ರಾಜನಿಗೆ ಮರಳಿಸುತ್ತಾನಲ್ಲದೆ ಮತ್ತೆ ರಾಜನನ್ನು ಸೇರಿಕೋ ಎಂದು ರಾಣಿಗೆ ಉಪದೇಶಿಸುತ್ತಾನೆ. ಬಳಿಕ ಸೀತೆ ಎಂಬ ಹೆಣ್ಣಿನಿಂದ ನಿನ್ನ ಅವಸಾನ ಖಚಿತ ಎಂದು ಜ್ಯೋತಿಷಿಗಳು ಹೇಳಿದ ಮಾತು ಕೇಳಿ ಆತ ವಿಹ್ವಲನಾಗುತ್ತಾನೆ. ಇಂಥ ರಾವಣನು ಸೀತೆಯ ಸೌಂದರ್ಯಕ್ಕೆ ಮರುಳಾಗಿ ಆಕೆಯನ್ನು ಅಪಹರಿಸಿ ವಿಧವಿಧವಾಗಿ ಮನವೊಲಿಸುವ ವಿಫಲ ಯತ್ನಗಳನ್ನು ಮಾಡುತ್ತಾನೆ. ತನ್ನ ಅಧೋಗತಿಯ ಬಗ್ಗೆ ಮರುಗುತ್ತಾನೆ. ಅಂತಿಮವಾಗಿ ಯುದ್ಧಭೂಮಿಯಲ್ಲಿ ಸಾವನಪ್ಪುತ್ತಾನೆ. ಈ ವಕ್ತವ್ಯಗಳಲ್ಲಿ ರಾವಣ ಓರ್ವ ಮಹಾನ್ ವ್ಯಕ್ತಿ. ಆದರೆ ವ್ಯಾಮೋಹಕ್ಕೆ ಬಲಿಯಾಗುವುದಿಲ್ಲ ಎಂದು ತಾನು ಮಾಡಿದ ಪ್ರತಿಜ್ಞೆಯನ್ನು ಈಡೇರಿಸಲಾರದೆ, ಕಾಮಾಭಿಲಾಷೆಯನ್ನು ನಿಗ್ರಹಿಸಲಾರದೆ ಪತಿತನಾಗುತ್ತಾನೆ. ಜೈನ ರಾಮಾಯಣಗಳ ಇನ್ನೊಂದು ಪರಂಪರೆಯಲ್ಲಿ ಸೀತೆಯು ರಾವಣನ ತಂಗಿ. ಅದು ಅವನಿಗೆ ತಿಳಿದಿರುವುದಿಲ್ಲ. ಆದರೆ ಈ ಈಡಿಪಸ್ ಸಂದರ್ಭ (ನಿಷಿದ್ಧ ಸಂಭೋಗ-ತಾಯಿಗ್ಗಂಡತನ ಇತ್ಯಾದಿ)ದಿಂದಾಗಿ ದುರಂತವು ದಾರುಣವಾಗಿದೆ.

ವಾಸ್ತವವಾಗಿ ನಮ್ಮ ಆಧುನಿಕ ದೃಷ್ಟಿಕೋನದ ಪ್ರಕಾರ ರಾವಣನು ಓರ್ವ ದುರಂತ ನಾಯಕ. ಜೈನರು ರಾವಣನ ಕಥೆಯನ್ನು ನಿರೂಪಿಸುವಾಗ ಆತ ನಮ್ಮೆಲ್ಲರ ಸಹಾನುಭೂತಿಯನ್ನು ಗಳಿಸುತ್ತಾನೆ. ಇನ್ನೊಂದು ಆಶಯವನ್ನೂ ಇಲ್ಲೇ ಪ್ರಸ್ತಾಪಿಸುತ್ತೇನೆ. ಜೈನರ ಚಿಂತನೆಯ ಪ್ರಕಾರ, ಪರಸ್ಪರ ವಿರೋಧಿಗಳಾದ ವಾಸುದೇವ – ಪ್ರತಿವಾಸುದೇವ ಎಂಬ ನಾಯಕ-ಪ್ರತಿನಾಯಕರಿರುತ್ತಾರೆ. ಇದು 'ಸ್ವ' ಮತ್ತು 'ಪರ' ಇದ್ದ ಹಾಗೆ. ಇವರು ಜನ್ಮ ಜನ್ಮಾಂತರಗಳಲ್ಲಿ ಪರಸ್ಪರ ಕಾದಾಡುತ್ತಾರೆ. ಲಕ್ಷ್ಮಣ ಹಾಗೂ ರಾವಣ ಈ ಜೋಡಿಯ ಎಂಟನೆಯ ಅವತಾರ. ಅವರು ಯುಗಯುಗಗಳಲ್ಲಿ ಜನಿಸಿ ಯುದ್ಧದಲ್ಲಿ ಒಬ್ಬರನ್ನೊಬ್ಬರು ಎದುರಿಸುತ್ತಾರೆ. ಪ್ರತಿಯೊಂದು ಯುದ್ಧದಲ್ಲೂ ವಾಸುದೇವ ಪ್ರತಿವಾಸುದೇವನನ್ನು ಕೊಲ್ಲುತ್ತಾನೆ. ಲಕ್ಷ್ಮಣನು ತನ್ನ ಪ್ರಾಣಹರಣ ಮಾಡಲು ಬಂದ ವಾಸುದೇವನೆಂಬುದು ರಾವಣನಿಗೆ ಕಟ್ಟಕಡೆಗೆ ತಿಳಿಯುತ್ತದೆ. ಆದರೂ ಶಾಂತಿ ಸಂಧಾನದ ಮಾತುಕತೆಗಳೆಲ್ಲ ವಿಫಲವಾಗಿ ಹತಾಶನಾದ ರಾವಣನು ತನ್ನ ಪ್ರತಿಸ್ಪರ್ಧಿಯನ್ನು ಯುದ್ಧದಲ್ಲಿ ಎದುರಿಸಿ ಮಾಯಾವಿ ವಿದ್ಯೆಯನ್ನು ಪ್ರದರ್ಶಿಸುತ್ತಾನೆ. ಕೊನೆಗೆ ಆತ ತನ್ನ ಚಕ್ರವನ್ನು ಲಕ್ಷ್ಮಣನತ್ತ ಎಸೆದಾಗ ಅದು ನಿಷ್ಫಲವಾಗುತ್ತದೆ. ಲಕ್ಷ್ಮಣನು ವಾಸುದೇವನೆಂಬುದು ತಿಳಿದಾಗ ಅದು ಅವನ ತಲೆ ಕತ್ತರಿಸದೆ ಅವನ ಪಾಣಿಯನ್ನು ಅಲಂಕರಿಸುತ್ತದೆ. ಲಕ್ಷ್ಮಣನು [illegible] ಪ್ರಿಯವಾದ ಆಯುಧದಿಂದ ರಾವಣನನ್ನು ವಧಿಸುತ್ತಾನೆ.

ಹಿಂದೂ ರಾಮಾಯಣಗಳಲ್ಲಿರುವ ಹಾಗೆ ಇಲ್ಲಿ ರಾಮ ರಾವಣನನ್ನು ವಧಿಸುವುದಿಲ್ಲ. ರಾಮನಾದರೋ ಜಿತಕಾಮನಾಗಿರುವ ಪವಿತ್ರ ಜೈನ ಚೇತನ. ಇದು ಆತನ ಕೊನೆಯ ಜನ್ಮ, ಹೀಗಾಗಿ ಆತ ಯಾರನ್ನೂ ಹಿಂಸಿಸುವುದಿಲ್ಲ. ರಾಮನಿಗೆ ಕೈವಲ್ಯಮೋಕ್ಷ ಲಭಿಸಿದರೆ ರಾವಣನನ್ನು ಕೊಂದ ಲಕ್ಷ್ಮಣ ನರಕಕ್ಕೆ ಹೋಗುತ್ತಾನೆ.

ಜೈನ ತೀರ್ಥಕ್ಷೇತ್ರಗಳು, ಜೈನ ಸನ್ಯಾಸಿಗಳ ಬಗೆಗಿನ ಕಥೆಗಳು, ಜೈನ ದೃಷ್ಟಾಂತಗಳು ಹಾಗೂ ದಂತಕಥೆಗಳು-ಇವೆಲ್ಲ 'ಪಉಮಚರಿಯ'ದಲ್ಲಿ ಧಾರಾಳವಾಗಿ ಕಂಡುಬರುತ್ತವೆ ಎಂಬುದನ್ನು ಬಿಡಿಸಿ ಹೇಳಬೇಕಾಗಿಲ್ಲ. ಮೇಲಾಗಿ, ಜೈನರು ತಮ್ಮನ್ನು ತಾವು ವಿಚಾರವಾದಿಗಳೆಂದು ಭಾವಿಸುತ್ತಾರೆ. ಯಜ್ಞಯಾಗಾದಿಗಳ ಮೂಲಕ ಪ್ರಾಣಬಲಿ ಕೊಡುವ ಹಿಂದೂಗಳ ಹಾಗೆ ಅವರು ಚಿತ್ರವಿಚಿತ್ರ ಕಲ್ಪನೆಗಳಿಗೆ ಮಾರುಹೋಗುವುದಿಲ್ಲ. ಪವಾಡ ಸದೃಶ ಜನನಗಳಂಥ ಪ್ರಕರಣಗಳನ್ನು (ರಾಮ ಹಾಗೂ ಆತನ ಸೋದರರು ಮನುಷ್ಯ ಸಹಜ ರೀತಿಯಲ್ಲೇ ಹುಟ್ಟುತ್ತಾರೆ), ನೆತ್ತರು ಬಲಿ ಮೊದಲಾದ ವಿಚಾರಗಳನ್ನು ಅವರು ನಿರೂಪಿಸುವುದಿಲ್ಲ. ಹತ್ತು ತಲೆಯ ರಾಕ್ಷಸ ರಾವಣ ಎಂಬ ಕಲ್ಪನೆಗೂ ಅವರು ವೈಚಾರಿಕ ಪುಷ್ಟಿಯನ್ನು ಒದಗಿಸುತ್ತಾರೆ. ಅವನು ಹುಟ್ಟಿದಾಗ ಅವನ ತಾಯಿಗೆ ನವರತ್ನಗಳ ಹಾರವನ್ನು ಕಾಣಿಕೆಯಾಗಿ ಅರ್ಪಿಸಲಾಯಿತು. ಆಕೆ ಅದನ್ನು ಅವನ ಕೊರಳಿಗೆ ಹಾಕಿದಳು. ಆತನ ಮುಖ ಆ ನವರತ್ನಗಳಲ್ಲಿ ಪ್ರತಿಫಲನವಾಗುವುದನ್ನು ಕಂಡು 'ದಶಮುಖ'ನೆಂದು ನಾಮಕರಣ ಮಾಡಿದಳು. ರಾವಣ ಹಾಗೂ ಆತನ ಕುಟುಂಬದ ಅಜ್ಜಂದಿರ ಸಂಬಂಧಹೊಂದಿದ 'ವಿದ್ಯಾಧರ'ರೇ ಕಪಿಗಳು ಹೊರತು ಅವು ಮಂಗಗಳಲ್ಲ. ಅವರು 'ವಾನರಧ್ವಜ'ರು. ಹೀಗಾಗಿ ಅವರಿಗೆ ವಾನರರು ಎಂಬ ಹೆಸರಾಯಿತು.

**ಲಿಖಿತ ಪರಂಪರೆಯಿಂದ ತೋಂಡಿ ಸಂಪ್ರದಾಯಕ್ಕೆ**

ಈಗ ದಕ್ಷಿಣ ಭಾರತದ ಒಂದು ಜಾನಪದ ರಾಮಾಯಣದತ್ತ ದೃಷ್ಟಿ ಹರಿಸೋಣ. ಈ ರಾಮಾಯಣಗಳಲ್ಲಿ ಕಥೆಯು ವಿವಿಧ ಭಾಗಗಳಾಗಿ ಕಂಡುಬರುತ್ತದೆ. ಉದಾಹರಣೆಗೆ, ಕನ್ನಡದಲ್ಲಿ ಸೀತೆಯ ಜನ್ಮ, ಅವಳ ವಿವಾಹ, ಅಗ್ನಿ ಪರೀಕ್ಷೆ, ವನವಾಸ, ಲವಕುಶರ ಜನನ, ತಂದೆಯಾದ ರಾಮನೊಡನೆ ಅವರ ಕಾಳಗ – ಹೀಗೆ ಕಥೆಯು ಖಂಡಖಂಡವಾಗಿ ಕಾಣಬರುತ್ತದೆ. ಆದರೆ 'ತಂಬೂರಿ ದಾಸಯ್ಯ'ರ ಪದಗಳಲ್ಲಿ ರಾಮಾಯಣದ ಇಡೀ ಕಥೆ ಕಂಡುಬರುತ್ತದೆ.

ಅಸ್ಪೃಶ್ಯ ಕವಿಯು ಹಾಡುವ ಈ ಜಾನಪದ ಕಥಾನಕವು ರಾವಣ (ಇಲ್ಲಿ ರಾವುಳ) ಮತ್ತು ಆತನ ಪತ್ನಿ ಮಂಡೋದರಿಯ ಪ್ರಸ್ತಾಪದೊಂದಿಗೆ ಆರಂಭವಾಗುತ್ತದೆ. ಮಕ್ಕಳಿಲ್ಲವೆಂಬ ಚಿಂತೆ ಅವರಿಗೆ. ಹೀಗಾಗಿ ರಾವುಳ ಕಾಡಿಗೆ ಹೋಗಿ ಹೊರಳು ಸೇವೆ ಮುಂತಾದ ಹರಕೆಗಳನ್ನು ಪೂರೈಸುತ್ತಾನೆ. ಜೋಗಿ ರೂಪದಲ್ಲಿರುವ ಶಿವನನ್ನು ಕಾಣುತ್ತಾನೆ. ಶಿವ ಅವನಿಗೆ ಒಂದು ಮಾಂತ್ರಿಕ ಮಾವಿನ ಹಣ್ಣು ಕೊಟ್ಟು ಹೆಂಡತಿಯ ಜೊತೆ ಹಂಚಿಕೊಂಡು ತಿನ್ನಲು ಹೇಳುತ್ತಾನೆ. ಆಗ ರಾವುಳ ಹೇಳುತ್ತಾನೆ ''ಖಂಡಿತ ನಾನು ನನ್ನ ಹೆಂಡತಿಗೆ ಹಣ್ಣಿನ ಸಿಹಿಯಾದ ಭಾಗ ಕೊಟ್ಟು ಗೊರಟೆಯನ್ನು ಚೀಪುತ್ತೇನೆ''. ಜೋಗಿಗೆ ಯಾಕೋ ಸಂಶಯ. ಅವನು ರಾವುಳನಿಗೆ ''ನೀನು ಹೇಳುವುದೊಂದು ಮಾಡುವುದೊಂದು. ನಿನ್ನ ಒಡಲಲ್ಲಿ ವಿಷವಿದೆ. ನೀನು ಬೆಣ್ಣೆಯಂಥ ಮಾತಾಡುತ್ತೀ. ಒಂದು ವೇಳೆ ನೀನು ಸುಳ್ಳಾಡಿದರೆ, ನಿನ್ನ ಕರ್ಮಫಲವನ್ನು ಅನುಭವಿಸುತ್ತೀ'' ಎಂದು ಎಚ್ಚರಿಸುತ್ತಾನೆ. ರಾವುಳ ಕನಸು ಕಾಣುವುದೊಂದು, ವಾಸ್ತವದಲ್ಲಿ ಮಾಡುವುದು ಇನ್ನೊಂದು ಎಂದು ಕವಿ ನುಡಿಯುತ್ತಾನೆ. ಪೂಜೆಗಾಗಿ ರಾವುಳ ಸುಗಂಧಭರಿತ ಪುಷ್ಪಗಳ ಜೊತೆಗೆ ಈ ಹಣ್ಣನ್ನು ತಂದಾಗ ಮಂಡೋದರಿಗೆ ಬಹಳ ಸಂತೋಷವಾಗುತ್ತದೆ. ಶಿವಪೂಜೆಯ ಬಳಿಕ ರಾವುಳ ಹೆಂಡತಿಯ ಜೊತೆ ಹಣ್ಣು ತಿನ್ನಲು ಸಿದ್ಧನಾಗುತ್ತಾನೆ. ಆದರೆ ''ಅವಳಿಗೆ ಹಣ್ಣು ಕೊಟ್ಟರೆ ನನ್ನ ಹಸಿವೆ ಹಿಂಗುವುದಿಲ್ಲ, ಅವಳ ಹೊಟ್ಟೆ ಮಾತ್ರ ತುಂಬುತ್ತದೆ'' ಎಂದು ಯೋಚಿಸಿ ಹಣ್ಣಿನ ರಸಭರಿತ ಭಾಗವನ್ನು ಗುಳಕ್ಕನೆ ನುಂಗಿಬಿಡುತ್ತಾನೆ. ಗೊರಟೆಯನ್ನು ಅವಳಿಗೆ ಕೊಡುತ್ತಾನೆ. ಅವಳದನ್ನು ಅಂಗಳದಲ್ಲಿ ಬಿಸಾಡಿದಾಗ ಚಿಗಿತು ದೊಡ್ಡ ಮಾವಿನ ಮರವಾಗಿ ಬೆಳೆಯುತ್ತದೆ. ಈ ನಡುವೆ ರಾವುಳನೇ ಗರ್ಭ ಧರಿಸುತ್ತಾನೆ. ಪ್ರತಿದಿನ ಅವನ ಗರ್ಭಕ್ಕೆ ಒಂದೊಂದೇ ತಿಂಗಳು ತುಂಬುತ್ತದೆ. ಒಂಬತ್ತು ತಿಂಗಳು ತುಂಬಿದೊಡನೆ ರಾವುಳ ಸೀನಿದಾಗ ಸೀತೆ ಹುಟ್ಟಿದಳು. ಆಕೆಗೆ ರಾವುಳ ಸೀತಮ್ಮ ಎಂದು ಹೆಸರಿಟ್ಟ.

ಕನ್ನಡದಲ್ಲಿ 'ಸೀತ' ಎಂದರೆ ಸೀನಿದ ಎಂದರ್ಥ. ತಾನು ಸೀನಿದಾಗ ಹುಟ್ಟಿದ್ದರಿಂದ ರಾವುಳ ಅವಳಿಗೆ ಸೀತ ಎಂದು ಹೆಸರಿಟ್ಟ. ಹೀಗೆ ಕನ್ನಡ ಜಾನಪದ [illegible] ಸೀತ ಎಂಬ ಹೆಸರು ನಿರ್ಧಾರಿತವಾಗುತ್ತದೆ. ಸಂಸ್ಕೃತದಲ್ಲಿ ಸೀತಾ ಎಂಬ [illegible]

ಮೂಲದ ವೃತ್ತಾಂತ ಇದೆ. ಜನಕ ರಾಜ ಹೊಲ ಉಳುವಾಗ ನೇಗಿಲ ಗೆರೆಯಲ್ಲಿ ಹೆಣ್ಣುಮಗು ಲಭಿಸಿದ್ದರಿಂದ ಆಕೆಗೆ 'ಸೀತಾ' ಎಂದು ಹೆಸರಿಟ್ಟ. 'ಸೀತಾ' ಎಂದರೆ ನೇಗಿಲಿನಿಂದಾದ ಗೆರೆ ಅಥವಾ ಸೀಳು. ಆಮೇಲೆ ರಾವುಳ ಜೋಯಿಸರಲ್ಲಿಗೆ ಹೋಗುತ್ತಾನೆ. ಶಿವನಿಗೆ ಕೊಟ್ಟ ಮಾತಿಗೆ ತಪ್ಪಿ ನಡೆದದ್ದರಿಂದ ಈ ಶಿಕ್ಷೆ ಅನುಭವಿಸಬೇಕಾಗಿದೆ ಎಂದು ಅವರು ಹೇಳುತ್ತಾರೆ. ಮಗುವಿಗೆ ಹಾಲುಣಿಸಿ ಬಟ್ಟೆ ತೊಡಿಸಿ ದೂರ ಬಿಟ್ಟುಬರುವಂತೆ ಸೂಚಿಸುತ್ತಾರೆ. ಅವನು ಆ ಮಗುವನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ಜನಕನ ಹೊಲದಲ್ಲಿ ಇಟ್ಟು ಬರುತ್ತಾನೆ.

ಸೀತೆಯು ಈ ಬಗೆಯ ಜನನದ ಕಥನದ ಬಳಿಕವೇ ಕವಿ ರಾಮ ಲಕ್ಷ್ಮಣರ ಜನನ ಹಾಗೂ ಸಾಹಸಗಳನ್ನು ಬಣ್ಣಿಸುತ್ತಾನೆ. ಆಮೇಲೆ ಇದರಲ್ಲಿ ಸೀತಾಪರಿಣಯದ ಒಂದು ದೊಡ್ಡ ಆಖ್ಯಾನವಿದೆ. ದೊಡ್ಡದಾದ ಬಿಲ್ಲನ್ನು ಎತ್ತಲಾರದೆ ಮುಗ್ಗರಿಸಿದ ರಾವಣ ಅಪಮಾನಿತನಾಗುತ್ತಾನೆ. ರಾಮ ಆ ಧನುಸ್ಸನ್ನೆತ್ತಿ ಸೀತೆಯ ಕೈಹಿಡಿಯುತ್ತಾನೆ. ಆ ಬಳಿಕ ರಾವುಳ ಆಕೆಯನ್ನು ಅಪಹರಿಸುತ್ತಾನೆ. ರಾಮ ಕಪಿಸೈನ್ಯದೊಂದಿಗೆ ಲಂಕೆಗೆ ಲಗ್ಗೆ ಹಾಕಿ ಸೀತೆಯನ್ನು ರಾವುಳನ ಬಂಧನದಿಂದ ಬಿಡಿಸಿಕೊಂಡುಬಂದು ಪಟ್ಟಾಭಿಷಿಕ್ತನಾಗುತ್ತಾನೆ. ಇದಾದ ಮೇಲೆ ಕವಿ ಸೀತೆಯ ಅಗ್ನಿ ಪರೀಕ್ಷೆಯ ವಿವರಗಳಿಗೆ ಹೊರಳಿಕೊಳ್ಳುತ್ತಾನೆ. ಅಪವಾದಕ್ಕೆ ತುತ್ತಾದ ಆಕೆ ಕಾಡುಪಾಲಾಗುತ್ತಾಳೆ. ಕಾಡಿನಲ್ಲಿ ಲವಕುಶರಿಗೆ ಜನ್ಮ ನೀಡುತ್ತಾಳೆ. ಆ ವೀರಬಾಲಕರು ರಾಮನ ಯಜ್ಞಾಶ್ವವನ್ನು ಬಂಧಿಸಿ ಅಶ್ವ ರಕ್ಷಣೆಗೆ ಬಂದ ಸೈನ್ಯವನ್ನು ಸೋಲಿಸುತ್ತಾರೆ. ಕೊನೆಗೆ ತಂದೆ ತಾಯಿ ಮಕ್ಕಳೆಲ್ಲ ಒಂದಾಗುತ್ತಾರೆ.

ಈ ಜಾನಪದ ರಾಮಾಯಣದಲ್ಲಿ ಒಂದು ವಿಶಿಷ್ಟವಾದ ರಚನೆ ಹಾಗೂ ಅವಧಾರಣೆಯನ್ನು ಗಮನಿಸಬಹುದು. ಸೀತೆಯ ಜನನ, ದತ್ತು ಸ್ವೀಕಾರ, ವಿವಾಹ, ಅಪಹರಣ, ಪುನರ್ಮಿಲನ – ಹೀಗೆ ಇದರಲ್ಲಿ ಸೀತೆಯ ವಿಷಯಕ್ಕೆ ಮತ್ತೆ ಮತ್ತೆ ಮರಳಿ ಬರಲು ಕಥೆಗಾರ ಹಾತೊರೆಯುತ್ತಾನೆ. ರಾಮಲಕ್ಷ್ಮಣರ ಜನನ, ವನವಾಸ, ರಾವಣನ ಜೊತೆ ಯುದ್ಧ – ಈ ಭಾಗಗಳು ಎಷ್ಟು ದೊಡ್ಡದಾಗಿವೆಯೋ ಸೀತಾಪರಿತ್ಯಾಗ, ಗರ್ಭಧಾರಣ ಮತ್ತು ಪುನರ್ಮಿಲನದ ಭಾಗಗಳು ಗಾತ್ರದಲ್ಲಿ ಅಷ್ಟೇ ದೊಡ್ಡದಾಗಿವೆ. ಇದಲ್ಲದೆ, ಪುರುಷನಾದ ರಾವಣನಲ್ಲಿ ಆಕೆಯ ವಿಚಿತ್ರ ಜನನವು ಗರ್ಭ ಹಾಗೂ ಶಿಶು ಜನನದ ಬಗೆಗಿನ ಪುರುಷನ ಅಸೂಯೆ ಮೊದಲಾದ ಹೊಸ ಹೊಳಹುಗಳಿಗೆ ಕಥೆಯು ಅವಕಾಶ ಕಲ್ಪಿಸಿದೆ. ಇದು ಭಾರತೀಯ ಸಾಹಿತ್ಯದಲ್ಲಿ ಮತ್ತೆ ಮತ್ತೆ ಕಾಣಿಸಿಕೊಳ್ಳುವ ವಸ್ತು; ಅಲ್ಲದೆ ತಂದೆಯು ಮಗಳನ್ನು ಕಾಡುವ ಭಾರತೀಯ ಈಡಿಪಸ್ ಆಕಾಂಕ್ಷೆಗೆ ಮತ್ತು ಈ ಪ್ರಕರಣದಲ್ಲಿ ಮಗಳೇ ತನ್ನನ್ನು ಮೋಹಿಸುವ ತಂದೆಯ ಸಾವಿಗೆ ಕಾರಣವಾಗುವುದಕ್ಕೆ ನಿದರ್ಶನವಾಗಿದೆ. ಸೀತೆಯು ರಾವಣನ ಮಗಳು ಎಂಬ ಆಶಯವು ಅಪೂರ್ವವಾದುದೇನಲ್ಲ. ಜೈನ ಕಥೆಗಳ ಒಂದು ಪರಂಪರೆಯಲ್ಲಿ (ಉದಾಹರಣೆಗೆ, ವಸುದೇವ ಹಿಂಡಿ), ಕನ್ನಡದ ಜಾನಪದ ಪರಂಪರೆಯಲ್ಲಿ, ತೆಲುಗು ಮತ್ತು ಕೆಲವು ಆಗ್ನೇಯ ಏಷ್ಯದ ರಾಮಾಯಣಗಳಲ್ಲಿ ಇದು ಕಂಡುಬರುತ್ತದೆ. ಕೆಲವು ಪಠ್ಯಗಳಲ್ಲಿ, ಯೌವನಮದದಲ್ಲಿ ರಾವಣನು ತರುಣಿಯೋರ್ವಳನ್ನು ಕೆಡಿಸುತ್ತಾನೆ. ಸೇಡು ತೀರಿಸಿಕೊಳ್ಳುವ ಸಲುವಾಗಿ, ಆಕೆ ಆತನ ಮಗಳಾಗಿ ಜನಿಸುತ್ತಾಳೆ. ಆತನ ಸಂಹಾರಕ್ಕೆ ಕಾರಣಳಾಗುತ್ತಾಳೆ. ಹೀಗೆ ತೋಂಡಿ ಸಂಪ್ರದಾಯಗಳು ವಾಲ್ಮೀಕಿಯಲ್ಲಿ ಕಂಡುಬಾರದ ಬೇರೊಂದು ಬಗೆಯ ಕಥಾವಸ್ತುವನ್ನು ತಮ್ಮೊಳಗೆ ಹಂಚಿಕೊಳ್ಳುವಂತೆ ಭಾಸವಾಗುತ್ತದೆ.

(ಮುಂದುವರಿಯುತ್ತದೆ)

ಎ. ಕೆ. ರಾಮಾನುಜನ್
ಅನುವಾದ : **ಪ್ರೊ॥ ಮಹಾಬಲೇಶ್ವರ ರಾವ್**
ಡಾ॥ ಟಿ.ಎಂ.ಎ. ಪೈ ಕಾಲೇಜ್ ಆಫ್ ಎಜುಕೇಷನ್, ಉಡುಪಿ - ೫೭೬ ೧೦೨

## ಸಾದರ ಸ್ವೀಕಾರ

**ಎದೆಯ ಸುಡುವ ನೆನಪುಗಳು** (ಕವನ ಸಂಕಲನ)
ಎ. ಎಸ್. ಮಕಾನದಾರ
*ಪುಟ : ೫೬* *ಬೆಲೆ : ರೂ. ೫೦*
ನಿರಂತರ ಪ್ರಕಾಶನ, ಮಾಸೂಮ್ ಮಂಜಿಲ್, ಟಕ್ಕೇದ ಓಣಿ, ಗಜೇಂದ್ರಗಡ - ೫೮೨ ೧೧೪, ಗದಗ

**ಮಹಾಮಹತ್ತಿನ ಮಠಗಳು - ಒಂದು ಅಧ್ಯಯನ** (ಪ್ರಬಂಧಗಳು)
ಸಂ.: ಜಯದೇವಪ್ಪ ಜೈನಕೇರಿ, ಡಾ॥ ಜಗದೀಶ
*ಪುಟ : ೨೮೪* *ಬೆಲೆ : ರೂ. ೧೬೦*
ಮರುಳಸಿದ್ಧೇಶ್ವರ ವೀರಶೈವ ಅಧ್ಯಯನ ಕೇಂದ್ರ, ಕೆಳದಿ ಸಂಸ್ಥಾನ ರಾಜಗುರು ಮಹಾಮಹತ್ತಿನ ಭುವನಗಿರಿ ಸಂಸ್ಥಾನ ಮಠ, ಕವಲೆದುರ್ಗ-೫೭೭ ೪೧೪, ಶಿವಮೊಗ್ಗ ಜಿಲ್ಲೆ

**ಉಪಯುಕ್ತ ಸಸ್ಯಗಳ ಕನ್ನಡ-ಇಂಗ್ಲಿಷ್ ಮತ್ತು ಸಸ್ಯಶಾಸ್ತ್ರೀಯ ಹೆಸರುಗಳು** ಡಾ॥ ಮಾಗಡಿ ಆರ್. ಗುರುದೇವ
*ಪುಟ : ೧೦೮* *ಬೆಲೆ : ರೂ. ೩೫*

**ಸವಿ** (ಅಡುಗೆಗಳು) ಉಷಾ ನವರತ್ನರಾಮ್
*ಪುಟ : ೨೨೦* *ಬೆಲೆ : ರೂ. ೭೫*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ದಿವ್ಯಚಂದ್ರ ಪ್ರಕಾಶನ, ಕೆ.ಎಚ್.ಬಿ. ಕಾಲೋನಿ, ೨ನೇ ಹಂತ, ೬ನೇ ಮುಖ್ಯರಸ್ತೆ, ೮ನೇ ಅಡ್ಡರಸ್ತೆ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

**ಗೌರವಾನ್ವಿತ ದಗಾಕೋರರು** (ಪ್ರಬಂಧಗಳು)
ಎಚ್. ಎಲ್. ಕೇಶವಮೂರ್ತಿ
*ಪುಟ : ೧೫೨* *ಬೆಲೆ : ರೂ. ೧೦೦*

**ಎಣ್ಣೆ ಕಾಗದ** (ಅನುವಾದಿತ ಲೇಖನಗಳು) ಡಾ॥ ಶ್ರೀಧರ ಪಿಸ್ಸೆ
*ಪುಟ : ೧೧೪* *ಬೆಲೆ : ರೂ. ೬೦*

ಪ್ರಣಯ ಮುಕ್ತಕಗಳು ಡಾ॥ ಶ್ರೀಧರ ಪಿಸ್ಸೆ
*ಪುಟ : ೬೮* *ಬೆಲೆ : ರೂ. ೩೦*

**ಪಲಾಂಡು ಚರಿತೆ ಎಂಬ ಈರುಳ್ಳಿ ಪುರಾಣವು** (ನಾಟಕ ರೂಪ)
ಡಾ॥ ಕೃಷ್ಣ ಹಾಸನ
*ಪುಟ : ೮೦* *ಬೆಲೆ : ರೂ. ೪೦*

**ಕನ್ನಡ ಕ್ರಿಯಾಪದಗಳು** ಡಾ॥ ಆರ್. ಉಷಾರಾಣಿ
*ಪುಟ : ೨೬೪* *ಬೆಲೆ : ರೂ. ೧೬೦*
ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಅಭಿರುಚಿ ಪ್ರಕಾಶನ**, ಸಂ. ೩೮೬, ೧೮ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ, ಸರಸ್ವತೀಪುರ, ಮೈಸೂರು - ೯

**ಹನಿ ಹನಿ** (ಹನಿಗವನಗಳು) ಕುವರ ಯಲ್ಲಪ್ಪ
*ಪುಟ : ೯೦* *ಬೆಲೆ : ರೂ. ೭೦*
**ಸ್ನೇಹ ಸೇತು ಪ್ರಕಾಶನ**, ಸಂ. ೩೫೩, ೮ನೇ ಅಡ್ಡರಸ್ತೆ, ಸರಸ್ವತಿನಗರ, ವಿಜಯನಗರ, ಬೆಂಗಳೂರು - ೫೬೦ ೦೪೦

**ಎದೆ ಮುಗಿಲ ಆಕಾಶ** (ಹನಿಗವನಗಳು) ಬಾಲಕೃಷ್ಣ ಬೇರಿಕೆ
*ಪುಟ : ೪೦* *ಬೆಲೆ : ರೂ. ೩೦*
**ಗಾಯತ್ರೀ ಪ್ರಕಾಶನ**, ಅಂಚೆಪೆಟ್ಟಿಗೆ ಸಂಖ್ಯೆ ೧೫, ಕಿನ್ನಿಗೋಳಿ, ಮಂಗಳೂರು ತಾಲ್ಲೂಕು - ೫೭೪ ೧೫೦

**ಗುಲಗಂಜಿ** (ಕವನ ಸಂಕಲನ) ಬಸವರಾಜ ನಿಂ. ಸಂಶಿ
*ಪುಟ : ೪೮* *ಬೆಲೆ : ರೂ. ೪೦*
**ಪ್ರಗತಿ ಪ್ರಕಾಶನ**, ಗೊಜನೂರ - ೫೮೨ ೧೧೬, ಶಿರಹಟ್ಟಿ ತಾಲೂಕು, ಗದಗ ಜಿಲ್ಲೆ

**ಬಾಂಬ್ ವಿರೋಧಿ ಕುಂಭಕರ್ಣ** (ನಾಟಕ)
ಬಿ. ಎಸ್. ದುಂಡರಡ್ಡಿ
*ಪುಟ : ೬೦* *ಬೆಲೆ : ರೂ. ೬೦*
**ಹೊಂಗಿರಣ ಪ್ರಕಾಶನ**, ವೀರಮಣಿ ಆಟದ ಮೈದಾನ ಸಮೀಪ, ಇಲಕಲ್ - ೫೮೭ ೧೨೫

**ಅಪೂರ್ವ ಗಳಿಗೆ** (ಕವನ ಸಂಕಲನ)
ಎಂ. ಮಂಜುನಾಥ ಬಮ್ಮನಕಟ್ಟಿ
*ಪುಟ : ೭೨* *ಬೆಲೆ : ರೂ. ೬೦*
**ಧನ್ಯಾ ಪ್ರಕಾಶನ**, ಮೈಲಾರಪ್ಪ ಬಮ್ಮನಕಟ್ಟಿವರ ಮನೆ, ಶಿಗ್ಲಿ - ೫೮೨ ೨೧೦

**ಪ್ರಮುಖ ವಚನಕಾರರು** ಸಿ. ಪಿ. ಕೆ.
*ಪುಟ : ೧೦೮* *ಬೆಲೆ : ರೂ. ೫೦*
**ಮಾನಸ ಬುಕ್ ಹೌಸ್**, 'ಕಾವ್ಯಲೋಕ' – ಎಚ್ಐಜಿ ೧೨೬೭, ೧ನೇ ಕ್ರಾಸ್, ಶ್ರೀರಾಂಪುರ ಬಡಾವಣೆ, ೨ನೇ ಹಂತ, ಮೈಸೂರು - ೫೭೦ ೦೨೩

**ಭಾಷೆ ಬದುಕು ಸಾಹಿತ್ಯ** (ಲೇಖನ ಸಂಗ್ರಹ)
ಅರ್ಜುನ ತಾ. ಕೋರಟಕರ
*ಪುಟ : ೧೧೨* *ಬೆಲೆ : ರೂ. ೪೦*
**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು - ೫೬೦ ೦೧೮

**ಪಂಪ ಪರೀಕ್ಷಣ** (ಪ್ರಬಂಧ ಸಂಕಲನ) ಸಿ. ಪಿ. ಕೆ.
*ಪುಟ : ೧೫೪* *ಬೆಲೆ : ರೂ. ೮೫*
**ತನುಮನು ಪ್ರಕಾಶನ**, 'ಕಾವ್ಯಲೋಕ' – ಎಚ್ಐಜಿ ೧೨೬೭, ೧ನೇ ಕ್ರಾಸ್, ಶ್ರೀರಾಂಪುರ ಬಡಾವಣೆ, ೨ನೇ ಹಂತ, ಮೈಸೂರು - ೫೭೦ ೦೨೩

**ಕಡಲಿಗೆ ಕಳಿಸಿದ ದೀಪ** (ಕವನ ಸಂಕಲನ) ಟಿ. ಯಲ್ಲಪ್ಪ
*ಪುಟ : ೮೦* *ಬೆಲೆ : ರೂ. ೫೦*

**ಗಾಳಿ ಹೆಜ್ಜೆ ಹಿಡಿದ ಸುಗಂಧ** ಕುಸುಮಾಕರ ದೇವರಗೆಣ್ಣೂರ
*ಪುಟ : ೩೬* *ಬೆಲೆ : ರೂ. ೨೦*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಂಚಯ**, ಸಂ. ೧೦೦, ೨ನೇ ಮುಖ್ಯರಸ್ತೆ, ೬ನೇ ಬ್ಲಾಕ್, ೩ನೇ ಹಂತ, ೩ನೇ ಘಟ್ಟ, ಬನಶಂಕರಿ, ಬೆಂಗಳೂರು - ೮೫

**ಹೂವಿನೊಡನೆ ಮಾತುಕತೆ** (ಮಕ್ಕಳ ಕತೆಗಳು)
ಡಾ॥ ಆರ್. ವಿ. ಭಂಡಾರಿ
*ಪುಟ : ೪೦* *ಬೆಲೆ : ರೂ. ೨೦*

**ಹದ್ದುಗಳು** (ಕವಿತೆಗಳ ಸಂಗ್ರಹ) ಡಾ॥ ಆರ್. ವಿ. ಭಂಡಾರಿ
*ಪುಟ : ೬೨* *ಬೆಲೆ : ರೂ. ೪೫*
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಬಂಡಾಯ ಪ್ರಕಾಶನ**, ಅರೆಅಂಗಡಿ, ಹೊನ್ನಾವರ, ಉತ್ತರ ಕನ್ನಡ - ೫೮೧ ೪೩೦

# ವಂಶದ ಕುಡಿ



ಆ ಭಯಾನಕ ಕತ್ತಲ ರಾತ್ರಿ ಕಳೆದು ದಶಕಗಳೇ ಸಂದಿವೆಯಾದರೂ ಅದಿನ್ನೂ ನನ್ನ ಮನದ ನೆನಪಿನಾಳದೊಳಗೆ ಹಸಿರಾಗಿಯೇ ಇದೆ.

ಭಾದ್ರಪದ ಮಾಸವದು. ಮೂರು ದಿನಗಳ ಕಾಲ ಎಡೆಬಿಡದೆ ಮಳೆ ಸುರಿಯುತ್ತಿತ್ತು. ಮಣ್ಣಿನ ಗೋಡೆಯ ಗುಂಟ ನೀರು ಸೋರಿ ಗುಡಿಸಲಿನ ತುಂಬ ತೇವದ ವಾಸನೆ ಅಡರಿಕೊಂಡಿತ್ತು. ಹಣತೆಯ ಸಣ್ಣ ದೀಪ ಉರಿಯುತ್ತಿದ್ದ ಪಡಸಾಲೆಯಲ್ಲಿ ಕೋಣೆಯ ಮುಚ್ಚಿದ ಬಾಗಿಲಿನಿಂದ ನೋವಿನ ನರಳಾಟದ ದನಿ ಕೇಳಿ ಬರುತ್ತಿತ್ತು. ವಾತರೋಗ ದಿಂದ ಬಳಲುತ್ತಿದ್ದ ಆಶಿಮಾ, ಹೊರಸಲಿನ ಮೇಲೆ ನರಳುತ್ತ ಅತ್ತೊಮ್ಮೆ ಇತ್ತೊಮ್ಮೆ ಮಗ್ಗಲು ಬದಲಿಸುತ್ತ ಮಲಗಿದ್ದಳು.

ಅಂಗಳದಲ್ಲಿ ಕಂಬಕ್ಕೆ ಕಟ್ಟಿಹಾಕಿದ್ದ ಆಡು ಅಸಹನೆಯಿಂದ ಅಲುಗಾಡುತ್ತಲಿತ್ತು. ಮಳೆಗೆ ತೊಯ್ದುಹೋಗಿದ್ದ ಮೇವಿನ ಹೊರೆಯತ್ತ ಆಗಾಗ ಮುಖ ಹಾಕುತ್ತ ಹೇಂಕರಿಸುತ್ತಲಿತ್ತು. ಮುಸುರೆಯ ಕಲಗಂಚಿನತ್ತ ಹೋಗಲು ಪ್ರಯತ್ನಿಸಿ ಸಾಧ್ಯವಾಗದ್ದರಿಂದ ಆಡು ಒಂದೇ ಸವನೆ ಒದರತೊಡಗಿತು. ಹಾಗೆ ಅದು ಒದರಲು ಆರಂಭಿಸಿದಾಗ ಆಶಿಮಾ ಸಿಟ್ಟಿನಿಂದ ''ಏ ದರಿದ್ರದ್ದ! ಸುಮ್ಕಿರು. ನಿಂದೂ ಹೆಚ್ಚಾಯಿತಲ್ಲಾ. ಇಲ್ಲಾಂದ್ರ ನಾಕ ಬಿಗಿತೀನಿ ನೋಡ'' ಅಂದಳು. ಆಡಿಗೆ ಆಕೆಯ ಮಾತುಗಳು ಅರ್ಥವಾದವೇನೋ, ಅದು ಮುಚ್ಚಿದ ಬಾಗಿಲಿನತ್ತ ನೋಡುತ್ತ ಸುಮ್ಮನೆ ನಿಂತುಕೊಂಡಿತು.

ಆಶಿಮಾ ಎಡೆಬಿಡದೆ ಸುರಿಯುತ್ತಿದ್ದ ಮಳೆಯಿಂದಾಗಿ ಚಿಂತೆಗೊಳಗಾಗಿದ್ದಳು. ಮನೆಯ ಸೂರಿನಿಂದ ಆಗಾಗ ನೀರು ಸಣ್ಣಗೆ ಸೋರುತ್ತಲಿತ್ತು. ಆಕೆಯ ಬದುಕಲ್ಲಿ ಹರಿದ ದುಃಖದ ನದಿಯ ಹಾಗೆ ಈಗ ಮಾಳಿಗೆಯ ಮೇಲೆ ನೀರು ಹರಿಯುತ್ತಲಿತ್ತು.

ಮಿಂಚಿನಿಂದಾಗಿ ಗುಡಿಸಲು ಮುಂದಿನ ಮಾವಿನಗಿಡ ಬೆಳಗಿದಂತೆ ಕಂಡು ಆಶಿಮಾ ಅವ್ಯಕ್ತ ಭಯದಿಂದ ನರಳಿದಳು. ಬೆಳಕಿಂಡಿಯೊಳಗಿನ ತೂತುಗಳಿಂದ ಸಣ್ಣಗೆ ಗಾಳಿ ಒಳತೂರಿ ಬರತೊಡಗಿತ್ತು. ಆ ಗಾಳಿ-ಮಳೆ ಯೊಂದಿಗೆ ನೋವಿನ ಬಾಣಗಳು ತನ್ನ ಎದೆಯನ್ನು ಇರಿದಂತೆ ಭಾಸವಾಗುತ್ತಿತ್ತು ಆಶಿಮಾಳಿಗೆ.

ಊರ ಗೋಪುರದ ಗಡಿಯಾರ ಮೂರು ಗಂಟೆ ಬಾರಿಸಿತು. ಎದೆ ಬಿರಿಯುವಂಥ ಚೀತ್ಕಾರವೊಂದು ರಾತ್ರಿಯ ಮೌನವನ್ನು ಭೇದಿಸಿತು. ಆಶಿಮಾಳಿಗೆ ಮುಚ್ಚಿದ ಕೋಣೆಯಿಂದ ಹೊರಬಂದ ಪುಟ್ಟ ಮಗುವಿನ ''ಉಾ... ಆ... ಉಾ... ಆ...'' ಅಳುವಿನ ದನಿ ಕೇಳಿತು. ನೋವಿನ ನರಳಾಟವೂ ಕೊನೆಗೊಂಡಿತು.

ಆಶಿಮಾ ನಿಧಾನವಾಗಿ ಹೊರಸಲಿನಿಂದ ಏಳಲು ಯತ್ನಿಸಿದಳು, ವಾತದ ನೋವಿನಿಂದ ಮುಕ್ತಿ ಪಡೆದವಳಂತೆ.

''ಇಚಾ... ಬಾಗಲಾಽಽ ತಗಿ, ಬಾಗಲಾ ತಗಿ ಅಂದೆ... ನನ್ನ ತ್ರಾಸ ಮುಗೀತು ಇನ್ನ ಮತ್ತ ನಗತೀನಿ, ನಾ ಬಾಳ ನಗತೀನಿ. ಇಚಾ ಲಗೂ ಬಾಗಲಾ ತಗೀ.''

ಬಾಗಿಲು ತೆರೆಯುತ್ತಲೇ, ತನ್ನೊಳಗೆ ಮಾತಾಡಿ ಕೊಳ್ಳುವಂತಿದ್ದ ಆಶಿಮಾ ಅವಸರದಿಂದ ಕೋಣೆಯ ಒಳಹೊಕ್ಕಳು. ಇಚಾ ಸಯಾನಿ, ಮೂಲ್ಚಿ ಮಾರವಾಡನ್ ಆಕೆಯತ್ತ ಮೂಕವಿಸ್ಮಿತರಾಗಿ ನೋಡಿದರು. ಆಶಿಮಾ ಅಚ್ಚರಿಯೆನ್ನಿಸುವಂತೆ ತನ್ನೆಲ್ಲ ನೋವನ್ನು ಅಲಕ್ಷಿಸಿ, ತನ್ನ ಮೊಮ್ಮಗನ ಆಗಮನದ ಖುಷಿಯಲ್ಲಿ ಕನಸಿನ ಲೋಕದಲ್ಲಿ ತೇಲಾಡುತ್ತಿರುವುದು ಅವರಿಗೆ ಅತೀವ ಸೋಜಿಗವನ್ನು ಉಂಟುಮಾಡಿತ್ತು.

ಮೂಲ್ಚಿ ಕೋಣೆಯಲ್ಲಿನ ಹಾಸುಗೆಗಳನ್ನು ಹೊಂದಿಸಿ ಇಡುವುದರಲ್ಲಿ ಮಗ್ನಳಾಗಿದ್ದಳು. ಇಚಾ ಹೊಕ್ಕಳಹುರಿ ಕತ್ತರಿಸುವುದರಲ್ಲಿ ತೊಡಗಿದ್ದಳು. ತನ್ನ ಸೊಸೆಯ ಹಣೆ ನೇವರಿಸುತ್ತ ಆಶಿಮಾ ಉತ್ಸಾಹದಿಂದ ಹೇಳಿದಳು.

''ಓಹ್, ನಾ ಎಲ್ಲಾ ಕಳ್ಕೊಂಡ ಬಂಜಿ ಆಗಿದ್ನೆವ್ವ. ನೀ ಬಂದಽ ನನ್ನ ಮನಿಽ ಬೆಳಗೀದಿ, ನಾ ರಂಡಿಮುಂಡಿ ಆಗಿದ್ನಿ. ನಾನ ದಿಕ್ಕಿಲ್ಲದಾಕಿ ಅನ್ಕೊಂಡಿದ್ನಿ. ನನ್ನ ಮೊಮ್ಮಗ ಬಂದು ನಮ್ಮಿಬ್ಬರ ಬಾಳೇದಾಗ ಬೆಳಕ ತಂದಾನ. ಅಂವ ನಮ್ಮ ಭಾಗ್ಯದ ದೇವ್ರು!''

ಇಷ್ಟು ಮಾತಾಡುವ ಹೊತ್ತಿಗೆ ಆಕೆಯ ಮೊಳಕಾಲ ಸಂಧಿ ನೋವು ಜಾಸ್ತಿ ಆಗಿ ನೆಲದ ಮೇಲೆ ಒಮ್ಮೆಲೆ ಬಿದ್ದುಬಿಟ್ಟಳು. ಮೂಲ್ಚಿ, ಇಚಾ ಅವಳನ್ನೆತ್ತಿ ಹೊರತಂದು ಪಡಸಾಲೆಯ ಹೊರಸಲಿನ ಮೇಲೆ ಮಲಗಿಸಿದರು.

ಆಶಿಮಾ ಆ ಕತ್ತಲಲ್ಲಿ ಮಾಳಿಗೆಯ ತುದಿಯನ್ನು ದಿಟ್ಟಿಸುತ್ತ ಗತಕಾಲದ ದಿನಗಳನ್ನು ಮೆಲುಕು ಹಾಕತೊಡಗಿದಳು.

ಶೃಂಗರಿಸಿದ ಇದೇ ಅಂಗಳದಲ್ಲಿ ಇಪ್ಪತ್ತೈದು ವರ್ಷಗಳ ಹಿಂದೆ ಪಸರಮ್‌ನ ಪಕ್ಕ ವಧುವಾಗಿ ನಿಂತಿದ್ದ ನೆನಪು. ಪಸರಮ್ ತನ್ನ ತಾಯಿಗೆ ಎಂಟನೇ ಮಗ. ಆಕೆಯ ಎಲ್ಲ ಮಕ್ಕಳೊಳಗೆ ಬದುಕಿ ಉಳಿದ ಒಬ್ಬನೇ ಮಗ. ಬಸುರಿಯಾದ ಐದು ತಿಂಗಳಿಗೆ ಆಕೆ ಗಂಡನನ್ನು ಕಳೆದುಕೊಂಡಿದ್ದಳು. ಸಂಪ್ರದಾಯದಂತೆ ಆಕೆ ತನ್ನ

ಜೋಸೆಫ್ ಮ್ಯಾಕವನ್

ಅತ್ತೆ-ಮಾವಂದಿರೊಂದಿಗೆ ಗಂಡನ ಮನೆಯಲ್ಲೇ ಉಳಿದಿದ್ದಳು. ನಿತ್ಯದ ಸಂಕಟಗಳ ನಡುವೆ ತನ್ನ ಕರುಳ ಕುಡಿಯನ್ನು ಬೆಳೆಸುವುದೊಂದೇ ಅವಳ ಬದುಕಿನ ಗುರಿಯಾಗಿತ್ತು. ಆಶಿಮಾ ಅವರ ಮನೆಗೆ ಸೊಸೆಯಾಗಿ ಬಂದಮೇಲೆ ಆ ತಾಯಿ ಹೊಸ ಹುರುಪು ಪಡೆದಳು. ಆದರೆ ಆ ನವದಂಪತಿಗಳು ತಮ್ಮ ಮದುವೆ ವರ್ಷ ಮುಗಿಸುವುದರೊಳಗೆ ಎಲ್ಲೆಡೆ ಕಾಲರಾ ಹಬ್ಬಿತು. ತಾಯಿ ಮತ್ತು ಮಗ ಇಬ್ಬರನ್ನೂ ಈ ಕಾಲರಾ ಎಂಬ ದೈತ್ಯ ಕಾಯಿಲೆ ನುಂಗಿಹಾಕಿತು. ಅವರ ನೆರೆಹೊರೆಯವರು ಶೀಘ್ರದಲ್ಲೇ ವಸರಮ್‌ನ ಮನೆಯಲ್ಲಿ ಸಾವೇ ನೆಲೆ ನಿಲ್ಲುವುದೆಂದು ಆಡಿಕೊಳ್ಳುತ್ತಿದ್ದರು. ಕೆಲವರಂತೂ ಆಶಿಮಾಳನ್ನು ರಾಕ್ಷಸಿ, ಯಕ್ಷಿಣಿಯೆಂದೂ ಕರೆದರು. ಅನುಭವಸ್ಥರೂ ಜಾಣರೂ ಆದವರು 'ವಸರಮ್'ನ ಮಣ್ಣಿಗೆಂದು ಬಂದ ಅಪ್ಪನೊಡನೆ ತವರುಮನೆಗೆ ಆಕೆ ಹೋಗಿಬಿಡುವುದೇ ಸರಿಯೆಂದು ತಿಳಿಹೇಳಿದರು. ಅವಳು ಮತ್ತೊಂದು ಮದುವೆಯಾಗಿ ಸತ್ತ ಗಂಡನ ಮನೆಯ ಹತ್ತಿರ ಸುಳಿಯದಂತೆ ಬದುಕುವುದು ಒಳ್ಳೆಯದೆಂದು ಕಿವಿ ಮಾತು ಹೇಳಿದರು. ಹೀಗೆಯೇ ಸಾಗಿತ್ತು ಅವರ ಮಾತು, ಬುದ್ಧಿವಾದ. ಆದರೆ ಪಕ್ಕದ ಮನೆಯ ಹಿರಿಯ ಹೆಣ್ಣುಮಗಳೊಬ್ಬಳು 'ಆಶಿ'ಯ ಮನವೊಲಿಸಿ ಆಕೆಗೆ ವಿಧವೆಯ ಬಟ್ಟೆ ಧರಿಸಲು ಒತ್ತಾಯಿಸುತ್ತಿದ್ದಳು. ಆದರೆ ಆಶಿಮಾ ಅವರನ್ನೆಲ್ಲ ತನ್ನ ವರ್ತನೆಯಿಂದ ಮೂಕವಿಸ್ಮಿತಳನ್ನಾಗಿಸಿದಳು.

ಮಣ್ಣುಗೂಡುವ ಕ್ರಿಯೆಗಳೆಲ್ಲ ಮುಗಿದಾದ ಮೇಲೆ ಜಾತಿಯ ಹಿರೇರೆಲ್ಲ ಸೇರಿ ಆಶಿಗೆ ವಿಧವಾ ಬಟ್ಟೆ ಧರಿಸೆಂದು ಮಾತು ಶುರು ಮಾಡಿದಾಗ ಆಶಿ ಘನತೆಯಿಂದ ಎದ್ದು ನಿಂತಳು. ''ನಾ ಆ ಬಟ್ಟೆ ಹಾಕ್ಕೋತೀನಿ, ಆದ್ರ ನಾ ಎಲ್ಲೂ ಹೋಗಾಂಗಿಲ್ಲ, ನಾಕ ತಿಂಗಳಾತು. ನಾ ಈ ಮನ್ಯಾಗ ಬಾಳೇ ಮಾಡೀನಿ. ಇದು ನನ್ನ ಮನಿ. ನನ್ನ ಜೀಂವ ಇರುತಂಕ ನಾ ಇಲ್ಲೇ ಇರುವಾಕಿ. ದೇವ್ರು ನನ್ನ ಮುಂದಿನ ಬಾಳೇನ ಹೆಂಗ ನೆಡಸತಾನೋ ನೆಡಸಲಿ. ನಮ್ಮಪ್ಪನs ಜೋಡಿ ನಾ ಮಾತಾಡುತ್ತೆತಿ. ಇನ್ನ ನೀವು ಎಲ್ಲಾರು ನಡೀರಿ'' ಎಂದಳು.

ಎಲ್ಲರೂ ಮರುಗುತ್ತ ''ಸರಿ ಸರಿ, ಇದು ಆಕೀದs ಮನಿ. ಮತ್ತು ಯಾರೂ ಅಕೀನ್ನ ಹೊರಗ ಹಾಕೂದ ಸಾಧ್ಯ ಇಲ್ಲ. ಅಕೀ ತನ್ನ ಮುಂದಿನ ಜೀವನಾs ಇಲ್ಲೇ ಕಳೀಬೇಕಂತ ಮಾಡೀರ, ಬ್ಯಾಡ ಅನ್ನಾಕ ನಾವ್ಯಾರು ?'' ಎಂದು ಮಾತಾಡುತ್ತ ಹೊರಟರು.

''ಅಪ್ಪಾ ನೀನೂ ಊರಿಗೆ ಹೊರಟಬಿಡು'' ಆಶಿ ತನ್ನ ಅಪ್ಪನಿಗೆ ಹೇಳಿದಳು. ''ನನ್ನ ಚಿಂತಿ ಮಾಡಬ್ಯಾಡ್ರಿ, ನನಗೇನರೆ ಬೇಕಾದ್ರ ನಾ ಹೇಳಿಕಳಸ್ತೀನು. ನನ್ನ ಮನಿ ನೋಡಿಕೊಂಡ ನಾ ಇಲ್ಲೇ ಇರ್ತೀನಿ.''

ಹರೆಯದ ಮಗಳ ಮಾತಿಗೆ ಆಕೆಯ ಅಪ್ಪನಿಗೆ ಏನೂ ಉತ್ತರ ಹೇಳಲಾಗಲಿಲ್ಲ, ಆದರೆ ಆಶಿ ಆಡಿದಂತೆ ನಡೆದಳು. ಸ್ವಲ್ಪೇ ದಿನಗಳಲ್ಲಿ ನೆರೆಹೊರೆಯವರಿಂದ 'ಆಶಿಮಾ' ಎಂದೇ ಕರೆಸಿಕೊಳ್ಳತೊಡಗಿದಳು. ಆಕೆ ತನ್ನ ಹರೆಯದ ಎಲ್ಲ ಆಮಿಷಗಳಿಗೆ ಬೆನ್ನು ಮಾಡಿದಳಲ್ಲದೇ, ಸಂಬಂಧಿ ಗಂಡಸರಿಂದ ಸಾಧ್ಯವಾದಷ್ಟು ದೂರವೇ ಉಳಿದಳು. ಆಕೆ ಗರ್ಭಿಣಿಯಾಗಿದ್ದರೂ ಒಂದು ಕ್ಷಣವನ್ನೂ ವ್ಯರ್ಥ ಕಳೆಯುತ್ತಿರಲಿಲ್ಲ. ಆಕೆಗೆ ಗಂಡು ಮಗುವಾಯ್ತು. ಆಶಿಯ ಬಾಣೇತನಕ್ಕೆ ಬಂದಿದ್ದ ಆಕೆಯ ತಾಯಿ, ಆಶಿಮಾಳ ಬಗ್ಗೆ ನೆರೆಹೊರೆಯವರ ಪ್ರೀತಿ ಗೌರವಾದರಗಳನ್ನು ಕಂಡು ಹೃದಯ ತುಂಬಿಕೊಂಡು ಸಮಾಧಾನದಿಂದ ಮರಳಿ ಹೋಗಿದ್ದಳು. ಆಕೆಗೆ ತನ್ನ ಮಗಳು ಕೊಟ್ಟ ಕುಲಕ್ಕೆ ಹೆಸರು ತಂದ ರೀತಿ ನೋಡಿ ಆಕೆ ದೇವತೆಯೇ ಇರಬಹುದೆನ್ನಿಸಿತ್ತು.

ಆಶಿಯ ಮಗು ದೇವರ ಕಾಣಿಕೆಯೆಂದು ಅವರೆಲ್ಲ ಭಾವಿಸಿದ್ದರಿಂದ ಅದಕ್ಕೆ 'ದಾನೊ' ಎಂದೇ ಹೆಸರಿಟ್ಟರು. ಆಶಿ ಹೊಲಗಳಿಗೆ ಕೆಲಸಕ್ಕೆ ಹೋದಾಗ ಅವನನ್ನು ಜೋಳಿಗೆಯೊಂದರಲ್ಲಿ ಹಾಕಿ ಗಿಡಕ್ಕೆ ಕಟ್ಟುತ್ತಿದ್ದಳು. ಸ್ವಲ್ಪ ದೊಡ್ಡವನಾದ ಮೇಲೆ ಹುಡುಗ ತಾಯಿಯ ಕೈಹಿಡಿದು ಹೊಲಕ್ಕೆ ಹೋಗತೊಡಗಿದ. ಆಶಿ ಅವನನ್ನು ಅತ್ಯಂತ ಮುದ್ದಿನಿಂದ ಯಾವ ಕೆಲಸವನ್ನೂ ಹಚ್ಚದೆ ಬೆಳೆಸತೊಡಗಿದಾಗ ದಾನೊ ಸೋಮಾರಿ ಯಾಗತೊಡಗಿದ. ಆಶಿ ತನ್ನ ಬಳಿಯಿರುವ ಕೊನೆಯ ಪೈಸೆಯವರೆಗೆ ಎಲ್ಲವನ್ನೂ ಅವನಿಗಾಗಿ ಖರ್ಚುಮಾಡಲು ತಯಾರಿದ್ದಳು. ಹನ್ನೆರಡು ವರ್ಷದವನಾಗುವವರೆಗೆ ಆಶಿಮಾಳ ಪಕ್ಕದಲ್ಲೇ ಮಲಗುತ್ತಿದ್ದ. ಆಶಿಮಾಳ ಪ್ರೀತಿಯ ಕೈ ತುತ್ತು ತಿನ್ನುತ್ತ ಬೆಳೆದ ದಾನೊಗೆ ತಾಯಿಯ ಆಕಾಂಕ್ಷೆಗಳ ವಿರುದ್ಧ ಹೋಗುವ ಸಾಧ್ಯತೆಗಳೇ ಇರಲಿಲ್ಲವಾದರೂ ಹಣ ಅವನ ಕೈಯಲ್ಲಾಡತೊಡಗಿದ ಮೇಲೆ ಆತ ಇಸ್ಪೇಟ ಆಟದ ಚಟಕ್ಕೆ ಬಿದ್ದ. ಅವನೆಂದೂ ಶಾಲೆಯ ಕಟ್ಟೆ ಹತ್ತಲಿಲ್ಲ. ಹದಿನಾರರ ಹರೆಯದಲ್ಲಿ ಸಾಕಷ್ಟು ಕೆಟ್ಟ ಚಟಗಳನ್ನು ಮೈಗೂಡಿಸಿಕೊಂಡ.

[illegible] ಆಶಿಮಾ ದಾನೊನ ಹದಿನೇಳನೇ ವಯಸ್ಸಿಗೆ ಪಕ್ಕದ ಹಳ್ಳಿಯ ಹುಡುಗಿಯೋರ್ವಳೊಂದಿಗೆ ಮದುವೆ ಮಾಡಿದಳು. ತಾನು ಕೆಲಸ ಮಾಡುವ ಸಾಹುಕಾರನ ಬಳಿ ಏಳುನೂರು ರೂಪಾಯಿಗಳ ಸಾಲ ತಂದು ತಾನು ಕೂಡಿಸಿದ್ದ ಅಲ್ಪ ಸ್ವಲ್ಪ ಹಣಕ್ಕೆ ಅದನ್ನು ಕೂಡಿಸಿ 'ಮದುವೆ' ಮಾಡುವ ಜವಾಬ್ದಾರಿ ಹೊತ್ತ ತನ್ನ ಜಾತಿಯ ಹಿರೇರು, ಹಿತಚಿಂತಕರಿಗೆ ಆ ಹಣವನ್ನೆಲ್ಲ ಒಪ್ಪಿಸಿದಳು. ಕೇರಿಗೆಲ್ಲ ಬೂಂದೆ ಊಟ ಹಾಕಿಸಲಾಯಿತು. ಹಾಡುಗಾರರನ್ನು ಕರೆಯಿಸಿ ಮೂರು ದಿನ ಹಾಡುಗಳನ್ನು ಹೇಳಿಸಲಾಯ್ತು. ಆಶಿಮಾ ಮದುವೆಗೆ ಬಂದಿದ್ದ ಎಲ್ಲ ಬಂಧುಗಳನ್ನು ಆದರಿಸಿದಳು. ಅತಿಥಿಗಳನ್ನು ಸತ್ಕರಿಸಿದಳು. ಸದಾ ತಕರಾರೆತ್ತುವ ಜಾತಿಗೆ ಸೇರಿದ ಜನರೇ ಮಾತಿಲ್ಲದಂತಾಗುವಂತೆ ಎಲ್ಲ ವ್ಯವಸ್ಥೆ ಮಾಡಿದಳು. ಒಟ್ಟಾರೆ ಮದುವೆ ವಿಧವೆಯ ಮಗನ ಮದುವೆಯಂತಿರದೆ ಬಹು ದೊಡ್ಡ ಸಮಾರಂಭವಾಗಿ ಏರ್ಪಟ್ಟಿತು.

ಕೇರಿಯ ಬಾವಿಯಿಂದ ನೀರು ಸೇದಿ ತಲೆ ಮೇಲೆ ಕೊಡಹೊತ್ತು ಸೊಂಟ ಅಲುಗಾಡಿಸುತ್ತ ಬರುತ್ತಿದ್ದ ನವ ವಧು 'ಪಾಶಿ' ದಾನೊನ ಮೇಲೆ ಮೋಡಿ ಮಾಡಲು ಹೆಚ್ಚು ದಿನಗಳು ಬೇಕಾಗಲಿಲ್ಲ.

ಆಶಿಮಾಳ ಸಹಜ ಮುಗ್ಧತೆ ಒಳ್ಳೆಯತನಗಳಿಗೆ ಪಾಶಿ ಕೂಡ ಮನಸೋತಳು. ಆಕೆ ದಾನೊನನ್ನು ಸರಿದಾರಿಗೆ ತರುವ ಪ್ರಯತ್ನದಲ್ಲಿ ತೊಡಗಿದಳು. ಹೀಗಾಗಿ ತವರು ಮನೆಯಲ್ಲಿ ಕೂಡ ಆಕೆ ಹೆಚ್ಚು ದಿನ ನಿಲ್ಲುತ್ತಿರಲಿಲ್ಲ. ಆಶಿಮಾಗೆ ''ನನಗೂ ಏನಾರ ಕೆಲ್ಸ ಹುಡುಕ್ರೀ ಅತ್ತಿ'' ಎಂದು ಕಾಡಿಸತೊಡಗಿದಳು. ''ನಾವಿಬ್ರೂ ಜೋಡೀನ ಕೆಲ್ಸ ಮಾಡೂನು, ಪಟೇಲರ ಸಾಲಾs ತೀರಿಸಬೇಕು. ಅಲ್ದ ಈ ಮನೀನೂ ರಿಪೇರಿ ಮಾಡಬೇಕಲ್ಲ?'' ಅತ್ತೆಯೆದುರು ಹಾಗೆಂದ ಪಾಶಿ ತನ್ನ ಪಾಲಿಗೆ ಬಂದ ಎಲ್ಲ ಕೆಲಸ ಮಾಡತೊಡಗಿದಳು. ಒಡ್ಡು ಹೊರುವುದೇ ಇರಲಿ, ಕಳೆ ತೆಗೆಯುವುದೇ ಇರಲಿ. ದಾನೊ ಮೂಲತಃ ಸೋಮಾರಿಯಾದದ್ದರಿಂದ ಅವನಿಗೆ ಯಾವುದೇ ಕೆಲಸವೂ ನೀಗುತ್ತಿರಲಿಲ್ಲ. ಆದರೆ ಪಾಶಿಯ ಪ್ರೀತಿಯ ಬಂಧನದಲ್ಲಿ ಮುಳುಗಿದಾತನಿಗೆ ಮೊದಲಿನಂತೆ 'ಉಂಡಾಡಿ ಗುಂಡ'ನಾಗಿರುವುದು ಅಷ್ಟು ಸಹಜವಾಗಿ ಉಳಿಯಲಿಲ್ಲ. ಪ್ರೀತಿ ಆಶಿಮಾಳ ಮನೆ ತುಂಬಿತು, ಆದರೆ ಸಂತಸದ ಕ್ಷಣಗಳು ತುಂಬ ದಿನ ಉಳಿಯಲಿಲ್ಲ.

ಒಂದು ದಿನ ಒಡ್ಡು ಹಾಕಲು ಹೋಗಿದ್ದ ದಾನೊ ಹೊಟ್ಟೆನೋವೆಂದು ಮನೆಗೆ ಬಂದವ ರಕ್ತದ ವಾಂತಿ ಮಾಡಿಕೊಳ್ಳತೊಡಗಿದ. ಅವನಿಗೆ ಟಿ.ಬಿ. ತಗುಲಿಕೊಂಡಿತ್ತು. ಕೆಲವೇ ದಿನಗಳಲ್ಲಿ ಜ್ವರದಿಂದ ದುರ್ಬಲನಾದವನಿಗೆ ಹಾಸಿಗೆ ಬಿಟ್ಟೇಳುವುದೂ ಕಷ್ಟವಾಯ್ತು. ಸಾವಿನ ಮತ್ತೊಂದು ಕ್ರೂರ ಛಾಯೆ ಈಗ ಆ ಮನೆಯ ಮೇಲೆ ಚಾಚತೊಡಗಿತು. ಆಶಿಮಾ, ಪಾಶಿ ಅವನಿಗೆ ಒಳ್ಳೆಯ ಔಷಧಿ ಕೊಡಿಸಲು ತಮಗೆ ಸಾಧ್ಯವಿದ್ದಷ್ಟೂ ಹೆಣಗಿದರು. ದಾನೊ ಈಗ ಕುಡಿತ ಬಿಟ್ಟುಬಿಟ್ಟಿದ್ದ. ಅವನ ಔಷಧಿ ಖರ್ಚು, ಮನೆಯ ಜವಾಬ್ದಾರಿ ಸಾಲ ಇವುಗಳಲ್ಲಿ ಜರ್ಜರಿತರಾದ ಅತ್ತೆ-ಸೊಸೆ ಇಡೀ ದಿನ ದಾನೊವನ್ನು ಪಡಸಾಲೆಯ ಹೊರಸಲಿನ ಮೇಲೆ ಮಲಗಲು ಬಿಟ್ಟು ಕೆಲಸಕ್ಕೆ ಹೋಗುತ್ತಿದ್ದರು. ಪಾಶಿ-ದಾನೋರ ಮದುವೆಯಾಗಿ ಇನ್ನೂ ವರ್ಷವಾಗಿರಲಿಲ್ಲ, ವಿಧಿಯ ಕರಾಳ ಕೈ ಆಶಿಮಾಳ ಎಲ್ಲ ಕನಸುಗಳನ್ನು ನುಚ್ಚು ನೂರಾಗಿಸಿತು. ದಾನೋ ಇಹದ ಋಣ ತೀರಿದವನಂತೆ ಹೊರಟೇಹೋದ.

ಆಶಿಮಾ ದುಃಖದಲ್ಲಿ ಮೂಕಳಾದಳು. ಪಾಶಿಯ ರೋದನ ಕಲ್ಲುಗಳನ್ನು ಕರಗಿಸು ವಂತಿತ್ತು. ಆಶಿಮಾಳ ಖಾಲಿ ಕಣ್ಣು ತಣ್ಣನೆಯ ಮೌನ ಮಣ್ಣಿಗೆ ಬಂದ ನೆರೆಹೊರೆಯ ಹೆಂಗಸರಲ್ಲಿ ಆತಂಕ ಹುಟ್ಟಿಸಿತು. ಅವರು ಆಕೆ ಅಳದಿದ್ದರೆ ಹುಚ್ಚಿಯಾಗಬಹುದೆಂದು ಭ್ರಮಿಸಿ 'ಅಳs ಆಶಿಮಾ' ಎಂದಾಕೆಯನ್ನು ಅಲುಗಾಡಿಸತೊಡಗಿದರು. ''ನೋಡs, ನಿನ್ನ ಮಗನ ಮಾರೀನ ಕಡೀ ಸರ್ತೆ ನೋಡಿ, ಹಿಡಿ ಮಣ್ಣ ಹಾಕs ನಮ್ಮವ್ವs ಕಣ್ಣ ತೆರೆ, ದೆವ್ವ ಬಡದಂಗ ಕೂಡಬ್ಯಾಡ ಅತ್ತ ಬಿಡs ಆಶಿಮಾs'' ಸುತ್ತಲಿದ್ದವರೆಲ್ಲ ಅಂದರು. ಆದರೆ ಆಶಿಮಾ ಮೂಕಿಯಾಗಿದ್ದಳು. ಯಾರ ಪ್ರಯತ್ನವೂ ಆಶಿಮಾಳ ದುಃಖದ ಕಟ್ಟೆ ಒಡೆದು ಹೊರಬರುವಂತೆ ಮಾಡಲಿಲ್ಲ. ಆಕೆ ಪಾಶಿಯನ್ನೇ ದಿಟ್ಟಿಸುತ್ತ ಸುಮ್ಮನೇ ಕೂತಿದ್ದಳು.

ಗಂಡನ ಹೆಣದೆದುರು ಕೂತು ಕಣ್ಣೀರುಗರೆಯುತ್ತಿದ್ದ ಪಾಶಿ ಅತ್ತೆಯ ಬಳಿಗೋಡಿ ಬಂದಳು. ''ಅಳ ಅವ್ವಾ ಅಳು. ನಾವೇನ ಮಾಡಾಕ ಸಾಧ್ಯ ಐತಿ ಅಳೂದ ಬಿಟ್ಟು? ಅಂವಾ ಇದ್ದಾಗ ನಾಂವ ಮಾಡದೆಲ್ಲ ಮಾಡೇವಿ. ಅತ್ತ ಹಗರಾಗವ್ವ ಹಗರಾಗು. ನಿನ್ನ ವಂಶದ ಕುಡಿ ನನ್ನ ಹೊಟ್ಯಾಗ ಬೆಳ್ಸಾಕ ಹತ್ತೇತಿ ಯವ್ವಾ ನಾ ನಿನ್ನ ಬಿಟ್ಟು ಎಲ್ಲೂ ಹೋಗಾಂಗಿಲ್ಲ, ನಾ ಇಲ್ಲೇ ಇರ್ತನು. ಮಾವ ಸತ್ತಾಗ ನೀ ಒಬ್ಬಾಕೆ ಇದ್ದೀ. ಆದರ ಈಗ ನಾವಿಬ್ಬರೂ ಅದೀವಿ. ನಾವಿಬ್ಬರೂ ಕೂಡಿ ಈ ವಂಶದ ಕುಡೀನ ಬೆಳೆಸೂನು ಅತ್ತಿ. ನೀ ಮೊದಲಿನಂಗಾಗು ಅಳs ಅತ್ತೀ ಅಳು ಹಗರ ಆಕ್ಕೆತಿ.''

ಪಾಶಿಯ ಮಾತುಗಳ ಕೇಳುತ್ತಲೇ ಆಶಿಮಾ ಭೂಮಿ ಬಿರಿಯುವಂತೆ ಅಳತೊಡಗಿದಳು. ಪಾಶಿಯನ್ನು ಬಿಗಿದಪ್ಪಿ ಗೋಳಿಡತೊಡಗಿದಳು. ನೆರೆಹೊರೆಯವರೆಲ್ಲ ಅತ್ತೆ-ಸೊಸೆಯರ ಕ್ರೂರ ದೈವಕ್ಕೆ ಶಾಪ ಹಾಕುತ್ತ ಅಳುತ್ತ ಕೂತಿದ್ದರು. ಪಾಶಿ ತನ್ನ ಒಡಲೊಳಗೊಂದು ಜೀವವಿದೆಯೆಂಬ ಕಾರಣಕ್ಕೆ ದೈರ್ಯ ತಳೆದಿದ್ದಳು.

* * *

ನೆನಪುಗಳು ಆಶಿಮಾಳ ಎವೆಗಳನ್ನು ಹಸಿ ಮಾಡಿದ್ದವು. ಆಶಿಮಾ ಮಗ್ಗಲು ಬದಲಿಸಿ ಮಲಗಲು ಯತ್ನಿಸತೊಡಗಿದಳು.

ದಾನೊನ ಸಾವಿನ ಆರು ತಿಂಗಳ ನಂತರ ಆಶಿಮಾಗೆ ಮತ್ತೊಮ್ಮೆ ಬದುಕಲ್ಲಿ ಆಶಾಕಿರಣ ಕಂಡಿತು. ಅದು ಮೊಮ್ಮಗುವಿನ ಆಗಮನದ ಸಂತಸ. ಮಗುವಿಗೆ 'ದೀವೊ' ಎಂಬ ಹೆಸರಿಟ್ಟರು. ಅವರ ಬದುಕಿಗೆ ದೀವೋ ಬೆಳಕಾಗಿ ಬಂದ. ಇಬ್ಬರೂ ತಮ್ಮ ವೈಧವ್ಯದ ಅಗಾಧ ನೋವನ್ನು ಮಗುವಿನ ಆಗಮನದ ಸಂಭ್ರಮದಲ್ಲಿ ಮರೆತುಹೋದರು. ಸಮಯ ಸರಿಯುತ್ತಲೇ ಸಾಲದ ಚಿಂತೆ ಕಾಡತೊಡಗಿತು. ದಾನೋನ ಮದುವೆಗಾಗಿ, ಅವನ ಔಷಧಿಗೆ ಮಾಡಿದ್ದ ಸಾಲ ಬೃಹದಾಕಾರವಾಗಿ ಬೆಳೆಯತೊಡಗಿತ್ತು. ಆಶಿಮಾ ಮಗನ ಸಾವಿನ ಆಘಾತ ದಿಂದ ಪೂರ್ತಿ ಚೇತರಿಸಿಕೊಂಡಿರಲಿಲ್ಲ. ಆಕೆಯನ್ನು ವಾತರೋಗ ನಿತ್ರಾಣಗೊಳಿಸಿತ್ತು. ಸಹಜವಾಗಿ ಇಡೀ ಮನೆಯ ಭಾರ ಮಗು ಮತ್ತು ಅತ್ತೆಯ ಆರೈಕೆಯ ಜೊತೆಗೆ ಸಾಲ ತೀರಿಸುವ ಜವಾಬ್ದಾರಿ ಪಾಶಿಯ ಹೆಗಲಿಗೆ ಬಿತ್ತು.

ಪಾಶಿ ಈ ತೊಂದರೆಗಳಿಗೆ ಎದೆಗುಂದಲಿಲ್ಲ. ಆಶಿಮಾಳ ಆರೋಗ್ಯ ಎಷ್ಟು ಹದಗೆಟ್ಟಿತ್ತೆಂದರೆ ಆಕೆ ಮಗುವಿನ ತೊಟ್ಟಿಲು ತೂಗಲೂ ಅಸಮರ್ಥಳಾಗಿದ್ದಳು. ಪಾಶಿ ಕೆಲಸಕ್ಕೆ ಹೋಗುವಾಗ ಮಗುವನ್ನು ಬೆನ್ನಿಗೆ ಕಟ್ಟಿಕೊಳ್ಳಬೇಕಾಗುತ್ತಿತ್ತು. ಆಕೆ ಅರಿವೆಯ ಜೋಳಿಗೆ ಮಾಡಿ ಗಿಡವೊಂದಕ್ಕೆ ಕಟ್ಟಿ ಮಗುವನ್ನು ಮಲಗಿಸಿ ದಗದಕ್ಕೆ ನಿಲ್ಲುತ್ತಿದ್ದಳು. ಮಧ್ಯಾಹ್ನ ಮತ್ತೆ ಮಗುವನ್ನು ಬೆನ್ನಿಗೆ ಕಟ್ಟಿಕೊಂಡು ಆ ದಿನದ ಕೂಲಿಯನ್ನು ತೆಗೆದು ಕೊಂಡು ಬಂದು ಆಶಿಮಾಳ ಕೈಗಿಡುತ್ತಿದ್ದಳು.

ಹೀಗೆಯೇ, ಐದು ತಿಂಗಳ ಕಾಲ ಪಾಶಿ ಹಸಿವಿನಿಂದ ಪಾರಾಗಲು ಏನೆಲ್ಲ ಕಷ್ಟಪಟ್ಟಳು. ಚಳಿಗಾಲ ಬಂತು. ಪಟೇಲ ಅವರಿಗೆ ಸಾಲ ಕೊಟ್ಟಿದ್ದವನಾದ್ದರಿಂದ ಅವನ ಹೊಲದಲ್ಲೇ ಪಾಶಿ ದುಡಿಯಬೇಕಿತ್ತು. ''ಒಂದೆಕರೆ ತ್ವಾಟದ ಕಳೇ ಕೀಳೂದು ಸುಗ್ಗಿ ಆಗೂತನಾ ನೋಡ್ಕೊಂಡ್ರ ಒಂದು ನೂರು ರೂಪಾಯಿ ಸಾಲದಾಗ ಮುರೀತನೂ. ನೀವೇನ ಬಡ್ಡೀ ಕೊಡೂದ ಬ್ಯಾಡ'' ಎಂದು ಪಟೇಲ ಆಶಿಮಾಳಿಗೆ ಹೇಳಿದ.

ಆಶಿಮಾ ನೋವಿನಿಂದ ''ನೀಂವ ಹೇಳೂದ ಸರಿ ಐತ್ರೀ ಸಾಹುಕಾರ. ನಾವು ಎಲ್ಲೂ ಸಾಲಾನೂ ತೀರಸ್ತೀವಿ. ಆದರ ಬದುಕೂದ ಹೆಂಗ್ರಿಯಪ್ಪಾ? ಸಣ್ಣ ಕೂಸೈತಿ ಆಕೀ ಬಗಲಾಗ, ನಾ ನೋಡೀರ ಹೀಂಗ ಜಡ್ಡಾಗಿ ಬಿದ್ದsನಿ ನಮ್ಮ ಹೊಟ್ಟೀ ಗತಿ ಏನs ಸನ್ನಪ್ಪ? ಆ ಹುಡುಗಿ ಒಂದs ಏನ ಮಾಡಬೇಕು?''

ಪಟೇಲ ಕರುಣೆ ತೋರಿದವನಂತೆ ''ಆತ ಬಿಡು, ದಿನಗೂಲಿ ಅಂತ ದಿವಸಕ್ಕ ಒಂದು ರೂಪಾಯಿ ಕೊಡತೀನು ಆತಿಲ್ಲ' ಅಂದ.

ಶಾಲೆಯಲ್ಲಿ ಅಡುಗೆ ಸಹಾಯಕಿಯೇ ಶಿಕ್ಷಕಿ



ಚಿಂತೆ ಯಾಕೆ... ಇವರಲ್ಲಿ ಕಲಿತವರು ಮುಂದೆ ಹೋಟೆಲ್ ಉದ್ಯಮದಲ್ಲಿ ಖ್ಯಾತರಾಗಿ ಹೊರಹೊಮ್ಮಬಹುದು

ಪಾಶಿ ಒಂದೆಕರೆ ಹೊಲದ ಕಳೇ ಕೀಳುವ ಹತ್ತು ದಿವಸದ ಕೆಲಸ ಎರಡು ದಿನದೊಳಗೆ ಮುಗಿಸಿ ಉಳಿದ ದಿನ ಬೇರೆಡೆ ಕೆಲಸ ಮಾಡಲು ಶುರು ಮಾಡಿದಳು. ದುಡಿತ ಆಕೆಗೆ ಒಗ್ಗಿಹೋಗಿತ್ತು. ಹೀಗಿರಲು ಒಂದೆರಡು ದಿನ ಜೋರು ಮಳೆ ಸುರಿಯಿತು. ಚಳಿ ತಡೆಯಲಾರ ದಷ್ಟಿತ್ತು. ಕಷ್ಟದಲ್ಲೇ ಹುಟ್ಟಿದ ದೀವೋ ಅಷ್ಟು ಆರೋಗ್ಯ ವಂತ ಮಗುವಾಗಿರಲಿಲ್ಲ. ಆ ನಡುಗುವ ಚಳಿಯಲ್ಲಿ ಪಟೇಲರ ಹೊಲದಲ್ಲಿ ಹುಡುಗನ ಆರೋಗ್ಯ ಪರೀಕ್ಷಿಸುವ ವಾತಾವರಣ ಅದು. ಪಾಶಿ ಆ ದಿನ ಮಗುವನ್ನು ಬೆಚ್ಚನೆಯ ಬಟ್ಟೆಯೊಳಗೆ ಮುಚ್ಚಿಕೊಂಡು ಹೊಲಕ್ಕೆ ಬಂದಳು. ದಗದ ಶುರು ಮಾಡುವ ಮುನ್ನ ಹುಡುಗನಿಗೆ ಹಾಲು ಕುಡಿಸಲು ಎಷ್ಟು ಪ್ರಯತ್ನಿಸಿದರೂ ಮಗು ಮೊಲೆಯ ತೊಟ್ಟನ್ನು ಬಾಯೊಳಗೆ ಹಿಡಿಯಲೇ ಇಲ್ಲ. 'ಅದಕ್ಕ ಹಸು ಆದಾಗ ತಾನs ಅಳ್ತೈತೆ ಆಗ ಕುಡಿಸಿದ್ರಾತು' ಪಾಶಿ ತನಷ್ಟಕ್ಕೆ ಅಂದುಕೊಂಡಳು. ಜೋಳಿಗೆಯೊಳಗೆ ಕೂಸನ್ನು ಹಾಕಿ ಬೆಚ್ಚಗೆ ಮಲಗಿಸಿ ಮಗು ಮಲಗಿದೆ ಅನ್ನಿಸಿದಾಗ ಕೆಲಸಕ್ಕೆ ನಡೆದಳು.

ಆ ದಿನ ಏಕೋ ಪಾಶಿಗೆ ದಗದ ಮಾಡಲು ಮನಸ್ಸೇ ಇರಲಿಲ್ಲ. ಕೆಟ್ಟ ವಿಚಾರಗಳು ತಲೆ ತಿನ್ನತೊಡಗಿದ್ದವು. ಇಬ್ಬನಿ ಮತ್ತು ಮಳೆ ಬೆಳೆಯನ್ನು ಮುಟ್ಟಲಾಗದಷ್ಟು ತಂಪಾಗಿಸಿದ್ದವು. ಪಾಶಿ ನಡುಗುತ್ತಲೆ ಕೆಸರೊಳಗೆ ಕೆಲಸ ಮಾಡಿದಳು. ಆಕೆಗೆ ಅದರ ಹೊರತು ಬೇರೆ ದಾರಿಯೇ ಇರಲಿಲ್ಲ. 'ದೈವದ ಶಾಪ'ಕ್ಕೆ ಒಳಗಾದ ಅಂಥ ಸಮುದಾಯದೊಳಗೇ ತಾನೆ ಆಕೆ ಹುಟ್ಟಿದ್ದು! ಪಾಶಿಯ ಕೈಗಳು ಆ ತಂಪಿಗೆ ಸೆಳೆತಂತಾದವು. ಕಳೆಯ ಕೀಳಲು ಬೆಳೆಯ ನಡುವೆ ಕೈ ತೂರಿದಾಗ ಕೈಯೊಳಗಿನ ರಕ್ತ ಹೆಪ್ಪುಗಟ್ಟಿದಂತೆ ಎನ್ನಿಸತೊಡಗಿತ್ತು ಆಕೆಗೆ. ಸೂರ್ಯ ನೆತ್ತಿಯ ಮೇಲೆ ಬರುವ ಹೊತ್ತಿಗೆ ಚಳಿ ಸ್ವಲ್ಪ ಸಹನೀಯ ವೆನ್ನಿಸಿತು. ಪಾಶಿಗೆ ಚಿಂತೆ ಹತ್ತಿಕೊಂಡಿತ್ತು. ''ಇವತ್ತs ಹುಡುಗ ಹಾಲs ಕುಡಿದಿಲ್ಲ, ಅದ್ರೂ ನನ್ನ ಎದೀ ಬಗೀವಲ್ಲು. ದೀವೂ ಯಾಕ ಇನ್ನೂ ಎಚ್ಚರಾಗಿಲ್ಲ. ದಿನಾ ಇಟೊತ್ತಿಗೆ ಎರಡ್ಮೂರ ಸಲಾ ಏಳಾಂವ'' ಎಂದು ಕೊಳ್ಳುತ್ತಲೆ ಲಗುಬಗೆಯಿಂದ ದಿನದ ಕೆಲಸ ಮುಗಿಸಿ ಜೋಳಿಗಿ ಕಟ್ಟಿದ್ದ ಗಿಡದ ಬಳಿ ಬಂದಳು. ಮಗುವಿನ ಹಣೆ ಮುಟ್ಟಿನೋಡಿದಳು. ಆಕೆಯ ಕೈ ಎಷ್ಟು ತಣ್ಣಗಾಗಿ ಬಿಟ್ಟಿದ್ದವೆಂದರೆ ಮಗುವಿನ ಹಣೆ ತಣ್ಣಗಾದದ್ದನ್ನು ಆಕೆಗೆ ಬೇಗ ಗುರುತಿಸಲಾಗಲಿಲ್ಲ. ಜೋಳಿಗೆಯಿಂದ ಮಗುವನ್ನು ಹೊರತೆಗೆದು ತನ್ನ ಮೊಲೆಗಳನ್ನು ಮಗುವಿನ ಬಾಯಿಯೊಳಗೆ ತೂರಿಸಲು ಯತ್ನಿಸಿದಳು. ಮಗು ಸುಮ್ಮನೆ ಮಲಗಿದಂತಿತ್ತು. ಮಗುವನ್ನು ಎದೆಗಾನಿಸಿಕೊಳ್ಳಬೇಕೆಂದು ಎತ್ತುವುದರಲ್ಲೇ ಅದರ ನಿರ್ಜೀವ ತಲೆ ಅವಳ ಎದೆಯ ಮೇಲೆ ಬಿತ್ತು.

''ನನ್ನ ಕೂಸs...!'' ಪಾಶಿ ಇಡೀ ಭೂಮಿಯೆ ಪ್ರತಿಧ್ವನಿಸುವಂತೆ ಚೀರಿದಳು. ಆ ದನಿಗೆ ಹೆದರಿದಂತಾದ ಕಂಟಿ-ಪೊದೆ-ಬೆಳೆಗಳು ಅವಳತ್ತ ಕರುಣೆಯಿಂದೆಂಬಂತೆ ನೋಡುತ್ತಿದ್ದವು. ಪಾಶಿ ಈಗ ಥೇಟ್ ಕಲ್ಲಿನಂತೆ ತನ್ನ ಉಸಿರು ಕಳೆದುಕೊಂಡ ಮಗು ವನ್ನು ನೋಡಿದಳು. ನಂತರ ಆಗಸದ ಕಡೆಗೊಮ್ಮೆ. ಅಲ್ಲಿ 'ದೇವರು' ಎಂಬಾತನೊಬ್ಬ ಇದ್ದಿದ್ದರೆ ಆ ಕ್ಷಣ ಆಕೆ ಅವನನ್ನು ಕೊಂದೇಬಿಡುತ್ತಿದ್ದಳೇನೋ. ಆ ಕ್ಷಣ ಅವಳ ಮುಖದ ಭಾವನೆ ಹಾಗಿತ್ತು. ಆಗಸದಲ್ಲೀಗ ಮೋಡಗಳಿರಲಿಲ್ಲ. ಅದು ಮಗುವಿನ ಹಾಗೆ ತಣ್ಣಗಿತ್ತು! ಹೊಲದ ಬೆಳೆ ಮಾತ್ರ ಆಕೆಯನ್ನು ಸಂತೈಸುವಂತೆ ಅಲುಗಾಡುತ್ತಲೇ ಇತ್ತು.

ಪಾಶಿ, ಮಗುವನ್ನು ಮತ್ತೆ ಜೋಳಿಗೆಗೆ ಹಾಕಿ ಕಳೆಕೀಳತೊಡಗಿದಳು. ಈಗ ಆಕೆಯ ಮನಸ್ಥಿತಿ ಯಾರಿ ಗಾಗಿಯೂ ರೋದಿಸಬೇಕೆನ್ನಿಸುವಂತಿರಲಿಲ್ಲ. ಇನ್ನೇಕೆ ಅಳಬೇಕು? ಆ ನಿರ್ಜೀವ ಹೊಲದಲ್ಲಿ ಆಕೆಯನ್ನು ಸಂತೈಸುವವರಾದರೂ ಯಾರಿದ್ದರು? ಆಕೆಗೆ ಆಶ್ರಯ ಕೊಡುವ ಮಡಿಲಾದರೂ ಎಲ್ಲಿತ್ತು?

ಮಧ್ಯಾಹ್ನದ ಹೊತ್ತಿಗೆ ಕೆಲಸ ಮುಗಿಸಿದ ಪಾಶಿ ದೀವೂನ ಹೆಣ ಹೊತ್ತುಕೊಂಡಳು. ಜೋಳಿಗೆಯನ್ನು ಬಿಚ್ಚಿಕೊಳ್ಳಬೇಕೆಂಬ ಖಬರು ಆಕೆಗಾಗ ಇರಲಿಲ್ಲ. ಹುಚ್ಚಿಯಂತೆ ಆಕೆ ಪಟೇಲನ ಮನೆಯತ್ತ ಓಡಿದಳು.

''ಇವತ್ತಿನ ಕೆಲಸ ಆತನವಾs?'' ಕೇಳಿದ ಪಟೇಲ. ಪಾಶಿ ಅವನಿಗೆ ಉತ್ತರಿಸದೆ ನೇರವಾಗಿ ಅವನನ್ನೇ ದಿಟ್ಟಿಸಿದಳು. ಆದರೆ ಪಟೇಲನಿಗೆ ಆಕೆಯ ಮುಖದ ಭಾವಗಳನ್ನು ಅರ್ಥಮಾಡಿಕೊಳ್ಳುವ ಜಾಣ್ಮೆಯಾಗಲಿ ತಾಳ್ಮೆಯಾಗಲಿ ಇರಲಿಲ್ಲ.

''ಸರಿ ಇದು ತಗೋ'' ಆಕೆಯ ಕೈಗೆ ಒಂದು ರೂಪಾಯಿಯ ನಾಣ್ಯವನ್ನು ತುರುಕಿ ಒಳಮನೆಗೆ ನಡೆದ.

ಪಾಶಿ ಮನೆಯನ್ನು ಹೇಗೆ ತಲ್ಪಿದಳೋ ಆಕೆಗೆ ಗೊತ್ತಾಗಲಿಲ್ಲ ಆಶಿಮಾ ಹೊರಗೆ ಹೂರಸಲ ಮೇಲೆ ಮಲಗಿಕೊಂಡು ಪಾಶಿಯ ಬರುವಿಗಾಗಿ ಕಾಯುತ್ತಿದ್ದಳು. ''ಇದs ತಗೋ ಅತ್ತಿ ಇವತ್ತ ಪಟೇಲ ಕೊಟ್ಟ ರೊಕ್ಕಾ'' ಅಂದಳು ಪಾಶಿ. ನಂತರ ನಿಧಾನವಾಗಿ ಉಸಿರಿಲ್ಲದ ಮಗುವನ್ನು ಮುದುಕಿ ಆಶಿಮಾಳ ಮುಂದೆ ಹಾಕಿ ''ಇದುs ನಿನ್ನ ವಂಶದ ಕುಡಿ ಅತ್ತಿ''. ಅದು ತನ್ನ ಕೊನೆಯ ಮಾತೇನೋ ಅನ್ನುವಂತೆ ಅಂದು ಕಲ್ಲಾಗಿ ನಿಂತಳು!

(ಡಾ॥ ವಿಭಾ ಅವರಿಗೆ ಗೌರವದೊಂದಿಗೆ)

# ಮಾತುಗಾರಿಕೆಯ ಗತ್ತು-ಗೈರತ್ತು

ಮನುಷ್ಯ ಮಾತು ಕಲಿತಂದಿನಿಂದಲೂ ಅವನಿಗೆ ಇದೊಂದು ಪ್ರಮುಖ ಸಂವಹನ ಮಾಧ್ಯಮವಾಗಿದೆ. ನಮ್ಮ ಭಾವನೆಗಳನ್ನು, ಅಭಿಪ್ರಾಯಗಳನ್ನು, ಅನ್ನಿಸಿಕೆಗಳನ್ನು ಅಭಿವ್ಯಕ್ತಗೊಳಿಸಲು ಮಾತೇ ಮುಖ್ಯ. ಯಾವುದೇ ಮಾತನ್ನಾಡಿದರೂ ಸಂದರ್ಭಕ್ಕೆ ತಕ್ಕಂತೆ ಎಷ್ಟು ಆಡಬಹುದೋ ಅಷ್ಟೇ ಆಡಬೇಕು. ಇದೊಂದು ಸಂಸ್ಕೃತಿ ಹಾಗೂ ಸಭ್ಯತೆಯೂ ಹೌದು. ಹಾಗಿಲ್ಲದೆ ಸುಮ್ಮನೆ ಮಾತನಾಡುತ್ತೇನೆಂದು ಸಂದರ್ಭವರಿಯದೆ ಏನೋ ಮಾತನಾಡತೊಡಗಿದರೆ ನಗೆಪಾಟಲಿಗೀಡಾಗಬೇಕಾಗುತ್ತದೆ. ಇಬ್ಬರು ವ್ಯಕ್ತಿಗಳು ಸೇರಿದಾಗ ಮಾತನಾಡದೆ ಇರಲು ಸಾಧ್ಯವೇ ಇಲ್ಲ. ಅಪರಿಚಿತರಾದರೂ ಅಷ್ಟೆ, ಸಮಯ ಕೊಲ್ಲಲಾದರೂ ಮಾತನ್ನಾರಂಭಿಸಲೇಬೇಕಾಗುತ್ತದೆ. ಆದರೆ ಇದಕ್ಕೆ ಅಪವಾದವೆನ್ನುವಂತಿರುವುದು ವಿದೇಶಿಯರ ಸಂಸ್ಕೃತಿ. ಪರಿಚಯ ಮಾಡಿಸುವವರಿಲ್ಲದಿದ್ದರೆ ಜಪ್ಪಯ್ಯ ಎಂದರೂ ತುಟಿಬಿಚ್ಚರೆ ಕೇಳಿ ! ಆದರೆ ನಮ್ಮಲ್ಲಿ ಹಾಗಲ್ಲ, ಹಳ್ಳಿಯ ರೈತರಿಗೆ ಪರಿಚಿತರು, ಅಪರಿಚಿತರು ಎಂಬ ಭೇದಭಾವವಿಲ್ಲದೆ ವ್ಯವಸಾಯ, ವ್ಯಾಪಾರ, ಬೆಳೆ-ಕಳೆಗಳ ಬಗ್ಗೆ ಸಿಕ್ಕಿದವರೊಡನೆ ಮಾತು ಪ್ರಾರಂಭಿಸಿಬಿಡುತ್ತಾರೆ. ಅಜ್ಞಾತ ಉರ್ದು ಕವಿಯೊಬ್ಬ ಹೇಳಿದಂತೆ,

*ಕತ್ತೆ ಕತ್ತೆಯ ಕಂಡೊಡೆ ನೀಡುವುದೆರಡು ಲಾತ।*
*ಮನುಜ ಮನುಜನ ಕಂಡೊಡೆ ಆಡುವನೆರಡು ಮಾತ॥*

– ಹೀಗೆ ಮನುಷ್ಯ ಮನುಷ್ಯನನ್ನು ಕಂಡೊಡನೆ ಮಾತು ಪ್ರಾರಂಭಿಸಿಬಿಡುತ್ತಾನೆ.

ನನ್ನೊಬ್ಬ ಚಿಕ್ಕಪ್ಪನಿದ್ದಾನೆ. ಅವನೆಂತಹ ಮಿತಭಾಷಿಕನೆಂದರೆ ಉದ್ದುದ್ದ ವಾಕ್ಯವನ್ನು ತುಂಡರಿಸಿ ಪದಗಳಾಗಿ ಬಾಯಿಂದ ಚೆಲ್ಲಬೇಕಾದರೆ ಅವನು ಪ್ರಯಾಸಪಡುವುದಕ್ಕಿಂತ, ಅವನು ಏನು ಹೇಳಿದನೆಂಬುದನ್ನು ಅರ್ಥೈಸಿಕೊಳ್ಳಲು ನಾವು ಅಷ್ಟೇ ಪ್ರಯಾಸಪಡಬೇಕಾಗುತ್ತದೆ. ಒಮ್ಮೆ ನನ್ನ ಚಿಕ್ಕಪ್ಪ ಬಂದವನೇ ''ಅಮ್ಮ... ಸೀರೆ... ಮದುವೆ... ಕೊಳ್ಳೆಗಾಲ...'' ಎಂದು ಪದ ನುಂಗಿ ಹೇಳಿ ಮುಗಿಸುವುದರೊಳಗೆ ಅದೆಲ್ಲಿದ್ದರೋ ನಮ್ಮಪ್ಪ ಎದ್ದು ಬಂದವರು ''ಅದೇನೋ ರಾಜು, ಸರಿಯಾಗಿ ಬೊಗಳ್ಬಾರ್ದಾ, ಅಮ್ಮ... ಸೀರೆ... ಮದುವೆ... ಕೊಳ್ಳೆಗಾಲ... ಅಂದರೆ ಏನರ್ಥ ?'' ಎಂದು ರೇಗಿದಾಗ ಅವನು ಪುನಃ ಒದರಿದ್ದಷ್ಟೆ. ಆಗ ಅಡಿಗೆಮನೆಯಿಂದ ಹೊರಬಂದ ನಮ್ಮಮ್ಮ ''ಬಿಡಿ, ನಂಗೊತ್ತಾಯ್ತು, ಅಮ್ಮ (ಅಂದರೆ ಅತ್ತೆ) ಬಹುಶಃ ಮದುವೆಗೆ ಕೊಳ್ಳೆಗಾಲಕ್ಕೆ ಹೋಗುತ್ತಿರಬಹುದು, ಅವರಿಗೆ ಮದುವೆಗೆ ಉಟ್ಟುಹೋಗಲು ಸೀರೆ ಬೇಕಾಗಿರಬಹುದು,'' ಎಂದು ರೂಮಿಗೆ ಹೋಗಿ ಎರಡು ರೇಷ್ಮೆ ಸೀರೆ ತಂದು ನನ್ನ ಚಿಕ್ಕಪ್ಪನ ಕೈಗಿತ್ತರು. ಹೀಗೆ ವಾಕ್ಯವನ್ನೇ ತಿಂದುಕೊಂಡರೆ ಅರ್ಥ ಹೊರಡುವುದಾದರೂ ಹೇಗೆ ?



ಇನ್ನೊಬ್ಬ ಸ್ನೇಹಿತನಿದ್ದಾನೆ. ಅವನು ಮಾತನ್ನು ಅದೆಷ್ಟು ವೇಗವಾಗಿ ಬಳಸುತ್ತಾನೆಂದರೆ, ಹತ್ತು ಅಕ್ಷರದ ಉದ್ದ ಪದದಲ್ಲಿ ಮೂರ್ನಾಲ್ಕು ಅಕ್ಷರಗಳು ನಿಮ್ಮ ಕಿವಿಗೆ ಬಿದ್ದಿದ್ದರೆ ನಿಮ್ಮ ಅದೃಷ್ಟವೆಂದೇ ಹೇಳಬಹುದು. ತೂಕ್ಕೆರೆ... ತೂಕ್ಕೆರೆ... ತೂಕ್ಕೆರೆ... ಎಂದು ನಾಲ್ಕಾವರ್ತಿ ಹೇಳಿದಾಗಲೂ ನಾನು ಆಂ... ಆಂ... ಎಂದ ಮೇಲೂ ಅರ್ಥವಾಗದೆ, ಅವನು ಏನು ವಿಷಯ ಮಾತನಾಡುತ್ತಿದ್ದಿರಬಹುದೆಂದು ಯೋಚಿಸಿದ ನಂತರವೇ ನನಗೆ ಅರ್ಥವಾದುದು 'ತೊಂಡನೂರು ಕೆರೆ' ಎಂಬುದು. ಹೀಗೆ ಇನ್ನೂರು ಕಿ.ಮೀ. ವೇಗದಲ್ಲಿ ಮಾತನಾಡಿದರೆ ಅರ್ಥಮಾಡಿಕೊಳ್ಳುವುದಾದರೂ ಹೇಗೆ ?

ಇನ್ನು ಕೆಲವರಿದ್ದಾರೆ. ಫೋನಿನಲ್ಲಿ ಯಾವುದೋ ವಿಷಯ ತಿಳಿಯಲು ಸ್ನೇಹಿತರಿಗೆ ಫೋನುಮಾಡಿ ''ಏನ್ಸಮಾಚಾರ'' ಎಂದು ಹೇಳಿ ಆತ ಸಮಾಚಾರ ಹೇಳುವುದರೊಳಗೆ ಇವರೇ ಪೂರ್ತ ಮಾತನಾಡಿ ಫೋನಿಟ್ಟಿರುತ್ತಾರೆ. ನನ್ನೊಬ್ಬ ಸ್ನೇಹಿತರು ಹೀಗೆಯೇ ಅವರು ಯಾರೋ ಒಬ್ಬ ಭಾಷಣಕಾರರ ಬಗ್ಗೆ ಹೇಗೆ ಮಾತಾಡುತ್ತಾರೆಂದು ತಿಳಿದು, ತಮ್ಮ ಬಡಾವಣೆಯಲ್ಲಿ ರಾಜ್ಯೋತ್ಸವಕ್ಕೆ ಭಾಷಣದ ವ್ಯವಸ್ಥೆ ಮಾಡಲು ಫೋನ್‌ಮಾಡಿದರು. ನಾನು ಹಿಂದಿನ ದಿನವಷ್ಟೇ ಇವರು ಅಪೇಕ್ಷಿಸಿದ ಭಾಷಣಕಾರರ ಭಾಷಣ ಕೇಳಿದ್ದೆ.

''ನಿನ್ನೆ ದಿನ... ರವರ ಭಾಷಣವಿತ್ತಲ್ಲ ಹೋಗಿದ್ದಿರಾ ?'' ಎಂದರು.

''ಹ್ಞಾಂ! ಹೋಗಿದ್ದೆ'' ಎಂದು ಮಾತು ಮುಂದುವರೆಸುವಷ್ಟರಲ್ಲಿಯೇ, ''ಸರಿ ಬಿಡಿ, ಅವರು ಮಾತಾಡೇ ಮಾತಾಡ್ತಾರೆ. ನಂಗೊತ್ತಿತ್ತು, ನಿನ್ನೆ ದಿನ ಭಾಷಣ ಭರ್ಜರಿಯಾಗೇ ಮಾಡಿರ್ತಾರಂತ. ಅವರೊಂದು ಸಾರೆ ಶಿವಮೊಗ್ಗದಲ್ಲಿ ಭಾಷಣ ಮಾಡಿದ್ದರಂತೆ. ಆಗ ಚೆನ್ನಾಗಿ ಮಾಡ್ಲಿಲ್ಲಾಂತ ನನ್ನ ಸ್ನೇಹಿತ ಹೇಳ್ದ. ಆದ್ರೆ ಈಗ ಬಹಳ ಇಂಪ್ರೂ ಮಾಡ್ಕೊಂಡಿದ್ದಾರೇಂತ ಹೇಳ್ತಾರೆ. ಬಹುಶಃ ಅವರಿಗೆ ಮೊದಲೇ ವಿಷಯ ತಿಳಿಸಿ, ಇದೇ ವಿಷಯದ ಮೇಲೆ ಮಾತಾಡಿ ಅಂದ್ರೆ ಚೆನ್ನಾಗಿ ಮಾತಾಡ್ಬೋದು. ನಿಮ್ಗೆ ಅವರ ಫೋನ್ ನಂಬರ್ ಗೊತ್ತಿದ್ರೆ ಕೊಡಿ... ಬೇಡ ಬಿಡಿ, ನಾ ಹ್ಯಾಗೋ ಹುಡುಕ್ಕೋತೀನಿ. ನಮ್ಮ ಏರಿಯಾದಲ್ಲಿ ಕನ್ನಡ ಸಂಘ ಒಂದಿದೆ. ಅವರು ಸುಮಾರು ಜನ ಕವಿಗಳ, ಭಾಷಣಕಾರರ ವಿಳಾಸ, ಫೋನ್ ನಂಬರ್ ಇಟ್ಕೊಂಡಿದ್ದಾರೆ. ನಾನೇ ಕೇಳಿ ತಿಳ್ಕೊಂಡು ಮಾತಾಡಿ, ಕಾರ್ಯಕ್ರಮ ನಿಗದಿಪಡಿಸಿ ನಿಮ್ಗೆ ನಂತರ ಫೋನ್ ಮಾಡ್ತೇನೆ'' ಎಂದು ಫೋನಿಟ್ಟರು. ಅವರು ಅಂದಿನ ದಿನ ಭಾಷಣ ಮಾಡಿದ ವಿಷಯ ತಿಳಿಸಿ, ಹೇಗೆ ಮಾತಾಡುತ್ತಾರೆ ಎಂದು ನನ್ನ ಅಭಿಪ್ರಾಯ ತಿಳಿಸಲು ಕಾದೆ. ಫೋನ್ ಮಾಡಿ ವಿಷಯ ತಿಳಿಯಲು ಅಪೇಕ್ಷಿಸಿದ ಈತ ನನ್ನ ಅಭಿಪ್ರಾಯ ತಿಳಿಸುವುದಕ್ಕೆ ಮುಂಚೆಯೇ ಫೋನಿಟ್ಟಾಗಿತ್ತು. ಹೀಗೆ ತರಾತುರಿ ಮಾಡಿಕೊಂಡರೆ ಹೇಗೆ? ನೀವು ಪ್ರಶ್ನೆ ಕೇಳಿದ ಮೇಲೆ ಅವರು ಏನುತ್ತರ ಹೇಳುತ್ತಾರೆ ಎಂದು ಕಾದುನೋಡಬೇಕೆ ವಿನಾ ಅವರು ಹೇಳುವುದಕ್ಕೆ ಮುಂಚೆಯೇ ಮಾತು ಮುಗಿಸಿದರೆ ನಾವು ಮಾತನಾಡುವುದಾದರೂ ಏನನ್ನು ?

ಉತ್ತರಿಸಲು ಕೇಳಿದಾಗ ಪೂರ್ಣ ಉತ್ತರ ಹೇಳುವವರೆವಿಗೂ ಕಾಯುವಷ್ಟು ತಾಳ್ಮೆಯೇ ಇರದಿದ್ದರೆ ನಿಮಗೆ ಸಿಗುವ ಉತ್ತರವಾದರೂ ಎಂಥದ್ದು? ಯಾವುದೇ ಟಿ.ವಿ. ಸೀರಿಯಲ್, ಸಿನಿಮಾ, ನಾಟಕವನ್ನು ನೋಡಿ : ಒಬ್ಬ ಮಾತನಾಡುವವರೆಗೆ ಮತ್ತೊಬ್ಬ ಮಧ್ಯವಲ್ಲಿ ಮಾತನಾಡಿದರೆ ಕೇಳಿ. ಒಬ್ಬರ ನಂತರ ಮತ್ತೊಬ್ಬರು ಮಾತನಾಡುತ್ತಾರೆ. ಆದ್ದರಿಂದಲೇ ನಮಗೆ ಕಾರ್ಯಕ್ರಮ ನೋಡಲು, ಅರ್ಥಮಾಡಿಕೊಳ್ಳಲು ಅನುಕೂಲವಾಗುವುದು. ಹಾಗಿಲ್ಲದೆ ಎಲ್ಲರೂ

ಡಾ. ಎಸ್. ಗುಂಡೂರಾವ್

ಒಂದೇ ಸಾರೆ ಮಾತನಾಡಲು ಪ್ರಾರಂಭಿಸಿದರೆ ಯಾರಿಗೂ ಯಾವುದೂ ಅರ್ಥವಾಗದೆ ಅದೊಂದು ಮೀನು ಮಾರಾಟದ ಸಂತೆಯಾದೀತು.

ಇನ್ನು ಕೆಲವರಿದ್ದಾರೆ. ಮಾತು ಪ್ರಾರಂಭಿಸಿದರೆ ಸಾಕು, ಗೊಣಗೊಣ ಎಂದು ಒಡಕಲು ಮಡಕೆಗೆ ಸಣ್ಣಕಲ್ಲು ಒಗೆದಂತೆ ಗೊಣಗುಟ್ಟಲು ಪ್ರಾರಂಭಿಸುತ್ತಾರೆ. ಅವರು ಹೇಳುವುದಾದರೂ ಏನೆಂಬುದೂ ಅರ್ಥವಾಗದೆ, ಎದುರಿಗಿದ್ದವರು ಮೂಕರಾಗಿ ನಿಂತು ಅವರು ಗೊಣಗುಟ್ಟುತ್ತಿರುವ ಶಬ್ದವನ್ನಷ್ಟೇ ಆಲಿಸಬೇಕಾದೀತು.

*ಮಾತು ಬೇಸರವಾಗಿ ಜೀವವೇ ಹಾರಿಹೋದೇವೇ ಎನುತಿದೆ*
*ಬೆಟ್ಟದಾಚೆಯ ಮುತ್ತು ಸಂಜೆಯ ತಂಪಿನುಸಿರಿನ ಹಾಸಿಗೆ*

– ಎಂದು ಕೆ.ಎಸ್. ನರಸಿಂಹಸ್ವಾಮಿಯವರು ತಮ್ಮ ಕವನದಲ್ಲಿ ಮಾತು ಬೇಸರವಾಗಿ ಜೀವ ಹಾರಿಹೋಗುತ್ತಿದೆ ಎನ್ನುತ್ತಾರೆ.

ಮನುಷ್ಯ ಸಮಾಜದಲ್ಲಿ ಬದುಕಬೇಕಾದರೆ ಇತರೆ ಮೂಲಭೂತ ಸೌಕರ್ಯಗಳಂತೆ ಮಾತು ಮುಖ್ಯ. ಮಾತುಗಾರನಿಗೆ ಶಿಕ್ಷೆ ಕೊಡಬೇಕೆಂದಿದ್ದರೆ ಅವನನ್ನೊಂದು ಕೊಠಡಿಗೆ ಒಗೆದು ಹದಿನೈದು ದಿನ ಮಾತನಾಡಿಸದೆ ಬಿಟ್ಟು ಬಿಡಿ. ಮಾತನಾಡಿಸುವವರಿಲ್ಲದೆ ಹುಚ್ಚೆದ್ದುಹೋಗುತ್ತಾನೆ. ನಮ್ಮ ಮನಸ್ಸಿನೊಳಗಣ ಭಾವನೆಗಳನ್ನು ಹೊರಗೆಡಹಲು ಕೇಳುಗನೊಬ್ಬನಿದ್ದರೆ ಉತ್ತಮ. 'ಟೂ ಈಸ್ ಎ ಕಂಪನಿ, ಥ್ರೀ ಈಸ್ ಎ ಕ್ರೌಡ್' ಎಂದು ಅದಕ್ಕೇ ಹೇಳುವುದು. ಇನ್ನು ಮೂರನೆಯವನ ಆಗಮನವಾದರೆ ಮೊದಲಿನ ವರಿಬ್ಬರೂ ಹೃದಯ ಮುಚ್ಚಿ ಕಾಟಾಚಾರಕ್ಕೆ ಏನೋ ಒಂದು ವಿಷಯ ತೆಗೆದು ಮಾತನಾಡತೊಡಗುತ್ತಾರೆ. ಇನ್ನು ನಾಲ್ವರಾದರೆ ಅದೊಂದು ಪುರಾಣದ ಕಟ್ಟೆಯೇ ಆಗಿಬಿಡುತ್ತದೆ. ಆದರೆ ನಾವು ಮಾತನಾಡುವಾಗ ಯಾವ ವಿಷಯ ಮಾತನಾಡುತ್ತೇವೆ ಎಂಬುದರ ಖಚಿತತೆ ಮುಖ್ಯ. ಅದಿಲ್ಲದಿದ್ದರೆ ಕೇಳುಗರು ನಮ್ಮ ಮುಖಮುಖ ನೋಡತೊಡಗಿದರೆ ಹೋಗುವುದು ನಮ್ಮ ಮಾನವೇ ಹೊರತು ಕೇಳುಗರದಲ್ಲ. ಒಂದು ಸಾರೆ ನಾಲಗೆಯಿಂದ ಮಾತು ಹೊರಬಿದ್ದರೆ ಮುಗಿದಂತೆಯೇ, ಅದನ್ನು ನೀವೆಂದೂ ಹಿಂದಕ್ಕೆ ಪಡೆಯಲಾಗುವುದಿಲ್ಲ. ಒಂದು ಸಾರೆ ಕೇಳುಗನಿಗೆ ಅಪಾರ್ಥಕ್ಕೆ ಎಡೆಕೊಡುವಂತೆ ಮಾತನಾಡಿದರೆ ಸಾಕು, ಎಂದೆಂದಿಗೂ ಆತ ನಂಬಲಾರ. ಗಾಜಿನ ಮನೆಯ ಮೇಲೆ ಒಂದು ಸಾರೆ ಒಗೆದ ಕಲ್ಲು ಠಳಗುಟ್ಟಿಸಿ ಪುಡಿಪುಡಿ ಮಾಡಿ ಬಿಡುವಂತೆ ಮಾತೂ ಅಷ್ಟೇ, ಹೃದಯವನ್ನು ಚೂರು ಚೂರಾಗಿಸಿಬಿಡುತ್ತದೆ. ಆದರೆ ಆಡಿದ ಮಾತನ್ನು ಖಂಡಿತ ಹೆಕ್ಕಲಾಗದು. 'ಮಾತೇ ಮೃತ್ಯು ಮಾತೇ ಮುತ್ತು', ಆದರೆ ಮೊದಲನೆಯದಾಗದಿರಲಿ.

ದೊಡ್ಡವರು, ಅದರಲ್ಲೂ ಪೀಠದಲ್ಲಿ ಕುಳಿತ ಸ್ವಾಮಿಗಳೊಡನೆ ಸಂಭಾಷಿಸುವಾಗ ತೆರೆದ ನಾಲ್ಕು ಬೆರಳನ್ನು ನಿಮ್ಮ ಬಾಯಿಮುಂದೆ ಹಿಡಿದು ಮಾತನಾಡುವುದರ ಉದ್ದೇಶ ಎಂಜಲು ಹಾರದಂತಿರಬೇಕೆಂದು, ''ನುಡಿದರೆ ಮುತ್ತಿನ ಹಾರದಂತಿರಬೇಕು... ಎಂಜಲು ಹಾರದಂತೆಯೂ ಇರಬೇಕಾದ್ದೇ ಸಂಸ್ಕೃತಿ.''

ಒಮ್ಮೆ ನಾಡಿಗೇರ ಕೃಷ್ಣರಾಯರಿಗೆ ಸಂಗೀತ ಕಾರ್ಯಕ್ರಮವೊಂದಕ್ಕೆ ಆಹ್ವಾನ ಪತ್ರಿಕೆ ಬಂದಿತಂತೆ. ಇವರು ಹೋಗುವಷ್ಟರಲ್ಲಿಯೇ ಭರ್ತಿಯಾಗಿ ಸಂಗೀತಗಾರರ ಎದುರಿನ ಒಂದೆರಡು ಕುರ್ಚಿಗಳು ಮಾತ್ರವೇ ಖಾಲಿ ಇದ್ದವು. ಇವರಿಗೋ ಸಂಕೋಚದ ಸ್ವಭಾವ. ಮುಂದಿನ ಸಾಲಿನಲ್ಲಿ ಕೂಡಲು ನಾನೆಷ್ಟರವನು, ಎಂಬ ಕೀಳರಿಮೆ ಗೊಳಗಾಗಿ ಹಿಂದಿನ ಸಾಲಿನಲ್ಲಿ ಕುರ್ಚಿ ಹುಡುಕತೊಡಗಿದಾಗ, ಆಹ್ವಾನ ಪತ್ರಿಕೆ ಕಳುಹಿಸಿದ್ದ ಕಾರ್ಯಕರ್ತನೊಬ್ಬ ''ಬನ್ನಿ ಸಾರ್, ಮುಂದಿನ ಸಾಲಿನಲ್ಲಿ ಎರಡು ಮೂರು ಕುರ್ಚಿ ಖಾಲಿ ಇದೆ'' ಎಂದು ಬಲವಂತದಿಂದ ತೋಳುಹಿಡಿದು ಎಳೆದೊಯ್ದು ಕುಳ್ಳಿರಿಸಿದನಂತೆ. ಹಾಡುಗಾರಿಕೆ ಪ್ರಾರಂಭವಾಯಿತು. ಹಾಡುಗಾರನ ಬಾಯಿಂದ ಬರುತ್ತಿದ್ದುದು ಹಾಡಷ್ಟೇ ಅಲ್ಲ ಉಗುಳು ಸಂಗೀತ ಕೂಡ. ರಪರಪನೆ ನಾಡಿಗೇರರ ಮುಖಕ್ಕೆಲ್ಲ ಸಿಡಿಯತೊಡಗಿತು. ಬಾಗಿಲ ಬಳಿ ನಿಂತಿದ್ದ ಕಾರ್ಯಕರ್ತ ನೆಡೆಗೆ ಮೆಲ್ಲನೆ ನಾಡಿಗೇರರು ಹಿಂದಿರುಗಿ ನೋಡಿದರೆ ಆತ ಮೀಸೆಯಡಿಯಲ್ಲಿ ನಗೆಯಾಡುತ್ತಿದ್ದನಂತೆ. ಅಂದಿನಿಂದ ಸಂಗೀತ ಕಚೇರಿಗೆ ಬಂದರೆ ಜನ್ಮದಲ್ಲೇ ಮುಂದಿನ ಸಾಲಿನಲ್ಲಿ ಕೂಡಬಾರದೆಂದು ಶಪಥ ಮಾಡಿದರಂತೆ.

ಮಾತುಗಾರಿಕೆಯೂ ಒಂದು ಕಲೆ. ಇದನ್ನು ಎಲ್ಲರೂ ಸಾಧಿಸಲಾರರು. ಎಷ್ಟೋ ಜನ ಶಾಲಾ ಕಾಲೇಜು ಉಪಾಧ್ಯಾಯರುಗಳದ್ದು ಪಾಠದ ಕೊಠಡಿಗೆ ಸೀಮಿತವಾಗಿ ರುತ್ತದೆಯೇ ವಿನಾ ಹೊರಗಡೆ ವಿನೋದದಿಂದ ಮಾತನಾಡಲಾರರು. ನನ್ನೊಬ್ಬ ಸಂಬಂಧಿ ಇದ್ದಾನೆ. ಈತ ಸಾಮಾನ್ಯವಾಗಿ ನಮ್ಮ ಸಂಬಂಧದ ಯಾವುದೇ ಸಾಂಸಾರಿಕ ಕಾರ್ಯಕ್ರಮವಾದರೂ ಹಾಜರಿರುತ್ತಾನೆ. ಅವನೆಂಥ ಮಾತುಗಾರನೆಂದರೆ ಕುಳಿತಷ್ಟು




ಹೊತ್ತು ಎಲ್ಲರನ್ನೂ ನಗಿಸುತ್ತಾನೆ. ಅವನ ಮಾತಿನ ವೈಖರಿ ಏನು, ಶರೀರದ ಭಾಷೆ ಏನು! ಮೈಕೈ ಕುಣಿಸುವುದೇನು! ಬರವಣಿಗೆಯಲ್ಲಿ ನಾನೆಷ್ಟೇ ಕೃಷಿ ನಡೆಸಿದ್ದರೂ ಅವನ ಮಾತಿನ ಮೋಡಿಗೆ ಒಳಗಾಗಿ, ಅವನಂತೆ ಮಾತನಾಡಲು ಸಾಧ್ಯವಿಲ್ಲ ಎಂದು ಅಸೂಯೆಪಟ್ಟೆ.

ಎಲ್ಲರೂ ತಮ್ಮ ಮಾತನ್ನು ಕೇಳಿಸಿಕೊಳ್ಳಬೇಕೆಂದು ಆಶಿಸುವುದೇನೋ ಸರಿಯೆ. ಆದರೆ ಕೇಳಿಸಿಕೊಳ್ಳುವಂತೆ ಮಾಡುವುದಿದೆಯಲ್ಲ ಅದೇ ದೊಡ್ಡ ತೊಡಕಿನ ಕೆಲಸ. ಡಾಕ್ಟರ ಶಾಪಿಗೆ ಒಬ್ಬ ಬಂದ. ಸರದಿಯಲ್ಲಿ ಕೂತ. ಇವನ ಸರದಿ ಬಂದಾಗ ಡಾಕ್ಟರು ಒಳಗೆ ಕರೆದರು.

''ಕುಳಿತುಕೊಳ್ಳಿ, ಏನು ತೊಂದರೆ'' ಎಂದರು.

''ನನ್ಮಾತನ್ನು ಯಾರೂ ಕೇಳಿಸ್ಕೊಳ್ಳಾನೇ ಇಲ್ಲಸಾರ್'' ಎಂದ.

ನಖಶಿಖಾಂತ ನೋಡಿದ ಡಾಕ್ಟರು ''ನೆಕ್ಸ್ಟ್'' ಎಂದರು.

ಅವನಿಗೆ ಟ್ರೀಟ್‌ಮೆಂಟ್ ಕೊಡುವ ಡಾಕ್ಟರು ಇವರಲ್ಲವೆಂಬುದು ಆತನಿಗೆ ತಿಳಿಯದು.

ಹೀಗೆ ಮಾತನಾಡುವಾಗ ಯಥಾರ್ಥವರಿತು ಮಾತನಾಡಬೇಕಾಗುತ್ತದೆ. ನಿಮಗೆ ಅಕ್ಬರನ ಕಥೆ ಗೊತ್ತಲ್ಲ. ಒಂದು ದಿನ ರಾತ್ರಿ ಕನಸಿನಲ್ಲಿ ತನ್ನ ಹಲ್ಲುಗಳೆಲ್ಲ ಉದುರಿದಂತೆ ಅಕ್ಬರ್ ಕನಸು ಕಂಡ. ಬೆಳಗ್ಗೆ ಆಸ್ಥಾನ ಜ್ಯೋತಿಷಿಗಳನ್ನೆಲ್ಲಾ ಬರ ಹೇಳಿ ಏನಿದರರ್ಥ ಎಂದ. ಜ್ಯೋತಿಷಿಯೊಬ್ಬ ನೇರ ಮಾತುಗಾರ. ನಿಮ್ಮ ಸಂಬಂಧಿಗಳೆಲ್ಲರೂ ನಿಮ್ಮ ಕಣ್ಣ ಮುಂದೆಯೇ ಸಾಯುತ್ತಾರೆ ಎಂದ. ಇದರಿಂದ ಕುಪಿತನಾದ ಬಾದಷಹ ನಂತರ ಬೀರಬಲನನ್ನು ಕರೆಯಿಸಿ ''ಏನಿದರರ್ಥ ಬೀರಬಲ್'' ಎಂದು ಕೇಳಿದ. ''ಹುಜೂರ್ ನಿಮ್ಮ ಸಂಬಂಧಿಕರಲ್ಲೆಲ್ಲಾ ನೀವೇ ದೀರ್ಘಾಯುಷಿಗಳು'' ಎಂದಾಗ ಬಾದಷಹ ಸಂತಸಗೊಂಡ. ಇಲ್ಲಿ ಜ್ಯೋತಿಷಿಗೆ ದಿಟ ತಿಳಿದಿರ ಬಹುದು. ಆದರೆ ಯಥಾರ್ಥ ಜ್ಞಾನವಿಲ್ಲದೆ ನೇರವಾಗಿ ನುಡಿದು ಬಾದಷಹನ ಕೋಪಕ್ಕೆ ಗುರಿಯಾದ. ಮಾತಬಲ್ಲವ ಕಾಲ, ಪರಿಸ್ಥಿತಿ, ಸಂದರ್ಭ ಇವುಗಳನ್ನು ಗಣನೆಗೆ ತೆಗೆದುಕೊಂಡು ಮಾತನಾಡುತ್ತಾನೆ. ಹಾಗಿಲ್ಲವೆ ''ಮಾತು ಮನೆ ಕೆಡಿಸಿದಂತೆ ಮನವನ್ನೂ ಕೆಡಿಸಿ, ತೂತು ಒಲೆ ಕೆಡಿಸಿದಂತಾಗುತ್ತದಷ್ಟೆ.''


ವೈ. ಎನ್. ಗುಂಡೂರಾವ್

# ವಾಸ್ತವ

ರಾಮು ಇನ್ನೇನು ಹುಬ್ಬಳ್ಳಿಗೆ ಹೊರಡಲು ತಯಾರಾಗಿ ನಿಂತಿದ್ದ. ಅವನ ಅಪ್ಪ ಶಂಕರಪ್ಪ ಅದ್ಯಾರದೋ ಮನೆಯಲ್ಲಿ ಬಡ್ಡಿಸಾಲ ತೆಗೆಸಿಕೊಟ್ಟಿದ್ದ ನೋಟುಗಳನ್ನು ಜ್ವಾಕಿಯಿಂದ ಜೇಬಿನಲ್ಲಿ ಇಟ್ಟುಕೊಂಡು ಬಾಗಿಲಾಚೆ ಬಂದು ನಿಂತಾಗ ಅವನ ಅವ್ವನ ಕಣ್ಣು ತುಂಬಿಬಂದಿದ್ದವು. ಮಗ ದೊಡ್ಡ ಶಹರದಲ್ಲಿ ಸಾಲಿ ಕಲಿಯುತ್ತಿರುವುದು ಯಂಕವ್ವನಿಗೆ ಖುಷಿ ತಂದಿದ್ದರೂ, ಆ ದುಬಾರಿ ಖರ್ಚು ಆತಂಕಕ್ಕೀಡುಮಾಡಿತ್ತು. ಕೂಲಿ ಕೆಲಸದಿಂದ ಮಗನ ಸಾಲಿ, ಮದುವೆ ವಯಸ್ಸಿನ ಹೊಸಲಿನಲ್ಲಿ ಬಂದು ನಿಂತಿರುವ ಮಗಳನ್ನು ಧಾರೆಯೆರೆದುಕೊಡುವುದು ಹ್ಯಾಗೆಂದು ಅವಳಿಗೆ ದಿಗಿಲಾಗಿತ್ತು. ಚಪ್ಪಡಿ ಚುಟ್ಟಾಗೆ ಬೆಂಕಿ ತಗುಲಿಸಿದ ಶಂಕರಪ್ಪ, ತಾನು ಉಗುಳುತ್ತಿದ್ದ ಹೊಗೆ ಸುರುಳಿಯಾಗುತ್ತಿರುವುದನ್ನು ಕಣ್ಣು ಕೀಲಿಸಿ ದಿಟ್ಟಿಸುತ್ತಾ ನಿಡಿದಾದ ನಿಟ್ಟುಸಿರೊಂದನ್ನು ಬಿಟ್ಟ.

ಅವ್ವನ ಕಳಕಳಿ, ಅಪ್ಪನ ಅಸಹಾಯಕತೆಯಿಂದ ರಾಮುನ ತಲೆಯಲ್ಲಿ ನೂರೆಂಟು ವಿಚಾರಗಳು ತರಾವರಿ ನಡೆಸಿದವು. ಮನೆಯಲ್ಲಿ ಹಾಸಿಕೊಂಡು ಮಲಗಿರುವ ಬಡತನ ಅವನಿಗೆ ಅನೇಕ ಕಹಿ ಅನುಭವಗಳ ವರ ನೀಡಿತ್ತು. ಆ ಎಲ್ಲವುಗಳನ್ನು ಧಿಕ್ಕರಿಸಿ ಅಂದವಾದ ಬದುಕು ಕಟ್ಟಿಕೊಳ್ಳುವ ಕನಸು ಕಂಡಿದ್ದ. ಯಾವುದಾದರೊಂದು ನೌಕರಿ ಹಿಡಿದು ಹೆತ್ತವರು ತನ್ನ ಕುರಿತು ಕಂಡಿರುವ ಕನಸುಗಳನ್ನು ಸಾಕಾರಗೊಳಿಸಿ, ಅಕ್ಕನ ಮದುವೆ ಮಾಡಿ ತನ್ನದು ಅಂತ ಒಂದು ಬದುಕು ಕಟ್ಟಿಕೊಳ್ಳಬೇಕು, ತನ್ನಂಥ ಬಡ ಕುಟುಂಬಗಳಲ್ಲಿ ಜನಿಸಿದ ಮಕ್ಕಳ ಶಿಕ್ಷಣಕ್ಕೆ ಸಹಾಯದ ಹಸ್ತ ಚಾಚಬೇಕು ಎಂದು ಆಲೋಚನೆ ಮಾಡುತ್ತಾ ಬಸ್ಸು ಹತ್ತಿದ.

ಮಗನಿಗೆ ಅದ್ಹ್ಯಾಗೊ ದುಡ್ಡು ಹೊಂದಿಸಿಕೊಟ್ಟು ಕಳಿಸಿದ ನಿರಮ್ಮಳತೆಯಲ್ಲಿ ಯಂಕವ್ವ ಮತ್ತು ಶಂಕರಪ್ಪ ಹೊಲದ ಕಡೆ ಮುಖ ಮಾಡಿದರು. ಹೊಲದ ದಾರಿಯ ಗುಂಟ ಸೊರಗಿರುವ ರಾಮುನ ಮುಖ ಅವರಿಗೆ ತೀವ್ರವಾಗಿ ಕಾಡಿತು. ನೆಲದ ಮೇಲೆ ಅವರು ಇಡುತ್ತಿದ್ದ ಪ್ರತಿ ಹೆಜ್ಜೆಯೂ ನೋವಿನ ರುಜು ಹಾಕತೊಡಗಿತ್ತು. ಅವರಿಗೆ ರಾಮು ನೌಕರಿ ಹಿಡಿಯುವ ಭರವಸೆ ಇತ್ತು. ಆ ಭರವಸೆಯ ಬೆಳಕನ್ನು ನಂಬಿಕೊಂಡು ಅದ್ಹ್ಯಾಗೊ ಕಾಲ ನೂಕತೊಡಗಿದ್ದರು.

ಬಸ್ಸಿನ ಕಿಟಕಿಯ ಪಕ್ಕದಲ್ಲಿ ಕುಳಿತಿದ್ದ ರಾಮುಗೆ, ಕಿಟಕಿಯಿಂದ ಬೀಸಿಬರುತ್ತಿದ್ದ ತಂಗಾಳಿ ಹಿತವೆನ್ನಿಸತೊಡಗಿದ್ದರೂ ಮನಸು ಮಾತ್ರ ತಲ್ಲಣಗೊಂಡಿತ್ತು. ಅವ್ವನ ಬಾಡಿದ ಮುಖ, ಅಪ್ಪನ ಕೃಶವಾದ ದೇಹ ಕಣ್ಣು ಬಿಟ್ಟು ಕದಲುತ್ತಿಲ್ಲ. ಮನಸು ದುಗುಡಗೊಂಡಿತ್ತು. ಎದೆ ಭಾರವಾಗತೊಡಗಿತ್ತು. ಕಿಟಕಿಯ ಆಚೆ ಮುಖತೂರಿಸಿ ಬಯಲನ್ನು ನೋಡಿದರೆ ಮಸಕಾಗಿ ಕಾಣಿಸತೊಡಗಿತ್ತು.

ತನ್ನ ಹಳ್ಳಿಯಲ್ಲಿನ ವಾರಿಗೆಯ ಕೆಲ ಗೆಳೆಯರು ಒಕ್ಕಲುತನ, ಜೀತ ಮಾಡಿ ಬದುಕು ನೂಕುತ್ತಿದ್ದಾರೆ. ಇವರಿಗಿಂತ ತನ್ನ ಬದುಕು ಸುಗಮ ಹಾದಿಯಲ್ಲಿ ಸಾಗುತ್ತಿದೆ ಅನಿಸಿತು. ತನ್ನ ಕ್ಲಾಸಿನ ಕೆಲ ಹುಡುಗ-ಹುಡುಗಿಯರು ಬೈಕ್, ಕಾರುಗಳನ್ನು ತಗೊಂಡು ಕಾಲೇಜಿಗೆ ಬರುವುದು ನೆನಪಾಯಿತು. ಬಸ್ ನಿಲ್ದಾಣದಲ್ಲಿ ಕೊಳಲು ನುಡಿಸುತ್ತಾ ಭಿಕ್ಷೆ ಎತ್ತುತ್ತಿರುವ ಬಾಲಕನ ಚಿತ್ರ ಕಣ್ಮುಂದೆ ಸುಳಿದುಹೋಯಿತು. ವ್ಯವಸ್ಥೆ ಅದೆಲ್ಲೊ ಜಾಡು ತಪ್ಪಿದೆ ಅನಿಸಿತು. ಬಸ್ಸು ಮಾತ್ರ ತನಗೆ ಯಾವುದೂ ಸಂಬಂಧವೇ ಇಲ್ಲದಂತೆ ನಿರಾಳವಾಗಿ ಚಲಿಸತೊಡಗಿತ್ತು.

ಬಸ್ಸು ಇಳಿವಾಗ ಅದ್ಯಾಕೊ ಪೊಲೀಸರು ಎಲ್ಲ ಪ್ರಯಾಣಿಕರನ್ನು ಪರಿಶೀಲಿಸತೊಡಗಿದ್ದರು. ರಾಮುನ ಕೈಯಲ್ಲಿದ್ದ ಕೈಚೀಲವನ್ನು ಪರಿಶೀಲಿಸಿದರು. ಅದರಲ್ಲಿ ಕ್ಲಾಸಿನ ಸೆಮಿನಾರಿನಲ್ಲಿನ ತಯಾರಿಗೆಂದು ಇಟ್ಟಿದ್ದ ಕಾರ್ಲ್ ಮಾರ್ಕ್ಸ್ ಕುರಿತ ಪುಸ್ತಕವಿತ್ತು. ಪೊಲೀಸರ ಕಣ್ಣು ಕೆಂಪಾದವು. ಇವನನ್ನು ಪರಿಶೀಲಿಸಲೆಂದು ಸ್ಟೇಷನ್ ಕಡೆ ಪೊಲೀಸರ ಬೂಟುಗಳು ಹೆಜ್ಜೆ ಕಿತ್ತವು.

ಭಾರಿ ಅಪಾಯಕಾರಿ 'ಅಪರಾಧಿ'ಯನ್ನು ಬಹಳ ಸುಲಭವಾಗಿ ಪತ್ತೆಹಚ್ಚಿದ ಹೆಮ್ಮೆಯಿತ್ತು ಪೊಲೀಸರ ಬೂಟುಗಳ ಸಪ್ಪಳಕ್ಕೆ !



ಟಿ. ಎಸ್. ಗೊರವರ
ಅಂಚೆ : ರಾಜೂರ - ೫೮೨ ೨೩೦,
ರೋಣ ತಾಲ್ಲೂಕು, ಗದಗ ಜಿಲ್ಲೆ

ಕೈಮಗ್ಗದ ಉದ್ಯಮವು ದೇಶೀಯವಾದ್ದು, ಮಗ್ಗಗಳನ್ನು ಹಾಕಿರುವ ಜಾಗಗಳು ನೇಕಾರರ ಬಡತನದ ಸೂಚಕಗಳಾಗಿವೆ. ಸಾಂಪ್ರದಾಯಿಕ ಲಕ್ಷಣಗಳನ್ನು ಮೀರಿ ಬೆಳೆದಿರುವುದು ಬಹಳ ಅಪರೂಪ. ಅವೇ ಗುಡಿಸಲುಗಳು, ಸೋರುವ ಛಾವಣಿಗಳು; ಸೋರುವ ನೀರು ಉತ್ಪನ್ನವಾದ ಬಟ್ಟೆಯ ಬಣ್ಣವನ್ನು ಹಾಳುಗೆಡವುತ್ತದೆ ಮತ್ತು ಅಗಾಧ ನಷ್ಟಕ್ಕೆ ಕಾರಣವಾಗುತ್ತದೆ. ಹೀಗೆ ಬಣ್ಣ ಕಳೆದುಕೊಂಡ ಬಟ್ಟೆಯನ್ನು ಮಾರಾಟಗಾರರು ಕೊಳ್ಳುವುದಿಲ್ಲ, ಅವನ್ನು ಸ್ವಂತವಾಗಿ, ಸ್ಥಳೀಯವಾಗಿ, ಮಾರಹೋದಾಗ ಅತ್ಯಲ್ಪ ಮಟ್ಟದ ಬೆಲೆಗಳಿಗೆ ಮಾರಬೇಕಾಗಿಬರುತ್ತದೆ.

# ಕೈಮಗ್ಗದ ನೇಯ್ಗೆ ವಿಭಾಗದಲ್ಲಿ ಅಸಂಘಟಿತ ದುಡಿಮೆಗಾರರು

(ಅರ್ಜುನ ಸೇನ್‌ಗುಪ್ತ ವರದಿ : ಪುಟಗಳು ೬೦-೬೨)



**ಕೈ**ಮಗ್ಗದಿಂದ ಬಟ್ಟೆ ನೇಯುವ ಕಸುಬು ಪುರಾತನವಾದದ್ದು. ನಮ್ಮ ದೇಶದಲ್ಲಿ ಅದನ್ನು ಅವಲಂಬಿಸಿರುವ ಕುಟುಂಬಗಳು ಹೇರಳವಾಗಿವೆ. ೧೯೯೫-೯೬ರ ಜನಗಣತಿಯಂತೆ ಈ ಕ್ಷೇತ್ರದಲ್ಲಿ ದುಡಿಯುವವರ ಸಂಖ್ಯೆ ೨೫ ಲಕ್ಷದಷ್ಟಿದೆ. ಬಟ್ಟೆ ತಯಾರಿಕೆಯ ತಂತ್ರಜ್ಞಾನದಲ್ಲಿ ಅತ್ಯಂತ ಕೆಳಸ್ತರಕ್ಕೆ ಸೇರಿದ್ದು ಇಲ್ಲಿಯ ವಿಧಾನ. ಉದ್ಯಮ ರೂಪದ ಉತ್ಪಾದನೆಯು ಈ ಕ್ಷೇತ್ರದಲ್ಲಿ ತೀರಾ ಕಡಿಮೆಯಾಗಿದೆ. ವಿದ್ಯುತ್ ಚಾಲಿತ ಮಗ್ಗಗಳು ಈಚಿನ ವರ್ಷಗಳಲ್ಲಿ ಹೆಚ್ಚಾಗಿವೆ. ಅದು ಮಧ್ಯಮ ಸ್ತರದ ತಂತ್ರಜ್ಞಾನವೆನಿಸಿ ಕೊಂಡಿದೆ. ಚಿಕ್ಕ ಚಿಕ್ಕ ಕಾರ್ಖಾನೆಗಳಲ್ಲಿ, ಕಾರ್ಯಾಗಾರ ಗಳಲ್ಲಿ ಇದನ್ನು ಸಂಯೋಜಿಸಲಾಗುತ್ತಿದೆ. ಇಲ್ಲಿ ಉತ್ಪಾದನೆಯ ಖರ್ಚು ಕೈಮಗ್ಗದ ಉತ್ಪಾದನೆಗಿಂತಲೂ ಕಡಿಮೆ, ಏಕೆಂದರೆ ಅದು ವಿದ್ಯುತ್ತನ್ನು ಬಳಸುತ್ತದೆ ಮತ್ತು ನೂತನ ತಂತ್ರಜ್ಞಾನವನ್ನು ಅಳವಡಿಸಿಕೊಂಡಿದೆ. ಕೈಮಗ್ಗ ಗಳಲ್ಲಿ ನೇಯ್ಗೆಯ ಪ್ರಮಾಣ ಕಡಿಮೆ. ಅಲ್ಲದೆ, ಮಗ್ಗದ ಸ್ವರೂಪವನ್ನವಲಂಬಿಸಿ ಉತ್ಪಾದಿತ ಬಟ್ಟೆಯ ಗುಣದಲ್ಲಿ ವ್ಯತ್ಯಾಸ ಉಂಟಾಗುತ್ತದೆ. ಇದೆಲ್ಲದರ ಸಾಮಾಜಿಕ-ಆರ್ಥಿಕ ಪರಿಣಾಮವೆಂದರೆ ಈ ಉದ್ಯೋಗವನ್ನು ಆಯ್ದು ಕೊಳ್ಳುವವರು ಸಾಮಾನ್ಯವಾಗಿ ಬಡ ಕುಶಲ ಕರ್ಮಿಗಳು. ಇವರಲ್ಲೂ ವಿವಿಧ ರೀತಿಯ ಉತ್ಪಾದನಾ ಪದ್ಧತಿಗಳಿವೆ; ಆಯಾ ಪದ್ಧತಿಗೆ ತಕ್ಕಂತೆ ವರಮಾನದ ವೈಪರೀತ್ಯಗಳಿರುತ್ತವೆ. ಬಹಳ ದೊಡ್ಡ ಸಂಖ್ಯೆಯ ಜನ ಈ ಉತ್ಪಾದನಾ ಕ್ರಮದಲ್ಲಿ ತೊಡಗಿದ್ದಾರಾದ್ದರಿಂದ ಅವರೆಲ್ಲರ ಜೀವನಮಟ್ಟವು ಇಡೀ ಉದ್ಯಮದಿಂದ ನಿರ್ಧರಿಸಲ್ಪಡುತ್ತದೆ. ತಂತ್ರಜ್ಞಾನವನ್ನು ಬದಲಾಯಿಸಿ ಕೊಳ್ಳುವ ವಿಚಾರದಲ್ಲಿ ಈ ಉದ್ಯಮವು ಹಲವು ಇಬ್ಬಂದಿಗಳನ್ನು ನಿರ್ಮಾಣಮಾಡಿದೆ.

ಬಹಳ ಮಂದಿಗೆ ಉದ್ಯೋಗವೊಂದನ್ನು ಕಲ್ಪಿಸಿ ಕೊಟ್ಟು ಅವರ ಜೀವನಕ್ಕೆ ಆಸರೆ ಒದಗಿಸಿರುವ ಈ ಕ್ಷೇತ್ರವು ದೊಡ್ಡ ಪ್ರಮಾಣದಲ್ಲಿ ಸರ್ಕಾರದ ಬೆಂಬಲದ ಆಧಾರದ ಮೇಲೆ ನಿಂತಿದೆ. ಅನೇಕ ಮಾದರಿಯ ಬಟ್ಟೆಗಳ ಉತ್ಪಾದನೆಯನ್ನು ಈ ಕ್ಷೇತ್ರಕ್ಕೆಂದೇ ಮೀಸಲಿರಿಸ ಲಾಗಿತ್ತು. ಕೈಮಗ್ಗದ ವಿಭಾಗವನ್ನು ಬೆಂಬಲಿಸಿ ಅದನ್ನು ಬೆಳೆಸಲು ಕೇಂದ್ರ ಸರ್ಕಾರವು ಒಬ್ಬ ಅಭಿವೃದ್ಧಿ ಆಯುಕ್ತನನ್ನು ನೇಮಿಸಿದೆ. ಅಂತೆಯೇ ಒಂದು ರಾಷ್ಟ್ರೀಯ ಕೈಮಗ್ಗ ಅಭಿವೃದ್ಧಿ ಕೇಂದ್ರವನ್ನು ಸ್ಥಾಪಿಸಿದೆ. ಕೆಲವು ತೆರಿಗೆ ರಿಯಾಯಿತಿಗಳನ್ನು ಸಹ ಘೋಷಿಸ ಲಾಗಿತ್ತು. ಹಲವು ರಾಜ್ಯ ಸರ್ಕಾರಗಳು ನೇಯ್ಗೆಗಾರರ ಸಹಕಾರಿ ಸಂಘಗಳನ್ನು ಅಸ್ತಿತ್ವಕ್ಕೆ ತರಲು ಪ್ರೋತ್ಸಾಹ ನೀಡಿವೆ. ಜೊತೆಗೆ ಮಾರಾಟವನ್ನು ಬೆಂಬಲಿಸು ವಂತಹ ಅರೆ-ಸರ್ಕಾರಿ ಮಾರಾಟ ಸಂಸ್ಥೆಗಳಿಗೂ ಪೋಷಣೆ ನೀಡಲಾಗಿದೆ. ಈ ಕ್ಷೇತ್ರದ ದುಡಿಮೆಗಾರರಿಗೆ ನೆರವು ನೀಡುವಂತಹ ಕೆಲವು ಕಲ್ಯಾಣಕರ ಕಾರ್ಯಕ್ರಮ ಗಳನ್ನು ರಾಜ್ಯ ಸರ್ಕಾರಗಳು ಹಮ್ಮಿಕೊಂಡಿವೆ.

> ಏಪ್ರಿಲ್ ೨೦೦೮ರ ಸಂಚಿಕೆಯಿಂದ
> ಡಾ॥ ಅರ್ಜುನ್ ಸೇನ್‌ಗುಪ್ತ ವರದಿಯಿಂದ
> ಆಯ್ದಭಾಗಗಳನ್ನು ಪ್ರಕಟಿಸಲು
> ಆರಂಭಿಸಲಾಗಿದ್ದು, ಪ್ರಸ್ತುತ ಮೂರನೆಯ
> ಕಂತನ್ನು ನೀಡಲಾಗುತ್ತಿದೆ.

೧೯೯೦ರ ದಶಕದ ಆರ್ಥಿಕ ಸುಧಾರಣೆಗಳು ಸರ್ಕಾರದ ನೀತಿಗಳನ್ನು ಪಲ್ಲಟಗೊಳಿಸಿದ್ದರಿಂದ ಈ ಕ್ಷೇತ್ರಕ್ಕೆ ಸರ್ಕಾರದ ಬೆಂಬಲವು ಕ್ರಮೇಣ ಕಡಿಮೆ ಯಾಗಿದೆ. ಈ ಕ್ಷೇತ್ರದಲ್ಲಿ ಉತ್ಪಾದನೆಗೆಂದು ಮೀಸಲಾಗಿದ್ದ ಅನೇಕ ಮಾದರಿಗಳನ್ನು ಕಡಿತಗೊಳಿಸಿ, ಕಡೆಗೆ ೧೯೯೬ರಲ್ಲಿ ಜನತಾ ವಸ್ತ್ರ ಯೋಜನೆಯಡಿ ಉತ್ಪಾದನೆಯಾಗಿ ಸರಬರಾಜಾಗುತ್ತಿದ್ದ ಕಡಿಮೆ ವೆಚ್ಚದ ಬಟ್ಟೆಯನ್ನು ಸಂಪೂರ್ಣವಾಗಿ ರದ್ದುಗೊಳಿಸಲಾಯಿತು. ಕೈಮಗ್ಗದ ವಿಭಾಗಕ್ಕೆ ನೀಡಲಾಗಿದ್ದ ತೆರಿಗೆ ರಿಯಾಯಿತಿ ಗಳನ್ನು ಕೂಡ ತೆಗೆದುಹಾಕಲಾಯಿತು. ರಫ್ತಿಗೆ ಆದ್ಯತೆ ನೀಡಲಾಗಿದ್ದರಿಂದ ಹತ್ತಿ ಮತ್ತು ನೂಲು ಅಗ್ಗದ ವಸ್ತುಗಳಾಗಿರಲು ಸಾಧ್ಯವಾಗದೆ ಹೋಯಿತು. ಅದರ ಪರಿಣಾಮವೆಂದರೆ, ಹೆಚ್ಚಿನ ವೆಚ್ಚದ ಬಾಬ್ತುಗಳು ಈ ಕ್ಷೇತ್ರವನ್ನು ಆವರಿಸಿಕೊಂಡಿದ್ದು, ಇದೇ ಸಹೆವದು "ಸಮಾನ ಆಟದ ಮೈದಾನ" ಒದಗಿಸುವ ಘಟಾಟಿಪದಲ್ಲಿ "ಸಮಾನ ಸ್ಪರ್ಧೆಯು" ಈ ಕ್ಷೇತ್ರದ

ದುಡಿಮೆಗಾರರ ವರಮಾನವನ್ನು ತಗ್ಗಿಸಿತು ಮತ್ತು ಅವರ ಕುಟುಂಬಗಳು ಜೀವನಾಧಾರ ಕಳೆದುಕೊಳ್ಳುತ್ತಾ ಬಂದುವು. ಒಟ್ಟಿನಲ್ಲಿ, ಈ ಉದ್ಯಮವು ಕ್ರಮೇಣ ನೆಲಕಚ್ಚುತ್ತಾ ಹೋಯಿತು.

**ಉದ್ಯಮದ ನೆಲೆಗಳು**

ಕೈಮಗ್ಗದ ಉದ್ಯಮವು ದೇಶದ ಎಲ್ಲ ಭಾಗಗಳಲ್ಲೂ ಹರಡಿಕೊಂಡಿದೆ. ಆದರೆ ಅದು ವಿಶೇಷವಾಗಿ ಬೆಳೆದಿರುವುದು ಪೂರ್ವ ಸಮುದ್ರತೀರದಲ್ಲಿ. ದಕ್ಷಿಣದ ತಮಿಳುನಾಡಿನಿಂದ ಈಶಾನ್ಯದ ಅಸ್ಸಾಂವರೆಗೆ ಇದನ್ನು ಕಾಣಬಹುದು. ೧೯೮೫ ಮತ್ತು ೧೯೯೬ರ ನೀತಿ ಬದಲಾವಣೆಗಳು ಕೈಮಗ್ಗದ ದುಡಿಮೆಗಾರರು ಮತ್ತು ಅವರ ಕುಟುಂಬಗಳ ಮೇಲೆ ವಿಷಮ ಪರಿಣಾಮ ಬೀರಿವೆ. ತಮಿಳುನಾಡು ಹಾಗೂ ಆಂಧ್ರಪ್ರದೇಶದಲ್ಲಿ ಹಲವು ಆತ್ಮಹತ್ಯಾ ಪ್ರಕರಣಗಳು ದಾಖಲಾದುವು. ಹಸಿವಿನ ಬಾಧೆಯನ್ನು ತಡೆಗಟ್ಟಲು ಸರ್ಕಾರವು ಕೆಲವು ಕ್ರಮಗಳನ್ನು ಕೈಗೊಳ್ಳಬೇಕಾಯಿತು. ತುರ್ತಾಗಿ ಆಹಾರದ ನೆರವು ನೀಡುವುದು, ನಿರುದ್ಯೋಗವನ್ನು ನಿವಾರಿಸುವುದು ಮತ್ತು ತಳಮಳವನ್ನು ತಡೆಗಟ್ಟುವುದು ಇತ್ಯಾದಿ. ಜನತಾ ವಸ್ತ್ರ ಯೋಜನೆಯನ್ನು ಕೈಬಿಟ್ಟದ್ದರಿಂದ ಪ್ರಾಥಮಿಕ ಸಹಕಾರಿ ಉತ್ಪಾದನಾ ಕೇಂದ್ರಗಳಿಗೆ ಭಾರಿ ಪೆಟ್ಟಾಯಿತು. ಏಕೆಂದರೆ, ಉತ್ಪಾದಿತ ಬಟ್ಟೆಯನ್ನು ಕೇಂದ್ರ ಸಹಕಾರಿ ಸಂಸ್ಥೆಗಳಿಗೆ ಸರಬರಾಜು ಮಾಡುತ್ತಿದ್ದುವು ಅವು. ಉದಾಹರಣೆಗೆ, ಆಂಧ್ರಪ್ರದೇಶದ ಡುಬಕ್ಕ ಎಂಬ ಕೇಂದ್ರವನ್ನು ಹೆಸರಿಸಬಹುದು. ಒಂದು ಕಾಲಕ್ಕೆ ಅದು ಖ್ಯಾತ ಮತ್ತು ಶ್ರೀಮಂತವಾದ ಕೈಮಗ್ಗದ ಉತ್ಪಾದನಾ ಕೇಂದ್ರವಾಗಿತ್ತು. ಸುಮಾರು ೧೫೦೦೦ರಷ್ಟಿದ್ದ ಮಗ್ಗಗಳು ಏಪ್ರಿಲ್ ೨೦೦೧ರ ವೇಳೆಗೆ ೨೦೦ಕ್ಕೆ ಕುಸಿದುವು. ಅಸಂಘಟಿತರಾಗಿದ್ದ ಇಲ್ಲಿಯ ಮಗ್ಗಗಳ ನೇಕಾರರು ದಿಕ್ಕೆಟ್ಟು ಆತ್ಮಹತ್ಯೆಗೆ ಶರಣಾದರು. ಅದೇ ತಮಿಳುನಾಡಿನ ಹಲವು ಭಾಗಗಳ ನೇಕಾರರು ಸ್ವಲ್ಪ ಸಂಘಟಿತರಾಗಿದ್ದುದರಿಂದ ಸಾರ್ವಜನಿಕ ಪ್ರತಿಭಟನೆಗಳ ಹಾದಿ ಹಿಡಿದರು, ರಾಜ್ಯದ ರಾಜಧಾನಿಗೆ ಉಪವಾಸದ ಮೆರವಣಿಗೆಗಳನ್ನು ಆಯೋಜಿಸಿಕೊಂಡರು.

ಕೈಮಗ್ಗದ ಉದ್ಯಮವು ನೆಲೆ ಕಳೆದುಕೊಳ್ಳುತ್ತಲೇ ಬಂದಿದೆ; ವಿದ್ಯುಚ್ಚಾಲಿತ ಮಗ್ಗಗಳು ಬಂದ ಮೇಲೆ ಈ ಪ್ರಕ್ರಿಯೆಯು ಇನ್ನೂ ತೀವ್ರಗೊಂಡಿದೆ. ಕೈಮಗ್ಗಗಳ ದುಡಿಮೆಗಾರರ ಪ್ರಮುಖ ಅಳಲೇನೆಂದರೆ ಇವರಿಗೆ ವಿದ್ಯುಚ್ಚಾಲಿತ ಮಗ್ಗಗಳಲ್ಲಿ ಉದ್ಯೋಗ ದೊರೆಯುವುದಿಲ್ಲ; ಏಕೆಂದರೆ, ಪರಂಪರಾಗತವಾದ ಕೌಶಲ್ಯಕ್ಕೆ ಅಲ್ಲಿ ಬೆಲೆಯಿಲ್ಲ. ಉತ್ಪಾದನೆಯ ಮಟ್ಟ ಮತ್ತು ವರಮಾನವನ್ನು ಹೆಚ್ಚಿಸಲು ನೂತನ ತಂತ್ರಜ್ಞಾನದ ಅಳವಡಿಕೆಯ ಅಗತ್ಯವಿರುತ್ತದೆ, ನಿಜ; ಆದರೆ ಆದರಿಂದ ಯಾರು ನಷ್ಟಕ್ಕೊಳಗಾಗುತ್ತಾರೋ ಅವರಿಗೆ ಈ ತಂತ್ರಜ್ಞಾನದಿಂದ ಯಾವ ಲಾಭವೂ ದಕ್ಕುವುದಿಲ್ಲ! ಇದೊಂದು ದೊಡ್ಡ ದ್ವಂದ್ವ. ಆದ್ದರಿಂದ ಜೀವನಾಧಾರ ಕಳೆದುಕೊಂಡವರ ಅನುಕೂಲಕ್ಕಾಗಿ ಯಾವುದಾದರೂ ಹೊಸ ಉಪಕ್ರಮಗಳನ್ನು ಜಾರಿಗೆ ತರುವ ಅವಶ್ಯಕತೆ ಇದೆ.

**ಅಂಕಿ-ಸಂಖ್ಯೆಗಳು**

ಕೈಮಗ್ಗವನ್ನು ಆಶ್ರಯಿಸಿರುವ ದುಡಿಮೆಗಾರರು ಮತ್ತು ಅವರ ಕುಟುಂಬಗಳ ಪರಿಮಾಣದ ಬಗ್ಗೆ ಸ್ಪಷ್ಟ ಮಾಹಿತಿ ದೊರೆಯುವುದಿಲ್ಲ. ಈಚಿನ ದಿನಗಳಲ್ಲಿ ಈ ಕೊರತೆ ಇನ್ನೂ ಹೆಚ್ಚಿದೆ. ೧೯೮೭-೮೮ ಮತ್ತು ೧೯೯೫-೯೬, ಈ ಎರಡು ವರ್ಷಗಳಲ್ಲಿ ಕೇಂದ್ರ ಸರ್ಕಾರವು ಕೈಮಗ್ಗದ ಉದ್ಯಮದ ಬಗ್ಗೆ ಗಣತಿ ನಡೆಸಿದೆ. ೧೯೯೫-೯೬ರ ಗಣತಿಯಂತೆ ದೇಶದಲ್ಲಿ ೩೪ಲಕ್ಷ ೭೦ ಸಾವಿರ ದುಡಿಮೆಗಾರರು ಕೈಮಗ್ಗದ ನೇಯ್ಗೆಯವರಿದ್ದರು. ಈ ಸಂಖ್ಯೆಯು ೨೫ ಲಕ್ಷ ೨೦ ಸಾವಿರ ಕುಟುಂಬಗಳನ್ನು ಪ್ರತಿನಿಧಿಸುತ್ತದೆ. ೧೯೮೭-೮೮ರಲ್ಲಿ ಇದು ೪೩ಲಕ್ಷ ೭೦ ಸಾವಿರ ದುಡಿಮೆಗಾರರ ೩೦ ಲಕ್ಷ ೬೦ ಸಾವಿರ ಕುಟುಂಬಗಳಷ್ಟಿತ್ತು. ಏಳು ವರ್ಷಗಳಲ್ಲಿ ಸುಮಾರು ೧೦ ಲಕ್ಷ ದುಡಿಮೆಗಾರರು ನಿರ್ವಸಿತರಾದರೆಂದು ಇದರರ್ಥ. ೧೯೯೫-೯೬ರ ೩೪ ಲಕ್ಷ ೭೦ ಸಾವಿರ ಕೈಮಗ್ಗದ ದುಡಿಮೆಗಾರರಲ್ಲಿ ೧೬ ಲಕ್ಷ ೫೦ ಸಾವಿರ ಮಂದಿ ಮಾತ್ರ ಪೂರ್ಣಾವಧಿ ನೇಯ್ಗೆಯವರಾಗಿದ್ದರು. ಅವರಲ್ಲಿ ೯ ಲಕ್ಷ ೯೦ ಸಾವಿರ ಮಂದಿ ಸ್ವತಂತ್ರವಾಗಿ ಕೆಲಸ ಮಾಡುತ್ತಿದ್ದವರು, ೨ ಲಕ್ಷ ೪೦ ಸಾವಿರ ಮಂದಿ ಸಹಕಾರಿ ಸಂಸ್ಥೆಗಳಲ್ಲಿ ದುಡಿಯುತ್ತಿದ್ದರು. ಮತ್ತು ೨ ಲಕ್ಷ ೯೦ ಸಾವಿರ ಮಂದಿ ಉತ್ತಮ ಶ್ರೇಣಿಯ ನೇಯ್ಗೆಯವರಲ್ಲಿ ಕೆಲಸಕ್ಕಿದ್ದರು. ಇವರೆಲ್ಲರೂ ಅಲ್ಲದೆ ಬೇರೆ ೧೭ ಲಕ್ಷ ೩೦ ಸಾವಿರ ಮಂದಿ ಈ ಉದ್ಯಮದ ಪೂರ್ವಾಪೇಕ್ಷಿತಗಳನ್ನು ತುಂಬುವುದರಲ್ಲಿ ಕೆಲಸ ಮಾಡುತ್ತಿದ್ದರು. ಅವರ ಪೈಕಿ ೫ ಲಕ್ಷ ೪೦ ಸಾವಿರ ಮಂದಿ ಪೂರ್ಣಾವಧಿ ಕೆಲಸಗಾರರಾಗಿದ್ದರು.

೧೯೮೭-೮೮ ಮತ್ತು ೧೯೯೫-೯೬ರ ಗಣತಿಗಳನ್ನು ಹೋಲಿಸಿದಾಗ ಇನ್ನೊಂದು ಆತಂಕದ ಅಂಶವು ಕಂಡುಬರುತ್ತದೆ. ಅದೇನೆಂದರೆ, ಮಗ್ಗ ಮತ್ತು ಕೆಲಸಗಾರರ ಉತ್ಪಾದನಾ ಶಕ್ತಿಯು ಕ್ರಮೇಣ ಕಡಿಮೆಯಾಗುತ್ತಾ ಬಂದಿದೆ. ಒಟ್ಟು ಮಗ್ಗ ಮತ್ತು ದುಡಿಯುವವರ ಸಂಖ್ಯೆಯು ಕಡಿಮೆಯಾಗಿ, ಅವರ ಉತ್ಪಾದನಾ ಮಟ್ಟವೂ ಕುಸಿದಿದ್ದರಿಂದ ಕೈಮಗ್ಗದ ಕ್ಷೇತ್ರದ ಒಟ್ಟು ಬಟ್ಟೆಯ ಉತ್ಪಾದನೆ ಸಹಜವಾಗಿಯೇ ಕಡಿಮೆಯಾಗಿದೆ. ಮೊದಲಿಗೆ ಒಬ್ಬ ಕೆಲಸಗಾರ ದಿನಂಪ್ರತಿ ೧.೪೮ ಮೀಟರ್ ಬಟ್ಟೆ ಉತ್ಪಾದಿಸುತ್ತಿದ್ದುದು ಆಮೇಲೆ ಅದು ೧.೩೩ ಮೀಟರಿಗೆ ಇಳಿಯಿತು; ಒಂದು ಮಗ್ಗವು ೨.೬೩ ಮೀಟರು ಬಟ್ಟೆಯನ್ನು ಉತ್ಪಾದಿಸುತ್ತಿದ್ದುದು ೨.೪೯ ಮೀಟರಿಗೆ ಇಳಿಯಿತು. ಇದರ ಪರಿಣಾಮವು ನೇರವಾಗಿ ದಿನನಿತ್ಯದ ವರಮಾನದ ಮೇಲೆ ಉಂಟಾಗುತ್ತದೆ. ನೇಯ್ಗೆಯವರ ಕುಟುಂಬಗಳ ದುಸ್ತರ ಸ್ಥಿತಿಯಲ್ಲಿ ಇದು ಕೊನೆಗೊಳ್ಳುತ್ತದೆ.

**ಈಗಿನ ಪರಿಸ್ಥಿತಿ**

ಈ ಉದ್ಯಮದಲ್ಲಿ ಸದ್ಯದ ಪರಿಸ್ಥಿತಿಯನ್ನು ಸರಿಯಾಗಿ ತಿಳಿದುಕೊಳ್ಳಲು (ಅರ್ಜುನ್ ಸೇನ್‌ಗುಪ್ತ) ಆಯೋಗವು ಉತ್ತರ ಪ್ರದೇಶ ಮತ್ತು ಬಿಹಾರಗಳಲ್ಲಿ ಕೆಲವು ಅಧ್ಯಯನಗಳನ್ನು ನಡೆಸಿತು. ಉತ್ತರ ಪ್ರದೇಶದಲ್ಲಿ ಮಗ್ಗಗಳ ಮೇಲೆ ತೊಡಗಿಸಲಾಗಿದ್ದ ಬಂಡವಾಳವು ತಲಾ ೪೨ ಸಾವಿರದಿಂದ ಸುಮಾರು ಒಂದು ಲಕ್ಷದವರೆಗಿದ್ದಿತು. ಈ ಹಣವು ಅಧ್ಯಯನಕ್ಕೆ ಮುಂಚಿನ ಐದು ವರ್ಷಗಳಲ್ಲಿ ತೊಡಗಿಸಿದ್ದಂಥದು. ತಲಾ ವಾರ್ಷಿಕ ಸರಾಸರಿ ಹೂಡಿಕೆಯು ಕಡಿಮೆ ಪ್ರಮಾಣದ್ದು; ಮಗ್ಗದ ದೈನಂದಿನ ದುರಸ್ತಿಯದೇ ಹೆಚ್ಚು ವೆಚ್ಚ. ನೇಯ್ಗೆಗಾರರ ವಾರ್ಷಿಕ ಸರಾಸರಿ ಆದಾಯವು ೨೬ರಿಂದ ೩೫ ಸಾವಿರದವರೆಗಿದ್ದಿತು. ಬಿಹಾರದಲ್ಲಿ ಪರಿಸ್ಥಿತಿಯು ಇದಕ್ಕಿಂತಲೂ ಸ್ವಲ್ಪ ಜಾಸ್ತಿ ವಿಷಮವಾಗಿತ್ತು. ೨೦೦೬ರಲ್ಲಿ ಉತ್ತರ ಪ್ರದೇಶದ ಮಗ್ಗಗಳಲ್ಲಿ ಬಂಡವಾಳದ ಹೂಡಿಕೆ ಮತ್ತು ವರಮಾನದ ಪ್ರಮಾಣದ ಕೋಷ್ಟಕ ಹೀಗಿದೆ :

| | ಆಝುಂಗಢ ಜಿಲ್ಲೆ | ಬಿಜನೂರು ಜಿಲ್ಲೆ | ವಾರಣಾಸಿ ಜಿಲ್ಲೆ |
|---|---|---|---|
| ಮಗ್ಗಗಳಲ್ಲಿ ಹೂಡಲಾದ ಸ್ಥಿರ ಬಂಡವಾಳ | ೧೦೬೮೨೦ | ೪೩೫೩೩ | ೪೨೮೩೩ |
| ಮಗ್ಗದ ಮೇಲೆ ವಾರ್ಷಿಕ ವೆಚ್ಚ | ೧೮೬೫ | ೧೨೩೯ | ೨೫೮೦ |
| ನೇಕಾರರ ಸರಾಸರಿ ವರಮಾನ | ೩೪೭೫೪ | ೨೬೫೩೨ | ೩೪೦೩೦ |

ಆಂಧ್ರಪ್ರದೇಶದಲ್ಲಿ ವಹಿವಾಟು ಬೇರೆಯೇ ಸ್ವರೂಪದ್ದು. ಅಲ್ಲಿ ಹೆಚ್ಚಾಗಿ ಸಹಕಾರಿ ಸಂಸ್ಥೆಗಳ ವ್ಯವಸ್ಥೆ ಇದೆ. ಇಲ್ಲವೇ ಉತ್ತಮ ಶ್ರೇಣಿಯ ನೇಯ್ಗೆಯವರ ಆಶ್ರಯದಲ್ಲಿ ಕೆಲಸ ಮಾಡುವುದಿದೆ. ಸ್ವತಂತ್ರ ಸ್ವಯಂ-ಉದ್ಯೋಗ ಇರುವವರೂ ಇದ್ದಾರೆ. ಮಧ್ಯಸ್ಥರ ಅಧೀನದಲ್ಲಿ ಕೆಲಸ ಮಾಡಿಕೊಡುವವರೂ ಇದ್ದಾರೆ. ಈ ಎಲ್ಲ ನಮೂನೆ



ಗಳಲ್ಲೂ ಮನೆಯಲ್ಲಿ ದುಡಿದು ಉತ್ಪಾದನೆ ಮಾಡುವುದು ಇಲ್ಲವೇ ಕಾರ್ಖಾನೆಗಳಲ್ಲಿ ದುಡಿಯುವುದು, ಎರಡು ಪ್ರಕಾರಗಳೂ ಇವೆ. ಸ್ವತಂತ್ರ ನೇಕಾರರ ಮಾಸಿಕ ವರಮಾನವು ೭೦೦೦ ರೂಪಾಯಿಗಳಷ್ಟಿತ್ತು ಮತ್ತು ಬೇರೆ ಬೇರೆ ರೀತಿಗಳಲ್ಲಿ ಇತರರಲ್ಲಿ ದುಡಿಯುತ್ತಿದ್ದ ನೇಕಾರರ ವರಮಾನ ೧೨೦೦ ರಷ್ಟಿತ್ತು. ಇವರಲ್ಲಿ ಶೇ.೬೩ ರಷ್ಟು ಮಂದಿ ಬಡತನದ ರೇಖೆಗಿಂತ ಕೆಳಗಿನವರು. ಬೇರೆ ವಿಧಾನಗಳಲ್ಲಿ ನೇಕಾರರಾಗಿ ದುಡಿಯುತ್ತಿದ್ದವರ ಪೈಕಿ ಸಹ ಬಹುತೇಕ ಬಡತನದ ರೇಖೆಗಿಂತ ಕೆಳಗಿನವರೇ ಹೆಚ್ಚು; ಅದಕ್ಕೆ ಅಪವಾದವೆಂದರೆ ಸ್ವತಂತ್ರ ನೇಕಾರರು ಮಾತ್ರವೇ.



**ಮಗ್ಗ ಮತ್ತು ಉದ್ಯೋಗಕ್ಕೆ ಬೇಡಿಕೆ**

ಕೈಮಗ್ಗದ ಉತ್ಪನ್ನಗಳಿಗೆ ಬೇಡಿಕೆ ಹೇಗಿದೆಯೆಂದು ತಿಳಿಯಲು ಉತ್ತರ ಪ್ರದೇಶದಲ್ಲಿ ಆಯ್ದ ಕೆಲವು ನೇಕಾರ ಕುಟುಂಬಗಳನ್ನು ಸಂದರ್ಶಿಸಲಾಯಿತು. ಅದರಿಂದ ತಿಳಿದು ಬಂದಿರುವುದೇನೆಂದರೆ ಸುಮಾರು ಶೇ. ೪೦ರಷ್ಟು ಮಗ್ಗಗಳನ್ನು ಮುಚ್ಚಲಾಗಿದೆ. ಅದರಿಂದಾಗಿ ಉದ್ಯೋಗಾವಕಾಶಗಳೂ ಕುಸಿದಿವೆ. ಮಕ್ಕಳೂ ಸೇರಿದಂತೆ ಕುಟುಂಬದ ಎಲ್ಲ ಸದಸ್ಯರೂ ನೇಯ್ಗೆ ಕೆಲಸದಲ್ಲಿ ತೊಡಗಿರುತ್ತಿದ್ದರು ಮತ್ತು ಬೇರೆ ಕೆಲಸಗಾರರನ್ನೂ ನೇಮಿಸಿಕೊಂಡಿರುತ್ತಿದ್ದರು. ಆದರೆ ಕಳೆದ ಐದು ವರ್ಷಗಳಲ್ಲಿ ಕೆಲಸ ಮಾಡುವ ಕುಟುಂಬದ ಸದಸ್ಯರ ಸಂಖ್ಯೆಯು ೨೨೦ರಿಂದ ೨೦೭ಕ್ಕೆ ಇಳಿಯಿತು ಮತ್ತು ನೇಮಕಗೊಂಡಿದ್ದ ಕೆಲಸಗಾರರ ಸಂಖ್ಯೆಯು ೪೫೭ರಿಂದ ೨೧೧ಕ್ಕೆ ಇಳಿಯಿತು.ಇದಕ್ಕೆ ಕಾರಣ ಉತ್ಪನ್ನಗಳಿಗೆ ಬೇಡಿಕೆಯ ಕೊರತೆ. ಹಾಗಾದಾಗ ಮೊದಲು ಕೆಲಸ ಕಳೆದುಕೊಳ್ಳುವವರು ನೇಮಕಗೊಂಡ ಕೆಲಸಗಾರರು, ಏಕೆಂದರೆ ಇದ್ದಬದ್ದ ಕೆಲಸಗಳನ್ನೆಲ್ಲಾ ಕುಟುಂಬಗಳ ಸದಸ್ಯರೇ ಬಹುಮಟ್ಟಿಗೆ ಹಂಚಿಕೊಂಡುಬಿಡುತ್ತಾರೆ.

**ಕಚ್ಚಾ ವಸ್ತುಗಳ ಹಾಗೂ ಮಾರಾಟದ ಸಮಸ್ಯೆ**

ಕಚ್ಚಾ ವಸ್ತುಗಳು ಮತ್ತು ಮಾರಾಟ ಪರಸ್ಪರ ಅವಲಂಬಿತವಾಗಿವೆ. ಕಳೆದ ಒಂದು ದಶಕದಲ್ಲಿ ನೇಕಾರರು ವ್ಯಾಪಾರಿಗಳಿಂದ ಮತ್ತು ಸಹಕಾರಿ ಸಂಘಗಳಿಂದ ತಮಗೆ ಅಗತ್ಯವಾದ ಕಚ್ಚಾವಸ್ತುಗಳನ್ನು ಪಡೆಯಬೇಕಾಗಿಬಂದಿದೆ ಮತ್ತು ಉತ್ಪನ್ನಗಳನ್ನು ಅವರ ಮುಖಾಂತರವೇ ಮಾರಾಟ ಮಾಡಬೇಕಾಗಿದೆ. ವ್ಯಾಪಾರಿಗಳು ಶ್ರೀಮಂತರು, ಪ್ರಭಾವಶಾಲಿಗಳು. ಇಡೀ ದೇಶದಲ್ಲಿ ಅವರಿಗೆ ಗಿರಾಕಿಗಳಿದ್ದಾರೆ. ಕೆಲವೊಮ್ಮೆ ಸಹಕಾರಿ ಸಂಸ್ಥೆಗಳು ಸಹ ಇಂತಹ ವ್ಯಾಪಾರಿಗಳಿಂದ ಸರಕುಗಳನ್ನು ಪಡೆದು ತಮ್ಮ ಅಂಗಸಂಸ್ಥೆಗಳಿಗೆ ರವಾನಿಸಬೇಕಾಗುತ್ತದೆ ಮತ್ತು ರಫ್ತಿನ ಮಾರುಕಟ್ಟೆಯನ್ನು ಪ್ರವೇಶಿಸಬೇಕಾಗುತ್ತದೆ. ನೇಕಾರರು ಸ್ವತಂತ್ರವಾಗಿ ದುಡಿಯುತ್ತಿರಲಿ ಇಲ್ಲವೇ ಬೇರೆಯವರಲ್ಲಿ ದುಡಿಯುತ್ತಿರಲಿ, ಮಾರಾಟದ ಸರಪಳಿಯಲ್ಲಿ ಸಿಲುಕಿಕೊಳ್ಳುವುದು ಅನಿವಾರ್ಯವೆನಿಸಿಬಿಟ್ಟಿದೆ. ಸ್ಥಳೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡುವುದು ಲಾಭದಾಯಕವಲ್ಲ; ಏಕೆಂದರೆ, ಅಲ್ಲಿ ಬೆಲೆಗಳು ಬಹಳ ಕಡಿಮೆ. ಕಚ್ಚಾ ಸಾಮಗ್ರಿಗಳ ಲಭ್ಯತೆ ಮತ್ತು ಮಾರಾಟದ ವ್ಯವಸ್ಥೆ, ಎರಡೂ ಪ್ರತಿಕೂಲವೇ ಆಗಿರುವುದರಿಂದ ವ್ಯಾಪಾರ ಕುದುರಿಸಿಕೊಳ್ಳುವುದು ಅಶಕ್ಯ; ಎಲ್ಲದಕ್ಕೂ ವ್ಯಾಪಾರಗಾರರನ್ನು ಆಶ್ರಯಿಸಬೇಕು.

ಸ್ಥಳೀಯ ನೇಕಾರರಿಗೆ ಇನ್ನೊಂದು ಮುಗ್ಗಟ್ಟಿದೆ : ತಮ್ಮ ಉತ್ಪನ್ನಗಳಿಗೆ ಹಣದ ಪಾವತಿಯು ಸಕಾಲಕ್ಕೆ ಆಗುವುದಿಲ್ಲ. ಎಂದೋ ಹಣವನ್ನು ಪಡೆಯುವುದೆಂದರೆ ವರಮಾನದಲ್ಲಿ ಕೊರತೆಯುಂಟಾಗುವುದೆಂದೇ ಅರ್ಥ. ಉತ್ತರ ಪ್ರದೇಶದಲ್ಲಿ ಸಂದರ್ಶನ ನೀಡಿದವರ ಪೈಕಿ ಮೂರನೆಯ ಎರಡರಷ್ಟು ಮಂದಿ ತಾವು ಸಾಲಗಳನ್ನು ಪಡೆದಿರುವುದಾಗಿ ತಿಳಿಸಿದ್ದಾರೆ; ಅದು ಸಹಕಾರ ಸಂಸ್ಥೆಗಳಿಂದ, ನೆಂಟರಿಂದ ಮತ್ತು ಸ್ನೇಹಿತರಿಂದ. ಬ್ಯಾಂಕುಗಳಿಂದ ಸಾಲ ಪಡೆದವರ ಸಂಖ್ಯೆ ತೀರಾ ನಗಣ್ಯ. ಸಾಲದ ಮೊತ್ತವು ಸರಾಸರಿ ೨೩,೦೦೦ ರೂಪಾಯಿಗಳು.

**ತಂತ್ರಜ್ಞಾನ**

ನೇಕಾರರಲ್ಲಿ ಹೆಚ್ಚಿನ ಸಂಖ್ಯೆಯವರು ಸಾಂಪ್ರದಾಯಿಕವಾದ ಗುಂಡಿ-ಮಗ್ಗಗಳನ್ನು ಬಳಸುತ್ತಿದ್ದರೇ ವಿನಾ ಕಟ್ಟು-ಮಗ್ಗಗಳನ್ನಲ್ಲ. ಅವರಲ್ಲಿ ಬಹುಸಂಖ್ಯಾತರು ಹೊಸ ಅಲಂಕಾರ ಸಂಯೋಜನೆಗಳನ್ನು ಅಳವಡಿಸಿಕೊಂಡಿದ್ದವರು. ಬಣ್ಣದ ಮಿಶ್ರಣಗಳಲ್ಲೂ ನೂತನ ಛಾಯೆ ಇದ್ದಿತು. ಇವನ್ನೆಲ್ಲಾ ಬಳಸದಿದ್ದವರು ಇನ್ನೂ ಗಣನೀಯ ಸಂಖ್ಯೆ ಯಲ್ಲಿದ್ದರು. ಅದಕ್ಕೆ ಕಾರಣ, ಬದಲಾವಣೆಗೆ ತಗಲುವ ಹೆಚ್ಚಿನ ಖರ್ಚು ಸುಮಾರು ಶೇ. ೧೦ರಷ್ಟು ಎಂಬುದು. ಅಷ್ಟು ಹಣ ಹೂಡಿ ಬದಲಾವಣೆ ತಂದರೆ ಅದಕ್ಕೆ ತಕ್ಕುದಾದ ಆದಾಯ ಬರುತ್ತಿರಲಿಲ್ಲ. ಇನ್ನೊಂದು ಭಿನ್ನತೆಯು ಉತ್ಪನ್ನಗಳ ಸ್ವರೂಪದಲ್ಲಿತ್ತು: ಸೀರೆಗಳಿಗೆ ಬದಲು ಈಗ ಸಲ್ವಾರ್ ಬಟ್ಟೆಯ ಉತ್ಪಾದನೆಗೆ ಆದ್ಯತೆ. ರೇಷ್ಮೆ ಮತ್ತು ಹತ್ತಿ ನೂಲಿನ ಬದಲು ಸಿಂಥೆಟಿಕ್ ನೂಲಿನ ಬಳಕೆಯೂ ಹೆಚ್ಚಿದೆ.

ಕೈಮಗ್ಗದ ಉದ್ಯಮವು ದೇಶೀಯವಾದ್ದು. ಮಗ್ಗಗಳನ್ನು ಹಾಕಿರುವ ಜಾಗಗಳು ನೇಕಾರರ ಬಡತನದ ಸೂಚಕಗಳಾಗಿವೆ. ಸಾಂಪ್ರದಾಯಿಕ ಲಕ್ಷಣಗಳನ್ನು ಮೀರಿ ಬೆಳೆದಿರುವುದು ಬಹಳ ಅಪರೂಪ. ಅವೇ ಗುಡಿಸಲುಗಳು, ಸೋರುವ ಛಾವಣಿಗಳು. ಸೋರುವ ನೀರು ಉತ್ಪನ್ನವಾದ ಬಟ್ಟೆಯ ಬಣ್ಣವನ್ನು ಹಾಳುಗೆಡವುತ್ತದೆ ಮತ್ತು ಅಗಾಧ ನಷ್ಟಕ್ಕೆ ಕಾರಣವಾಗುತ್ತದೆ. ಹೀಗೆ ಬಣ್ಣ ಕಳೆದುಕೊಂಡ ಬಟ್ಟೆಯನ್ನು ಮಾರಾಟಗಾರರು ಕೊಳ್ಳುವುದಿಲ್ಲ. ಅವನ್ನು ಸ್ವಂತವಾಗಿ, ಸ್ಥಳೀಯವಾಗಿ. ಮಾರಹೋದಾಗ ಅತ್ಯಲ್ಪ ಮೊತ್ತದ ಬೆಲೆಗಳಿಗೆ ಮಾರಬೇಕಾಗಿಬರುತ್ತದೆ. ❑

## ಅರ್ಥ ಪದ್ಯ

ಹಾದಿ ಬೀದಿಯ ತುಂಬ
ಚಿತ್ರ ವಿಚಿತ್ರ ಹೂವುಗಳು
ಕೊಚ್ಚೆ ರಚ್ಚೆ ಕನಸು ನನಸು
ಇಲ್ಲಿ ಪ್ರತಿ ಪದ್ಯಕೂ ಒಂದು ಕೊರತೆ
ಬೀಸಾಕಿ ಒಗೆದ
ಮನುಷ್ಯ ಬದುಕು ಮೂರಾಬಟ್ಟೆ
ಹಚ್ಚಿಟ್ಟ ದೀಪ ಬೆಳಗಲೆಂಬ ಹಾರೈಕೆ
ನೋವೆ ನೆಮ್ಮದಿ
ಕಿಚ್ಚಿಟ್ಟ ಬೆಂಕಿಯಲಿ
ಬೆಂದ ಬದುಕಿಗೆ
ಮಿಡಿವ ಮನದ
ಮೂರೆಳೆಯ ತಂತಿ
ಬದುಕು ಯಾರೋ ಬರೆದ ಪದ್ಯ
ನಾನು ಇನ್ನಾರದೋ ಸಾಲು....

**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ನಾಲ್ವಡಿ ಕೃಷ್ಣರಾಜ ಒಡೆಯರ್ ಕಲಾಮಂದಿರ, ಮಂಡ್ಯ - ೫೭೧ ೪೦೧



# ಬದಲಾವಣೆಯ ಹಾದಿಯಲ್ಲಿ ನೇಪಾಳ

**ನೇ**ಪಾಳ ರಾಜ್ಯದ ಸಂವಿಧಾನ ರಚನಾ ಪರಿಷತ್ತಿಗೆ ಜರುಗಿದ ಚುನಾವಣೆಗಳಲ್ಲಿ ಮಾವೋವಾದಿ ಕಮ್ಯುನಿಸ್ಟರ ಪ್ರಚಂಡ ವಿಜಯ ಪ್ರಪಂಚದ ಬಂಡವಾಳಶಾಹಿ ಆಳುವ ವರ್ಗಗಳನ್ನು ದಿಗ್ಭ್ರಮೆಗೊಳಿಸಿದೆ, ಆತಂಕಕ್ಕೀಡುಮಾಡಿದೆ. ಅವರ ಮಟ್ಟಿಗೆ ಇದೊಂದು ಅನಿರೀಕ್ಷಿತ ಬೆಳವಣಿಗೆ. ಇದು ಹೊಸದೇನಲ್ಲ. ಕಳೆದ ಶತಮಾನದ ಎರಡನೇ ದಶಕದಲ್ಲಿ ರಷ್ಯಾದಲ್ಲಿ ಕ್ರಾಂತಿಯಾಗಿ ಕಮ್ಯುನಿಸ್ಟರು ಅಧಿಕಾರಕ್ಕೆ ಬಂದಾಗಿನಿಂದಲೂ ವ್ಯಕ್ತಗೊಂಡಿರುವ ಪ್ರತಿಕ್ರಿಯೆ. ಏನು ಸಂಚುಮಾಡಿ ಕಮ್ಯುನಿಸ್ಟರನ್ನು ಪದಚ್ಯುತಗೊಳಿಸಬೇಕು ಎನ್ನುವುದೇ ಬಂಡವಾಳಗಾರರ ಗುರಿ. ಭಾರತದಲ್ಲಿ ವಿಶ್ವದಲ್ಲೇ ಮೊದಲ ಬಾರಿಗೆ ಕಮ್ಯುನಿಸ್ಟರು ಕೇರಳದಲ್ಲಿ ಚುನಾವಣೆಗಳ ಮೂಲಕ ಅಧಿಕಾರಕ್ಕೆ ಬಂದಾಗ ಬಂಡವಾಳ ಶಾಹಿ ಆಡಳಿತ ವರ್ಗ ನಡೆದುಕೊಂಡ ಬಗೆ ಈಗ ಇತಿಹಾಸ. ಏನೇ ಮಾಡಿದರೂ ಕಮ್ಯುನಿಸ್ಟರನ್ನು, ಅವರು ಯಾವುದೇ ಚಹರೆಯವರಾಗಲಿ, ಕಡೆಗಣಿಸುವಂತಿಲ್ಲ ಎನ್ನುವುದನ್ನು ನೇಪಾಳದ ಮಾವೋವಾದಿ ಕಮ್ಯುನಿಸ್ಟರ ಚುನಾವಣಾ ವಿಜಯ ತೋರಿಸಿಕೊಟ್ಟಿದೆ. ಜನಪರ ಹೋರಾಟಗಳಲ್ಲಿ ಮುಂಚೂಣಿಯಲ್ಲಿರುವ ಪಕ್ಷವನ್ನು ಜನತೆ ಕೈಬಿಡುವುದಿಲ್ಲ ಎನ್ನುವುದಕ್ಕೆ ಈ ವಿಜಯ ಉದಾಹರಣೆ.

ಏಳು ವರ್ಷಗಳು ನೇಪಾಳಿ ಸೇನೆಯನ್ನು ಎದುರಿಸಿ ನಡೆಸಿದ ಹೋರಾಟದಲ್ಲಿ ೧೩,೦೦೦ ಮಂದಿ ಅಸು ನೀಗಿದರು. ಎರಡು ಮೂರು ವರ್ಷಗಳ ಹಿಂದೆ ಸಶಸ್ತ್ರ ಹೋರಾಟದಲ್ಲಿ ನಿರತರಾಗಿದ್ದು ನಿರಂಕುಶಾಧಿಕಾರಿ ಅರಸೊತ್ತಿಗೆಯ ವಿರುದ್ಧ ಸೆಣಸುತ್ತಿದ್ದ ಮಾವೋವಾದಿ ಕಮ್ಯುನಿಸ್ಟರು 'ಭಯೋತ್ಪಾದಕರು' ಎನ್ನುವ ಹಣೆಪಟ್ಟಿ ಹೊಂದಿದ್ದರು. ಈಗ ಅಮೆರಿಕಾದ ವಿದೇಶಾಂಗ ಖಾತೆಯ ದಾಖಲೆಗಳಲ್ಲಿ ಅವರು ಭಯೋತ್ಪಾದಕರ ಪಟ್ಟಿಯಲ್ಲೇ ಇದ್ದಾರೆ. ದೇಶದ ೭೫ ಜಿಲ್ಲೆಗಳ ಪೈಕಿ ೬೮ರಲ್ಲಿ ಪ್ರಾಬಲ್ಯ ಹೊಂದಿದ್ದ ಮಾವೋವಾದಿಗಳನ್ನು ಕಡೆಗಣಿಸುವುದು ಸಾಧ್ಯವಾಗದೆ, ಅಂತರ್ಯುದ್ಧದ ಪರಿಸ್ಥಿತಿ ತಪ್ಪಿಸಲು, ಅವರನ್ನು ಮುಖ್ಯವಾಹಿನಿಗೆ ತರಲು ಪ್ರಯತ್ನ ನಡೆಯಿತು. ಒಂದೂವರೆ ಶತಮಾನಕ್ಕೂ ಹೆಚ್ಚು ಕಾಲದಿಂದ ರಾಜ ಮನೆತನದ ನಿರಂಕುಶಾಧಿಕಾರದಿಂದ ಬೇಸತ್ತಿದ್ದ ನೇಪಾಳದ ಜನತೆಯ ಪ್ರಜಾಪ್ರಭುತ್ವಾಕಾಂಕ್ಷೆಯನ್ನು ಅಲಕ್ಷಿಸುವಂತಿರಲಿಲ್ಲ. ಹಾಗಾಗಿ, ೨೦೦೬ರ ಜೂನ್ ತಿಂಗಳಲ್ಲಿ ನೇಪಾಳದ ೭ ರಾಜಕೀಯ ಪಕ್ಷಗಳ ಜೊತೆ ಮುಖ್ಯವಾಹಿನಿಗೆ ಸೇರಲು ೧೨ ಅಂಶಗಳ ಒಪ್ಪಂದವೊಂದಕ್ಕೆ ಮಾವೋವಾದಿ ಕಮ್ಯುನಿಸ್ಟ್ ಪಕ್ಷ ಸಹಿ ಹಾಕಿತು. ಅದಕ್ಕನುಸಾರವಾಗಿ ಸಶಸ್ತ್ರ ಹೋರಾಟವನ್ನು ಕೈಬಿಟ್ಟಿತು. ೨೦೦೭ರ ಜೂನ್‌ನಲ್ಲಿ ನೇಪಾಳದ ಪಾರ್ಲಿಮೆಂಟ್ ದೇಶಕ್ಕೆ ಹೊಸ ಸಂವಿಧಾನ ಸಿದ್ಧಗೊಳಿಸಲು, ಅದಕ್ಕಾಗಿ ಚುನಾವಣೆಗಳನ್ನು ನಡೆಸಲು ನಿರ್ಧರಿಸಿತು. ಈ ಪಾರ್ಲಿಮೆಂಟ್ ಕಲಾಪಗಳಲ್ಲಿ ೮೩ ಮಂದಿ ಮಾವೋವಾದಿ ಸದಸ್ಯರೂ ಭಾಗವಹಿಸಿದರು. ಹಾಗಾಗಿ ೨೦೦೮ರ ಏಪ್ರಿಲ್ ೧೦ರಂದು ಸಂವಿಧಾನ ಪರಿಷತ್ತಿಗೆ ನಡೆದ ಚುನಾವಣೆಗಳಲ್ಲಿ ಮಾವೋವಾದಿಗಳು ಶೇ. ೩೦.೫೨ರಷ್ಟು ಮತಗಳಿಸಿ ೨೨೦ ಸ್ಥಾನಗಳನ್ನು ಪಡೆದು ಬಹುಮತ ಹೊಂದಿದ್ದಾರೆ. ಈ ಬೆಳವಣಿಗೆ ಇದುವರೆಗೆ ಅಧಿಕಾರದ ಸವಿಯನ್ನುಂಡಿದ್ದ ನೇಪಾಳ ಕಾಂಗ್ರೆಸ್ಸಿನ ನಾಯಕರಿಗೆ, ಅರಸೊತ್ತಿಗೆಯ ಪಾಲಕರಿಗೆ, ಸೈನ್ಯಾಧಿಕಾರಿಗಳಿಗೆ ನುಂಗಲಾರದ ತುತ್ತಾಗಿದೆ. ಮಾವೋವಾದಿ ಕಮ್ಯುನಿಸ್ಟ್ ಪಾರ್ಟಿಯ ನಾಯಕ ಪ್ರಚಂಡ (ಪುಷ್ಪಕಮಲ್ ದಹಾಲ್) ಪಾರ್ಟಿಯ ನೇತೃತ್ವದಲ್ಲಿ ಎಲ್ಲ ಪಕ್ಷಗಳನ್ನು ಒಳಗೊಂಡ ರಾಷ್ಟ್ರೀಯ ಸರಕಾರ ಸ್ಥಾಪಿಸಲು ಮುಂದಾಗಿದ್ದಾರೆ. ಅಧಿಕಾರ ಹಸ್ತಾಂತರಕ್ಕೆ ಮೀನಾಮೇಷ. ಅಮೆರಿಕಾದ ರಾಯಭಾರಿ ಕಚೇರಿ ನೇರವಾಗಿ ಆಂತರಿಕ ವ್ಯವಹಾರಗಳಲ್ಲಿ ತಲೆ ಹಾಕುತ್ತಿದ್ದು ಮಾವೋವಾದಿಗಳು ಅಧಿಕಾರಕ್ಕೆ ಬರುವುದನ್ನು ತಡೆಯಲು ಪ್ರಯತ್ನಿಸುತ್ತಿದೆ. ಯಥಾಸ್ಥಿತಿ ಮುಂದುವರಿಕೆಯ ಹೆಸರಿನಲ್ಲಿ ನೇಪಾಳಿ ಕಾಂಗ್ರೆಸ್ಸಿನ ನಾಯಕ ಪ್ರಧಾನಿ ಕೊಯಿರಾಲಾರನ್ನು ಅಧಿಕಾರದಲ್ಲಿರಿಸಲು ಹವಣಿಸುತ್ತಿದೆ. ತನ್ನ ತಪ್ಪು ಲೆಕ್ಕಾಚಾರದಿಂದ ಕಸಿವಿಸಿಗೊಂಡಿರುವ ಮನಮೋಹನ ಸಿಂಗ್ ಸರಕಾರ ಅನಿರೀಕ್ಷಿತ ಬೆಳವಣಿಗೆಯಿಂದ ಕಂಗೆಟ್ಟಿದೆ. ತೆರೆಮರೆಯ ಪ್ರಯತ್ನಗಳೇನೇ ಇದ್ದರೂ ಮಾವೋವಾದಿ ಕಮ್ಯುನಿಸ್ಟ್ ಪಕ್ಷದ ನಾಯಕರು ಮುಂದಿನ ಹೆಜ್ಜೆಯ ಬಗ್ಗೆ ಸ್ಪಷ್ಟವಾದ ನಿಲುವನ್ನು ತಳೆದಿದ್ದಾರೆ. ಮುಂದಿನ ಹಾದಿ ಎಷ್ಟೇ ಕಠಿಣವಾದದ್ದಾದರೂ ಎದುರಿಸಿ ಮುನ್ನಡೆಯುವ ವಿಶ್ವಾಸ ತಳೆದಿದ್ದಾರೆ. ಅವರ ಪ್ರಯತ್ನಗಳಿಗೆ ಯಶಸ್ಸು ಖಚಿತ.

ನೇಪಾಳಿ ಕಮ್ಯುನಿಸ್ಟ್ ಪಾರ್ಟಿಯಲ್ಲಿ ಒಡಕು ಉಂಟಾದಾಗ ೧೯೯೪ರಲ್ಲಿ ಮಾವೋವಾದಿ ಕಮ್ಯುನಿಸ್ಟ್ ಪಾರ್ಟಿ ಪ್ರಚಂಡ ನಾಯಕತ್ವದಲ್ಲಿ ಅಸ್ತಿತ್ವಕ್ಕೆ ಬಂದಿತು. ೩೩,೦೦೦ ಸದಸ್ಯ ಬಲ ಹೊಂದಿರುವ ಈ ಪಕ್ಷ ೧೯,೦೦೦ ಮಂದಿಯ ಸಶಸ್ತ್ರ ಯೋಧರನ್ನು ಹೊಂದಿದೆ. ನೇಪಾಳಿ ಸೇನೆಯ ಕಾರ್ಯಾಚರಣೆಗಳನ್ನು ಯಶಸ್ವಿಯಾಗಿ ಎದುರಿಸಿ ಹೋರಾಟ ನಡೆಸಿದ ಮಾವೋವಾದಿಗಳು ಜನಮನವನ್ನು ಆಕರ್ಷಿಸುವುದರಲ್ಲೂ ಸಫಲರಾದರು. ಸಾವಿರಾರು ಕಾರ್ಯಕರ್ತರ ತ್ಯಾಗ ಬಲಿದಾನಗಳಿಂದ ಇಂದು ಅದು ಅಧಿಕಾರ ಗ್ರಹಣದ ಹಾದಿಯಲ್ಲಿದೆ. ಮಾಮೋವಾದಿಗಳು ನೇಪಾಳದಲ್ಲಿ ಸಾಧಿಸಿರುವ ವಿಜಯ ಭಾರತವನ್ನೂ ಒಳಗೊಂಡಂತೆ ಇತರ ದೇಶಗಳಲ್ಲಿರುವ ವಿವಿಧ ಮಾಮೋವಾದಿ, ಉಗ್ರವಾದಿ ಸಂಘಟನೆಗಳ ಮೇಲೆ ಏನು ಪರಿಣಾಮ ಉಂಟುಮಾಡೀತು? ಈ ಪ್ರಶ್ನೆಗೆ ನೇಪಾಳದ ಮಾವೋವಾದಿ ನಾಯಕ ಪ್ರಚಂಡರವರೇ ಉತ್ತರಿಸಿದ್ದಾರೆ ಒಂದು ಸಂದರ್ಶನದಲ್ಲಿ. ಈ ವಿಜಯ ಅವರಿಗೆ ಹೊಸ ಚೈತನ್ಯ ನೀಡುತ್ತದೆಂಬುದು ಸಹಜ. ಆದರೆ ನೇಪಾಳದ ಮಾದರಿ ಆಗುವುದೆಂದು ಹೇಳಲಾಗದು. ಅದು ಅಲ್ಲಲ್ಲಿಯ ಪರಿಸ್ಥಿತಿ, ಸಂಘಟನೆಯ ಮೇಲೆ ಅವಲಂಬಿತವಾಗಿರುತ್ತದೆ ಎಂದು ಹೇಳಿದ್ದಾರೆ. ಇದು ನಿಜ. ಆದಕ್ಕಾಗಿಯೇ, ಇಂಥ ತಂಡಗಳನ್ನು ಮುಖ್ಯವಾಹಿನಿಗೆ ತರಲು ಎಲ್ಲ ಪ್ರಯತ್ನಗಳನ್ನು ಮಾಡುವುದು ಅವಶ್ಯಕ. ಅನಿವಾರ್ಯ ಕೂಡ.



ನೇಪಾಳದಲ್ಲಿ ಮಾವೋವಾದಿ ಕಮ್ಯುನಿಸ್ಟರ ವಿಜಯದ ಬಗ್ಗೆ ಅಮೆರಿಕಾ ಮತ್ತು ಇತರ ಪಶ್ಚಿಮ ರಾಷ್ಟ್ರಗಳ ಪ್ರತಿಕ್ರಿಯೆ, ಕಿತಾಪತಿಗಳೇನೇ ಇದ್ದರೂ ಭಾರತ ಸರಕಾರ ಜವಾಬ್ದಾರಿಯಿಂದ ತನ್ನ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ. ಬ್ರಿಟಿಷ್ ಆಡಳಿತೆಯ ಕಾಲದಲ್ಲಿ ನೇಪಾಳ ಸ್ವತಂತ್ರ ರಾಜ್ಯವಾಗಿದ್ದರೂ ಬ್ರಿಟಿಷರ ರಕ್ಷಣೆಯಲ್ಲಿಯೇ ಇತ್ತು. ಭಾರತದಿಂದ ಬ್ರಿಟಿಷರ ನಿರ್ಗಮನದ ನಂತರ ಒಂದು ರೀತಿಯಲ್ಲಿ ಅದು ಭಾರತದ ರಕ್ಷಣೆಯಲ್ಲಿದೆ ಎಂದೇ ಹೇಳಬಹುದು. ಆರ್ಥಿಕವಾಗಿ, ರಾಜಕೀಯವಾಗಿ ಭಾರತದೊಂದಿಗೆ ನೇಪಾಳ ವಿಶೇಷವಾದ ನಿಕಟ ಸಂಬಂಧ ಹೊಂದಿದೆ. ೧೯೫೦ರಲ್ಲಿ ಭಾರತ-ನೇಪಾಳ ರಾಜ್ಯಗಳು ಶಾಂತಿ ಮತ್ತು ಮೈತ್ರಿಯ ಕರಾರು ಪತ್ರಕ್ಕೆ ಸಹಿಹಾಕಿವೆ. ಅದು ಈಗಲೂ ಅಸ್ತಿತ್ವದಲ್ಲಿದೆ. ಈ ಕೌಲನ್ನು ಪುನರ್ ಪರಿಶೀಲಿಸಿ ಹೊಸ ಕೌಲು ಒಂದನ್ನು ಸಿದ್ಧಗೊಳಿಸಬೇಕೆಂಬ ಅಪೇಕ್ಷೆಯನ್ನು ನೇಪಾಳದ ಮಾವೋವಾದಿ ನಾಯಕ ವ್ಯಕ್ತಗೊಳಿಸಿದ್ದಾರೆ. ಮೊದಲನೆಯದಾಗಿ, ಭಾರತ ಸರಕಾರ ನೇಪಾಳದ ವಾಸ್ತವ ಪರಿಸ್ಥಿತಿಯನ್ನು ಅರಿತುಕೊಂಡು, ಹೊಸ ನಾಯಕತ್ವದೊಂದಿಗೆ ವ್ಯವಹರಿಸಲು ಅನುಕೂಲವಾದ ವಾತಾವರಣ ಕಲ್ಪಿಸುವುದು ಸೂಕ್ತ ಹಾಗೂ ಅಗತ್ಯ. ಈಗಿನ ಸನ್ನಿವೇಶದಲ್ಲಿ ಹಿಂದುಮುಂದು ನೋಡಿದರೆ ಇದುವರೆಗೆ ಬೆಳೆದು ಬಂದಿರುವ ಸಂಬಂಧಗಳಿಗೆ ಧಕ್ಕೆ ಉಂಟಾಗುತ್ತದೆ ಎಂಬುದನ್ನು ಗಮನಿಸಬೇಕು. ೧೯೫೦ರ ಕೌಲು ಪುನರ್‌ಪರಿಶೀಲನೆಗೊಳ್ಳಬೇಕು ಎಂಬ ಅಪೇಕ್ಷೆಗೆ ಭಾರತ ಅನುಕೂಲ ಪ್ರತಿಕ್ರಿಯೆ ನೀಡಬೇಕು. ಅರ್ಧ ಶತಮಾನದಲ್ಲಿ ಎಷ್ಟೋ ಬೆಳವಣಿಗೆಗಳು ಸಂಭವಿಸಿವೆ. ಆ ಹಿನ್ನೆಲೆಯಲ್ಲಿ ಕೌಲಿನ ಪುನರ್ ಪರಿಶೀಲನೆ ಎರಡೂ ದೇಶಗಳ ಹಿತದೃಷ್ಟಿಯಿಂದ ಒಳ್ಳೆಯದು. ಸಂಬಂಧಗಳ ವರ್ಧನೆಗೆ ಇದು ಅವಶ್ಯಕ. ಈ ವಿಷಯದಲ್ಲಿ ಮಾವೋವಾದಿ ನಾಯಕ ಪ್ರಚಂಡ ಸಂದರ್ಶನ ಒಂದರಲ್ಲಿ ಭಾರತದೊಂದಿಗೆ ಸಹಕಾರದ ಮಟ್ಟವನ್ನು ವಿಸ್ತರಿಸದೆ ನೇಪಾಳದ ಸುಭದ್ರತೆ ಮತ್ತು ಸಮೃದ್ಧಿ ಅಸಾಧ್ಯ ಎಂದು ಹೇಳಿರುವುದು ಗಮನಾರ್ಹ.

ಅರಸೊತ್ತಿಗೆಯನ್ನು ಅಂತ್ಯಗೊಳಿಸಿ ಸ್ವತಂತ್ರ ಪ್ರಜಾಪ್ರಭುತ್ವ ಗಣರಾಜ್ಯದತ್ತ ಅಡಿಯಿರಿಸಲು ಮುಂದಾಗಿರುವ ನೇಪಾಳದ ಜನತೆಗೆ ಎಲ್ಲ ಯಶಸ್ಸನ್ನೂ ಹಾರೈಸೋಣ. ಬದಲಾವಣೆಯ ಗಾಳಿ ಉಪಖಂಡದಲ್ಲಿ ಬೀಸುತ್ತಿರುವುದು ಸ್ವಾಗತಾರ್ಹ. ಇತ್ತೀಚೆಗೆ ನೇಪಾಳದ ನೆರೆಯ ರಾಜ್ಯ ಭೂತಾನ ಕೂಡ ಪ್ರಜಾಪ್ರಭುತ್ವದ ಹಾದಿಯಲ್ಲಿ ನಡೆದಿರುವುದು ಪ್ರಶಂಸನೀಯ. ಈ ಸಂದರ್ಭದಲ್ಲಿ ಪಾಕಿಸ್ತಾನದಲ್ಲಿಯೂ ಪ್ರಜಾಪ್ರಭುತ್ವ ಸರಕಾರ ಅಸ್ತಿತ್ವಕ್ಕೆ ಬಂದಿರುವುದು ಸ್ವಾಗತಾರ್ಹ. ಬಾಂಗ್ಲಾದೇಶ, ಮೈನ್ಮಾರ್‌ಗಳಲ್ಲೂ ಆದಷ್ಟು ಬೇಗ ಪ್ರಜಾಪ್ರಭುತ್ವ ವ್ಯವಸ್ಥೆ ಬರಲಿ ಎಂದು ಆಶಿಸೋಣ. ಬದಲಾವಣೆಯ ಅಲೆ ಉಪಖಂಡದಲ್ಲಿ ಬಲವಾಗಿ ಬೀಸುವ ಸೂಚನೆಗಳು ಗಮನಾರ್ಹ.

-ಸೀಯಾರ್ಕೆ

ಈಚಿನ ರಾಜಕೀಯ ಚದುರಂಗದಾಟದಲ್ಲಿ ಮಾನವ ಸಂಬಂಧಗಳು ಮುಕ್ಕಾಗುತ್ತಿವೆ. ಒಂದು ಮತಧರ್ಮದವರನ್ನು ದೂಷಿಸುತ್ತಾ ವಿವಿಧ ರೀತಿಯ ಶಂಕೆಗಳನ್ನು ಹುಟ್ಟುಹಾಕಿ, ಅವರ ಮೇಲೆ ಸಲ್ಲದ ಆರೋಪಗಳನ್ನು ಹೊರಿಸುವುದು ಮತೀಯ ರಾಜಕೀಯದ ಒಂದು ಕೆಟ್ಟ ಪದ್ಧತಿ. ನಿನ್ನೆಯವರೆಗೂ ಆತ್ಮೀಯರಾಗಿದ್ದವರು ಏಕಾಏಕಿ ಪರಸ್ಪರರನ್ನು ಕೆಟ್ಟದ್ದಾಗಿ ನಡೆಸಿಕೊಳ್ಳುವಂತಹ ವಾತಾವರಣವನ್ನು ನಿರ್ಮಿಸುವುದು ಸಾಂಸ್ಕೃತಿಕ ಪತನದ ಸೂಚನೆಯಾಗಿದೆ. ಸ್ವಾನುಭವದಿಂದ ಮೂಡಿದ ಚಿಂತನೆ ನಮಗೆ ಮಾರ್ಗದರ್ಶಿ ಸೂತ್ರವಾಗುವಂತೆ ಲೇಖಕರು ಇಲ್ಲಿ ನಿರೂಪಿಸಿದ್ದಾರೆ.



# ಪಡ್ಡೂರಿನ ಪಾಠಗಳು

## (ದಕ್ಷಿಣ ಕನ್ನಡ ಜೀವನ : ಅಂದು-ಇಂದು)

ಎಸ್. ಆರ್. ವಿಜಯಶಂಕರ



ಇತ್ತೀಚೆಗೆ ನಮ್ಮ ಸಮಾಜದ ಹಲವಾರು ವಿದ್ಯಮಾನಗಳು ಮನಸ್ಸನ್ನು ಇರಿಯುತ್ತವೆ. ಯಾಕೆ ಹೀಗೆ ಆಗುತ್ತಿದೆ? ಅದನ್ನು ಹೇಗೆ ಅರ್ಥಮಾಡಿಕೊಳ್ಳಬೇಕು ಎಂಬುದನ್ನು ಯೋಚಿಸಿದಷ್ಟೂ ಮನಸ್ಸು ಮತ್ತಷ್ಟು ಮರುಗುತ್ತದೆ. ಮುಖ್ಯವಾಗಿ ಎಲ್ಲಾ ರೀತಿಯಲ್ಲೂ ಸೂಕ್ಷ್ಮವಾಗಿ ಆಕ್ರಮಿಸುವ ಹಿಂಸೆಯನ್ನು ಹೇಗೆ ಎದುರಿಸಬೇಕು, ಎಂಬುದು ಕಾಡಿ ಕಚ್ಚುತ್ತಿದೆ. ಜಾತಿಯ ಹೆಸರಿನಲ್ಲಿ ಹಿಂಸೆ, ಕೊಲೆ, ಸುಲಿಗೆ, ದಲಿತರ ಜೀವಂತ ದಹನ, ಧರ್ಮದ ಹೆಸರಿನಲ್ಲಿ ಹಿಂಸೆ, ಕೊಲೆ, ಇರಿತ. ಜಾಗತೀಕರಣ ಇತ್ಯಾದಿ ಆರ್ಥಿಕ ಸಮೃದ್ಧಿಯ ಹೆಸರಿನಲ್ಲಿ ಸೂಕ್ಷ್ಮವಾದ ಹಿಂಸೆ. ಲಕ್ಷಾಂತರ ರೂಪಾಯಿಗಳ ತಿಂಗಳ ಸಂಬಳ ತರುವ ಇಂಜಿನಿಯರ್‌ಗಳ ಕಂಪೆನಿ ಕೆಫೆಟೇರಿಯಾಗಳಲ್ಲಿ ಅವರ ಎಂಜಲು ತಟ್ಟೆ ತೊಳೆಯಲು ಕಾಲೇಜು ಓದಬಹುದಾದ ಪ್ರಾಯದ ಹುಡುಗರು. ದರ್ಪ ದವಲತ್ತುಗಳ ಲೋಕದ ಎದುರು ತಗ್ಗಿ ಬಗ್ಗಿ ನಡೆಯಬೇಕಾದ ಮಂದಿ.

ಹೀಗೆ ಮನಸ್ಸು ಮುದುಡಿಕೊಳ್ಳುತ್ತಾ ಇದ್ದಾಗ ನಮ್ಮ ಗಡಿನಾಡು ಕಾಸರಗೋಡಿನಲ್ಲಿ ಕೋಮು ಹಿಂಸೆ ಎಂಬ ವರ್ತಮಾನ ಬಂತು. ದಿನಾಂಕ ೧೯-೦೪-೨೦೦೮ರ ಸಂಯುಕ್ತ ಕರ್ನಾಟಕ ಪತ್ರಿಕೆಯ ಒಂದು ವರದಿ ನನ್ನ ಬಾಲ್ಯದ ದಿನಗಳನ್ನು ಕಣ್ಣೆದುರು ತಂದಿತು. ಆಗ ಇದ್ದ ಸಾಮರಸ್ಯ ಈಗ ಯಾಕೆ ಕದಡಿದೆ?

ಸಂಯುಕ್ತ ಕರ್ನಾಟಕದ ಕಾಸರಗೋಡು ಹಿಂಸೆಯ ವರದಿಯಲ್ಲಿದ್ದ ಈ ಕೆಳಗಿನ ವಿವರಗಳು, ಯಾಕೆ ಹೀಗೆ ಎಂದು ನನ್ನನ್ನು ಚುಚ್ಚುತ್ತಿವೆ. ವರದಿಯ ವಿವರ ಇದು :

''ಬಿಸು ಪರ್ಬದ ದಿನ ದುಷ್ಕರ್ಮಿಗಳಿಂದ ಚೂರಿ ಇರಿತಕ್ಕೆ ಓರ್ವ ಬಲಿಯಾಗುವುದರೊಂದಿಗೆ ಕಾಸರಗೋಡಿನಲ್ಲಿ ಭುಗಿಲೆದ್ದಿದ್ದ ರಾಜಕೀಯ ದ್ವೇಷ ಕೋಮುಗಲಭೆ ರೂಪತಳೆದು ಹಿಂಸಾಚಾರಕ್ಕೆ ತಿರುಗಿದ್ದು ಶುಕ್ರವಾರ ಇನ್ನೊಬ್ಬನ ಕೊಲೆಯಾಗಿದೆ.

''ಅಲ್ಲದೆ ಕಾಸರಗೋಡು ಸಮೀಪದ ಕಾಂಞಂಗಾಡಿಗೂ ಹಿಂಸಾಚಾರ ವ್ಯಾಪಿಸಿದ್ದು ಚೂರಿ ಇರಿತಕ್ಕೆ ಒಳಗಾದವರೊಬ್ಬರನ್ನು ಆಸ್ಪತ್ರೆಗೆ ದಾಖಲಿಸಲಾಗಿದೆ.

''ಶುಕ್ರವಾರದಂದು ಕಾಸರಗೋಡಿನ ಅಡ್ಕತ್ತಬೈಲಿನ ಕೆ. ಪಿ. ಮಹಮ್ಮದ್ ಕುಂಞ (೬೦ ವರ್ಷ) ಎಂಬವರನ್ನು ಮಧ್ಯಾಹ್ನ ೧೨ ಗಂಟೆಗೆ ಇರಿದು ಕೊಲ್ಲಲಾಗಿದೆ.

''ಇವರು ಸ್ಥಳೀಯ ಜಲಾಲ್ ಜಮಾಅತ್ ಕಮಿಟಿ ಅಧ್ಯಕ್ಷರಾಗಿದ್ದು, ಗುಡ್ಡೆ ಟೆಂಪಲ್ ರಸ್ತೆಯಲ್ಲಿ ಮಧ್ಯಾಹ್ನ ೧೨ ಗಂಟೆಗೆ ನಮಾಜ್ ಮಾಡಲೆಂದು ಮಸೀದಿಗೆ ತೆರಳುತ್ತಿದ್ದ ವೇಳೆ ಅಡಗಿ ಕುಳಿತಿದ್ದ ಇಬ್ಬರ ತಂಡ ಏಕಾಏಕಿ ಇವರ ಮೇಲೆ ಎರಗಿ ಚೂರಿಯಿಂದ ತಿವಿಯಿತು ಎಂದು ಹೇಳಲಾಗಿದೆ. ಗಂಭೀರವಾಗಿ ಗಾಯಗೊಂಡಿದ್ದ ಇವರು ಸ್ಥಳದಲ್ಲೇ ಮೃತಪಟ್ಟಿದ್ದಾರೆ.''

ಈ ವರದಿ ಮುಂದುವರಿಯುತ್ತಾ, ಇರಿತ, ವ್ಯಾಪಕ ಹಿಂಸಾಚಾರದ ವಿವರಗಳನ್ನು ಹೇಳಿ ಆಮೇಲೆ ಒಂದು ಪ್ಯಾರಾದಲ್ಲಿ ನೀಡಿದ್ದ ಹಿಂದಿನ ದಿನಗಳ ಸಾವುಗಳ ವಿವರ ಹೀಗಿದೆ :

''ಸೋಮವಾರ ರಾತ್ರಿ (೧೪-೦೪-೦೮) ಹೊಸ ಬಸ್ ನಿಲ್ದಾಣದ ಬಳಿ ನೆಲ್ಲಿಕುಂಜೆಯ ಸಂದೀಪ್ ಕುಮಾರ್, ಬುಧವಾರ (೧೬-೦೪-೦೮) ಹಾಡು ಹಗಲೇ ಆನೆ ಬಾಗಿಲು ಸಿಪಾಹಿ ಮಹಮ್ಮದ್ ಸಿನಾನ್, ಗುರುವಾರದಂದು (೧೭-೦೪-೦೮) ಬಿಜೆಪಿ ಉಪಾಧ್ಯಕ್ಷ, ನ್ಯಾಯವಾದಿ ಸುಹಾಸ್ ([illegible] ವರ್ಷಗಳು) ಕೊಲೆಯಾಗಿದ್ದು ಶುಕ್ರವಾರ ಮಧ್ಯಾಹ್ನ (೧೮-೦೪-೦೮) ಅಡ್ಕತ್ತಬೈಲು ಸಿಪಾಹಿ ಮಹಮ್ಮದರನ್ನು ಕೊಲೆಗೈಯುವ ಮೂಲಕ ಮೃತಪಟ್ಟವರ ಸಂಖ್ಯೆ ನಾಲ್ಕಕ್ಕೇರಿದೆ.''

ಆ ಬಳಿಕ ಸುತ್ತಮುತ್ತಲಿನ ಹಿಂಸೆ ಇತ್ಯಾದಿಗಳ ವಿವರ ಇದೆ. ಕಾಸರಗೋಡು ಅಲ್ಲದೆ ಚೆರ್ಕಳ, ಬದಿಯಡ್ಕ, ಪೆರ್ಲ, ಕುಂಬ್ಳೆ, ನೀರ್ಚಾಲು, ಉಪ್ಪಳ, ಮಂಜೇಶ್ವರ, ಉದ್ಯಾವರ ಮೊದಲಾದ ಪೇಟೆಗಳು ಕೂಡ ಬಿಕೋ ಎನ್ನುತ್ತಿವೆ ಎಂಬ ವರದಿ ನನ್ನನ್ನು ನಡುಗಿಸಿಬಿಟ್ಟಿತು. ಅವೆಲ್ಲಾ ನಾನು ನನ್ನ ಬಾಲ್ಯದಲ್ಲಿ ಓಡಾಡಿದ ಜಾಗಗಳು. ಕಾಸರಗೋಡು ಜಿಲ್ಲೆಗೆ ತಾಗಿ ಇರುವ ಬಂಟ್ವಾಳ ತಾಲೂಕಿನ ವಿಟ್ಲ ಪಡ್ನೂರು ಗ್ರಾಮದಲ್ಲಿ ನಾನು ಬಾಲ್ಯವನ್ನು ಕಳೆದೆ. ಆ ಹಳ್ಳಿಯಿಂದ ದಿನನಿತ್ಯ ಎಂಟು ಮೈಲು ದೂರದ ವಿಟ್ಲಕ್ಕೆ ಹೋಗಿ ಹೈಸ್ಕೂಲು ಓದಿದೆ. ಆಗ ಅಂದರೆ ಸುಮಾರು ನಾಲ್ಕು ದಶಕಗಳ ಹಿಂದೆ ಇದ್ದ ನನ್ನ ಊರಿನ ಕ್ರಮ ಬೇರೆಯಾಗಿತ್ತು.

ಈ ವರದಿ ಓದಿದ ಬಳಿಕ ಉಂಟಾದ ಮನಸ್ಸಿನ ತಳಮಳ ಹಾಗೂ ನೋವನ್ನು ಹೇಳಲು ನನ್ನ ಸಾಹಿತ್ಯ ವಿಮರ್ಶೆ ಸಾಕಾಗುವುದಿಲ್ಲ. ಡಾ|| ಕೆ. ಕೇಶವಶರ್ಮರ 'ಚಾರು ಚರಿತ' ಕಾದಂಬರಿ ಓದಿ ಅದರಲ್ಲಿ ಇರುವ ಕೋಮು ಹಿಂಸೆಯ ಹಿನ್ನೆಲೆಯಲ್ಲಿ ನಾನೊಂದು ವಿಮರ್ಶೆ ಬರೆದಿದ್ದೆ. ಅದರಲ್ಲಿ ಕಡೆಂಗೋಡ್ಲು ಶಂಕರ ಭಟ್ಟರ 'ಚೂರಿಯ ಕತೆ' ಎಂಬ ಕಥೆಯಲ್ಲಿ ನಮೂದಿಸಿದ ಕೋಮು ಹಿಂಸೆಯನ್ನು ಪ್ರಸ್ತಾಪಿಸಿದ್ದೆ.

ಸಾಹಿತ್ಯದ ಓದಿನಿಂದ ಉಂಟಾಗುವ ಅನುಭವಕ್ಕೂ ನಿಜಜೀವನದಲ್ಲಿ ಕಾಣುವುದಕ್ಕೂ ವ್ಯತ್ಯಾಸವಿದೆ. ಪತ್ರಿಕೆಯ ಈ ವರದಿ ನನ್ನ ಹಳೆಯ ನೆನಪುಗಳನ್ನು ಮತ್ತೆ ತಂದು ಯಾಕೆ ಹೀಗಾಯಿತು ಎಂದು ಕಾಡುತ್ತದೆ. ನಾನು ಕತೆ, ಕಾದಂಬರಿ ಬರೆಯಲು ತಿಳಿದವನಲ್ಲ. ನನ್ನ ನೆನಪುಗಳನ್ನು ರೂಪಕಗಳಾಗಿ ಪರಿವರ್ತಿಸಿ ಹೇಳುವುದು ನನಗೆ ಗೊತ್ತಿಲ್ಲ. ನನ್ನ ಬಾಲ್ಯದ ನೆನಪು ಏನು ಎಂಬುದನ್ನು ನಿಮಗೆ ಹೇಳಿದರೆ ನನ್ನ ನೋವು ಏನೆಂಬುದು ಅರ್ಥವಾದರೂ ಆದೀತು ಎಂಬ ಆಸೆಯಿಂದ ಈ ವಿವರಗಳನ್ನು ನನ್ನ ನೆನಪಲ್ಲಿ ಇದ್ದ ಹಾಗೆ ಹೇಳುತ್ತೇನೆ. ಇದು ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ, ಬಂಟ್ವಾಳ ತಾಲೂಕಿನ, ವಿಟ್ಲ ಕಸಬಾದಲ್ಲಿ ವಿಟ್ಲ ಪಡ್ನೂರು, ಕೊಳ್ನಾಡು, ವೀರಕಂಭ ಮೊದಲಾದ ಗ್ರಾಮಗಳಲ್ಲಿ ನಾನು ೧೯೬೦ನೇ ಇಸವಿಯಿಂದ ೧೯೭೫ನೇ ಇಸವಿವರೆಗೆ ಕಂಡ, ನೋಡಿದ, ನೆನಪಿನ ಚಿತ್ರಗಳು. ಅವು ಹೇಗೆ ಬಂತೋ ಹಾಗೆ ಹೇಳಿಬಿಡುತ್ತೇನೆ. ಇದನ್ನು ಓದಿದವರಿಗೆ, ವೃಥಾ ಹಿಂಸೆ ಇರಕೂಡದು. ನಮ್ಮಲ್ಲಿ ವಿನಾಕಾರಣ ದ್ವೇಷ ಕಮ್ಮಿಯಾಗಬೇಕು. ಮನುಷ್ಯರ ನಡುವಿನ ಪ್ರೀತಿಯನ್ನು ಧರ್ಮ, ಜಾತಿಗಳು ಒಡೆಯುವ ವಾತಾವರಣ ಸರಿಯಲ್ಲ. ಮನುಷ್ಯತ್ವದ ಮೊದಲ ಹೆಜ್ಜೆಯೇ ಹಿಂಸೆಯನ್ನು ಮೀರುವುದು ಎಂಬ ಅಭಿಪ್ರಾಯ ಮೂಡಿದರೆ ಸಾಕು. ಈ ಹಿನ್ನೆಲೆಯಲ್ಲಿ ನಾನು ಹೇಳಹೊರಟಿರುವ ನೆನಪಿನ ಚಿತ್ರಗಳನ್ನು ಹಿಂದೂ, ಅಥವಾ ಮುಸ್ಲಿಂ ಯಾರ ಪರವೂ ವಹಿಸದೆ ಕೇವಲ ಮನುಷ್ಯ ಪ್ರೀತಿಯ ಪರವಾಗಿ ಓದಬೇಕೆಂದು ನಿಮ್ಮಲ್ಲಿ ಪ್ರಾರ್ಥಿಸಿಕೊಂಡು ಕೇವಲ ನಾಲ್ಕು ದಶಕಗಳ ಹಿಂದಿನ ನಮ್ಮ ಊರಿನ ವಿವರಗಳನ್ನು ನೆನಪಿನಿಂದ ತೆಗೆಯುತ್ತೇನೆ.

* * *

ನನ್ನ ಬಾಲ್ಯದಲ್ಲಿ ಸುಲೇಮ, ಅಬ್ಬೋಕರೆ, ಇಬ್ರಾಯಿ, ಅದ್ದು, ಅದ್ರಾಮ, ಹಸನೆ, ಅಸನೆ, ಮೈದು, ಉಮ್ಮರ್, ಮಮ್ಮದ್, ಖಾದ್ರಿ, ಮೊಯಿದ್ದೆ, ಮರಿಯ, ಪಾತುಮ್ಮ ಅಯಿಸ, ಸಾಯಿಬ್ಬು, ಖತೀಮಾ, ಪಳ್ಳಿಬ್ಯಾರಿ ಮೊದಲಾದವು ಸಾಮಾನ್ಯ ಹೆಸರುಗಳು. ಅವರೆಲ್ಲಾ ಮನೆಗಳಿಗೆ ಕೂಲಿ ಕೆಲಸಕ್ಕೆ ಬರುತ್ತಿದ್ದರು. ಇನ್ನು ಕೆಲವರು ಕಂಟ್ರಾಕ್ಟ್ ಕೆಲಸ ಎಂದು ತೋಟದಲ್ಲಿ ಮಣ್ಣಿನ ಕೆಲಸ ಮಾಡುತ್ತಿದ್ದರೆ, ಮತ್ತೆ ಕೆಲವರು ಸಣ್ಣಪುಟ್ಟ ವ್ಯಾಪಾರ. ಲಕ್ಷ್ಮಣ, ವಾಸು, ಪರಮೇಶ್ವಿ, ಅಬ್ಬಕ್ಕು, ದುಗ್ಗ, ಕೊರಪ್ಪಳು, ಲಚ್ಚಿಮಿ, ತಿಮ್ಮಕ್ಕು, ಗುರುವ, ಚನಿಯ, ಚೋಮ, ಅಂಗರ ಹೀಗೆ ಇದ್ದ ಹೆಸರುಗಳ ಜೊತೆ ತುಳು ಕನ್ನಡಗಳಿಂದ ರೂಪಾಂತರ ಹೊಂದಿದ ಮೂಲ ಮುಸ್ಲಿಂ ಹೆಸರುಗಳು ಸಹಜ. ಅಣ್ಣು ಅಂತ ಒಬ್ಬ ಇದ್ದ. ಅಪ್ಪಣ್ಣ, ಐತಪ್ಪ ಮೊದಲಾದವರು ಅವನ ಸಂಬಂಧಿಕರು. ಆದರೂ ಅವನಿಗೆ ಅದ್ದುವಿನ ಜೊತೆ ಬಹಳ ಸ್ನೇಹ. ಅಡಿಕೆ ಹಾಳೆಯ ಪಡಿಗೆ ಮಾಡಿ ಮಧ್ಯಾಹ್ನ ತೋಟದ ಕೆಲಸ ಮುಗಿಸಿ ಊಟಕ್ಕೆ ಕೂತುಕೊಳ್ಳುವಾಗ ಅದ್ದುವಿನ ಹತ್ತಿರ ಕೂತಿರುತ್ತಿದ್ದ. ಅದ್ದು, ಅದ್ರಾಮ ಎಂಬುದು ಅಬ್ದುಲ್ಲ ಹೆಸರಿನ ರೂಪಾಂತರ.

ಈ ಆಳುಗಳಲ್ಲಿ ಕೆಲವರಿಗೆ ನಾಲ್ಕಾರು ಆಡುಗಳು ಇನ್ನು ಕೆಲವರಿಗೆ ಕೋಳಿ ಮತ್ತೆ ಕೆಲವರಿಗೆ ಅಪರೂಪಕ್ಕೆ ಒಂದು ದನ ಏನಾದರೂ ಇರುವುದೂ ಇತ್ತು. ದನಕರುಗಳಿಗೆ ಅಸೌಖ್ಯ ಆದರೆ ಅವರ ಮಾತಿನ ಒಂದು ಅಂಶ. ದುಗ್ಗ ಮತ್ತು ಗುರುವ ಎಂಬ ಇಬ್ಬರಿಗೆ ಕೋಳಿ ಅಂಕದ ಹುಚ್ಚಿತ್ತು. ಮುಸ್ಲಿಂ ಆಳುಗಳು ಕೋಳಿ ಅಂಕಕ್ಕೆ ಹೋಗುತ್ತಿದ್ದುದು ಅಪರೂಪ. ಆದರೆ ಕೋಳಿ ಅಂಕಗಳಿಗೆ ಹೋದವರೊಡನೆ ವಿವರ ಚರ್ಚೆ ಇರುತ್ತಿತ್ತು.

ವಿಟ್ಲ ಪಡ್ನೂರು ಗ್ರಾಮದ ನಮ್ಮ ತೋಟ ಎರಡು ಬೆಟ್ಟಗಳ ನಡುವಿನ ಪುಟ್ಟ ಕಣಿವೆಯಲ್ಲಿ ಬೆಳೆಸಿದ್ದು. ಆ ಅಡಿಕೆ ಮರಗಳಿಗೆ ದಕ್ಷಿಣ ಭಾಗದ ಬಿಸಿಲು ಇರಕೂಡದು. ದಕ್ಷಿಣ ಭಾಗದಲ್ಲಿ ಎತ್ತರದ ಬೆಟ್ಟ ಅಥವಾ ದೊಡ್ಡ ಮರಗಳ ಮರೆ ಇರಬೇಕು. ಆ ಬೆಟ್ಟಗಳ ನಡುವಿನ ಪುಟ್ಟ ತೊರೆಯನ್ನು ಹೇಗೆ ತಿರುಗಿಸಬಹುದು ? ಸ್ವಲ್ಪ ಬೆಟ್ಟ ಕಡಿದು ಹೊಸತೋಟ ಹೇಗೆ ಮಾಡಬಹುದು ? ಇತ್ಯಾದಿ ಮಣ್ಣಿನ ಕೆಲಸದ ಸಲಹೆಗೆ ಅಬ್ಬೋಕರೆ. ನಾಲ್ಕಾರು ವರ್ಷಗಳಿಗೆ ಒಮ್ಮೆ ತೋಟದ ಪಕ್ಕದ ಬೆಟ್ಟವನ್ನು ಕಡಿದು ಆ ಮಣ್ಣನ್ನು ತೋಟದೊಳಗೆ ಹರಡಬೇಕು. ಹೆಚ್ಚು ಮಳೆ ಬೀಳುವ ಆ ಪ್ರದೇಶಗಳಲ್ಲಿ ತೋಟಕ್ಕೆ ಹೀಗೆ ಆಗಾಗ ಮಣ್ಣು ಹಿಡಿಯುವುದು ಉತ್ತಮ ಬೆಳೆಗೆ ಅಗತ್ಯ. ಈ ದೊಡ್ಡ ಮಣ್ಣಿನ ಕೆಲಸಗಳ ಕಾಂಟ್ರಾಕ್ಟುಗೆ ಅಬ್ಬೋಕರೆ ಯಾವತ್ತೂ ಮುಂದು. ದಿನಕೂಲಿ ಬೇಡ ಕಂತ್ರಾಟು ಮಾಡುತ್ತೇವೆ ಎಂದು ಹೇಳುತ್ತಿದ್ದರು.

ಒಂದು ಕೋಲು ಮಣ್ಣು ತೋಟಕ್ಕೆ ಹೋದರೆ ಇಷ್ಟು ದುಡ್ಡು ಎಂದು ನಿರ್ಣಯ ಆದರೆ ಮುಗಿಯಿತು. ಬೆಳಗ್ಗೆ ಆರು ಗಂಟೆಗೆ ಮೊದಲೇ ಅವರು ತಯಾರು. ಸಂಜೆ ಸಂಪೂರ್ಣ ಕತ್ತಲು ಹತ್ತುವವರೆಗೂ ಕೆಲಸ. ಆಮೇಲೆ ಒಂದಿಬ್ಬರು, ಪಿಕ್ಕಾಸಿ, ಸಬ್ಬಲು (ಮಣ್ಣು ಒಕ್ಕುವ ಸರಳು) ಮೊದಲಾದವನ್ನು ಎರಡು ಮೈಲು ದೂರದ ಕಬ್ಬಿಣದ ಆಚಾರಿ (ಕಮ್ಮಾರ)ಯಲ್ಲಿಗೆ ತೆಗೆದುಕೊಂಡು ಹೋಗಿ ಅದನ್ನು ದಲಿಪ್ಪಿಸಿಕೊಂಡು (ಮಡಿಸಿ ಹೋದ ಹತ್ಯಾರನ್ನು ಪುನಃ ಹರಿತಗೊಳಿಸುವುದು) ಬರುತ್ತಿದ್ದರು. ಆ ಅಬ್ಬೋಕರೆಗೆ ಸಂಜೀವ ಎಂಬವ ಒಬ್ಬ ದೊಡ್ಡ ದೋಸ್ತು. ಯಾವಾಗಲೂ ಅವರಿಬ್ಬರದು ಜೋಯಿಂಟ್ ಕಂತ್ರಾಟು. ಪಿಕ್ಕಾಸಿನಿಂದ ನೆಲವನ್ನು ಅಗೆಯುವ ಕೆಲಸ ಹೆಚ್ಚಿನ ಶ್ರಮದ್ದು. ಅಬ್ಬೋಕರೆ ಯಾವಾಗಲೂ ಅದನ್ನೇ ಮಾಡುತ್ತಿದ್ದುದು. ಆ ಅಗೆದ ಮಣ್ಣನ್ನು ಬುಟ್ಟಿಗಳಿಗೆ ತುಂಬಿ ಅದನ್ನು ಹೆಣ್ಣಾಳುಗಳ ಅಥವಾ ಸ್ವಲ್ಪ ಕಮ್ಮಿ ಶಕ್ತಿಯ ಗಂಡಾಳುಗಳ ತಲೆಗೆ ಹಿಡಿಯುವ ಕೆಲಸ ಸಂಜೀವಂದು. ಅಬ್ಬೋಕರೆಗೆ ಬಚ್ಚಿಹೋದಾಗ (ಆಯಾಸ ಆದಾಗ) ಸಂಜೀವ ಪಿಕ್ಕಾಸು ಹಿಡಿಯಲು ತಯಾರು. ಅಣ್ಣು ಅದ್ದು ಇದ್ದ ಹಾಗೆ

ಅಬ್ಬೋಕೆರೆ ಸಂಜೀವ ಇನ್ನೊಂದು ಜೋಡಿ. ಕಂತ್ರಾಟಿನಲ್ಲಿ ದುಡ್ಡು ಆದಾಗ ಅವರಿಬ್ಬರಿಗೆ ವಿಟ್ಲದ ಟೆಂಟು ಸಿನಿಮಾಕ್ಕೆ ಹೋಗಿ ಅಪರೂಪಕ್ಕೆ ಸಿನಿಮಾ ನೋಡುವ ಕ್ರಮವೂ ಇತ್ತು.

ನಮ್ಮ ಮನೆ ಹತ್ತಿರ ಒಂದು ಕಚ್ಚಾ ಮಣ್ಣಿನ ರಸ್ತೆ. ಆ ಮಣ್ಣಿನ ರಸ್ತೆಯಲ್ಲಿ ಮೂರು ಮೈಲು ನಡೆದರೆ ಪಾಲ್ತಿಮಾರು ಎಂಬ ಜಾಗ. ಆ ಪಾಲ್ತಿಮಾರು ಜಾಗದಲ್ಲಿ ಒಂದು ಅಡಿಕೆ ಮರದ ಪಾಲ (ಪುಟ್ಟ ಸಂಕ) ಹಾಗೂ ಆರು (ನೀರು, ತೊರೆ) ಇತ್ತು. ಆ ತೊರೆದಂಡೆಗೆ ಸ್ವಲ್ಪ ಕಲ್ಲುಕಟ್ಟೆ ಅದರ ಪಕ್ಕ ಸುಲೇಮನ ಮನೆ. ಆ ಪಾಲ್ತಿಮಾರಿನಿಂದ ದಾಮಾರು ರಸ್ತೆ ಕಾಣಲು ಪ್ರಾರಂಭ. ಆ ತಾರು ರಸ್ತೆಯಲ್ಲಿ ದಿನಕ್ಕೆ ಎರಡು ಮೂರು ಬಸ್ಸುಗಳು ಓಡಾಡುತ್ತಿದ್ದವು. ಆ ತಾರು ರಸ್ತೆ ಕಲ್ಲಡ್ಕ ಹಾಗೂ ವಿಟ್ಲ ಎಂಬ ಊರುಗಳ ನಡುವಿನ ಸಂಪರ್ಕ ರಸ್ತೆ. ಬಸ್ಸುಗಳ ರಾಷ್ಟ್ರೀಕರಣ ಆದ ಬಳಿಕ ಕೆ.ಎಸ್.ಆರ್.ಟಿ.ಸಿ.ಯ ಕೆಂಪು ಬಸ್ಸೊಂದು ಬೆಳಿಗ್ಗೆ ೮.೩೦ಕ್ಕೆ ಸರಿಯಾಗಿ ಅಲ್ಲಿಗೆ ಬರಲು ಪ್ರಾರಂಭವಾಯಿತು. ಅದು ಜನರ ಬಾಯಲ್ಲಿ ಶಾಲಾ ಬಸ್ಸು. ಆ ಬಸ್ಸು ಸುಲೇಮಾನ್ ಬ್ಯಾರಿಯ ಅಂಗಡಿ ಎದುರು ನಿಲ್ಲುತ್ತಿತ್ತು.

ಸುಲೇಮನ ಅಂಗಡಿ ಎಂದರೆ ಒಂದು ರೀತಿ ಅವನ ಮನೆ ಜಗಲಿ. ಹಿಂದೆ ಮನೆ. ಮುಂದೆ ಒಂದು ಕೋಣೆಯಲ್ಲಿ ಸಣ್ಣ ಪುಟ್ಟ ದಿನಸಿ ಅಂಗಡಿ. ಅದರ ಪಕ್ಕಕ್ಕೆ ಒಂದು ರೂಮಲ್ಲಿ ಚಹಾದ ಹೋಟೆಲು. ಅವುಗಳ ಎದುರು ಮನೆಯ ಜಗಲಿಯ ಹಾಗೆ ಒಂದು ಜಗಲಿ, ಅಲ್ಲಿ ಬೆಂಚುಗಳು. ನಾವು ವಿದ್ಯಾರ್ಥಿಗಳು, ಊರವರೆಲ್ಲಾ ಬಸ್‌ಸ್ಟಾಂಡಲ್ಲಿ ಇದ್ದ ಹಾಗೆ ಆ ಬೆಂಚಲ್ಲಿ ಕೂತಿರುತ್ತಿದ್ದೆವು. ಊರ ಹಿರಿಯರು ಬಂದಂತೆ ಒಬ್ಬೊಬ್ಬರಾಗಿ ಎದ್ದು ಹಿರಿಯರಿಗೆ ಕೂರಲು ಆ ಬೆಂಚುಗಳಲ್ಲಿ ಅನುವು ಮಾಡಿಕೊಡುತ್ತಿದ್ದೆವು. ಅದರ ಎದುರು ಭಾಗದ ಮಾಡಿನ ಬದಿಯಲ್ಲಿ ಹುಡುಗಿಯರು ನಿಲ್ಲುವುದು ಅಥವಾ ಹೋಟೆಲಿನ ಎದುರು ಭಾಗದ ಬೆಂಚಲ್ಲಿ ಹುಡುಗಿಯರು ಕೂರುವುದು. ಅಂದರೆ ಸುಲೇಮನ ಅಂಗಡಿಯ ಜಗಲಿಯ ಒಂದು ಭಾಗ ಹುಡುಗರಿಗೆ ಇನ್ನೊಂದು ಭಾಗ ಹುಡುಗಿಯರಿಗೆ. ನಾನು ಹೈಸ್ಕೂಲಿಗೆ ಹೋಗುತ್ತಿದ್ದಾಗ ಸುಲೇಮನ ಅಂಗಡಿಗೆ ಬರುತ್ತಿದ್ದ ಬಹುತೇಕ ಎಲ್ಲಾ ವಿದ್ಯಾರ್ಥಿಗಳೂ ಹಿಂದೂಗಳು. ನಮ್ಮ ಊರಿನಿಂದ ಉಮ್ಮರ್ ಶಾಫಿ ಎಂಬ ಒಬ್ಬ ಮುಸ್ಲಿಂ ಹುಡುಗ ಮಾತ್ರ ಹೈಸ್ಕೂಲಿಗೆ ಬರುತ್ತಿದ್ದ. ಹೆಣ್ಣು ಮಕ್ಕಳಲ್ಲಿ ಮುಸ್ಲಿಂ ಹುಡುಗಿಯರು ಇದ್ದುದು ನನಗೆ ನೆನಪಿಲ್ಲ.

ಆ ಸುಲೇಮ ಬ್ಯಾರಿ ಬಹು ಗೌರವಸ್ಥ. ಊರಿನ ಜನರಿಗೆ ಅವನ ಬಗ್ಗೆ ಅಪಾರ ನಂಬಿಕೆಯೂ ಇತ್ತು. ಹೆಣ್ಣು ಮಕ್ಕಳು ಅದಾಗ ಹೈಸ್ಕೂಲಿಗೆ ಹೋಗಲು ಬಸ್ಸು ಹಿಡಿಯತೊಡಗಿದ್ದರು. ಪಡ್ನೂರು ಗ್ರಾಮದಿಂದ ವಿಟ್ಲಕ್ಕೆ ಎಂಟು ಮೈಲು ನಡೆದುಹೋಗುವ ಬದಲು ಪಾಲ್ತಿಮಾರಿಗೆ ನಡೆದು ಅಲ್ಲಿಂದ ಮೂರು ಮೈಲು ದೂರ ವಿಟ್ಲದವರೆಗೆ ಬಸ್ಸಲ್ಲಿ ಹೋಗಬಹುದಾಗಿತ್ತು. ಸಂಜೆ ಹಿಂತಿರುಗುವಾಗ ಯಾವುದೇ ಕಾರಣಕ್ಕೆ ತಡವಾದರೆ, ಬಸ್ಸು ಬಾರದಿದ್ದರೆ ಅಥವಾ ಹಾಗಾದರೆ ಹೆಣ್ಣು ಮಕ್ಕಳಾದರೂ ಸುಲೇಮನ ಅಂಗಡಿಯಲ್ಲಿ ನಿಲ್ಲಿ ಎಂದು ಹೇಳುತ್ತಿದ್ದರು. ಒಂದೆರಡು ಬಾರಿ ಹುಡುಗಿಯರಿಗೆ ತೊಂದರೆ ಆದಾಗ ಸುಲೇಮಾ ಒಳಹೋಗಿ ಹೇಳಿ ಅವನ ಮನೆ ಹೆಂಗಸರು ಬಂದು ಹುಡುಗಿಯರನ್ನು ಕರಕೊಂಡು ಹೋಗಿ ಉಪಚರಿಸಿದ್ದು ನನಗಿನ್ನೂ ನೆನಪಿದೆ.

ವಿಟ್ಲದಲ್ಲಿ ನನ್ನ ತಾಯಿಯ ಚಿಕ್ಕಮ್ಮನ ಮನೆ ಇತ್ತು. ಒಂದೊಂದು ಬಾರಿ ನನ್ನ ತಾಯಿ ಅಲ್ಲಿಗೆ ಹೋಗುವ ಕ್ರಮ ಇತ್ತು. ಚಳಿಗಾಲದಲ್ಲಿ ಕತ್ತಲು ಬೇಗ. ಸಂಜೆ ಆರು ಗಂಟೆ ಬಸ್ಸಿಗೆ ಅಲ್ಲಿ ಇಳಿದು ಬಿ.ಸಿ. ರೋಡಿನಿಂದ ಬರಬೇಕಾಗಿದ್ದ ನನ್ನ ತಂದೆಯವರ ಬಸ್ಸು ಬರುವವರೆಗೆ ನನ್ನ ತಾಯಿ ಸುಲೇಮನ ಅಂಗಡಿ ಎದುರು ಕಾದು ನಿಲ್ಲುವುದು ಇತ್ತು. ಹಾಗೆಲ್ಲಾದರೂ ನನ್ನ ತಂದೆಯವರು ಬರಬೇಕಾಗಿದ್ದ ಬಸ್ಸು ಹತ್ತು ಅಥವಾ ಇಪ್ಪತ್ತು ನಿಮಿಷ ತಡವಾಗಿ ಹೋಗುವುದೂ ಇತ್ತು. ಅಂತಹ ಸಂದರ್ಭಗಳಲ್ಲಿ ಸುಲೇಮನ ಮನೆ ಒಳಗಿನಿಂದ ಹೆಂಗಸರು ಬಂದು ಅಂಗಡಿ ಪಕ್ಕದಲ್ಲಿ ಹಳೆಮನೆ ಬಾಗಿಲು ತೆಗೆದು ನನ್ನ ತಾಯಿಯನ್ನು ಅಲ್ಲಿ ಕುಳ್ಳಿರಿಸಿ ನನ್ನ ತಂದೆಯವರ ಬಸ್ಸು ಬರುವವರೆಗೂ ತಾಯಿಯ ಜೊತೆ ಇರುತ್ತಿದ್ದರು. ಊರಿನ ಎಲ್ಲಾ ಹೆಣ್ಣುಮಕ್ಕಳಿಗೂ ಹೆಂಗಸರಿಗೂ ಅವರವರ ಸಂದರ್ಭಕ್ಕೆ ಅನುಕೂಲವಾಗಿ ಸುಲೇಮಾನ ಮನೆಯಿಂದ ಸಹಾಯ ಸಿಗುತ್ತಿತ್ತು.

ಬ್ರಾಹ್ಮಣರು ಯಾರೂ ಸುಲೇಮನ ಹೋಟೆಲಿನಲ್ಲಿ ಚಹಾ ಕುಡಿಯುತ್ತಿರಲಿಲ್ಲ. ಉಳಿದ ಜಾತಿಯವರೆಲ್ಲ ಅಗತ್ಯಕ್ಕೆ ತಕ್ಕಂತೆ, ಚಹಾ ನೀರು ಸೇವಿಸುತ್ತಿದ್ದರು. ಒಬ್ಬ ಬ್ರಾಹ್ಮಣ ಹಿರಿಯರು ತಲೆತಿರುಗಿ ಬಿದ್ದಾಗ ಸುಲೇಮ ನೀರಿಗೆ ಲಿಂಬೆಹುಳಿ ಸಕ್ಕರೆ ಹಾಕಿ ಕುಡಿಸಿದ ಒಂದು ಸಂದರ್ಭ ನನಗೆ ನೆನಪಿದೆ. ಉಳಿದಂತೆ ಅಂತಹ ಅವಶ್ಯಕತೆ ಬಿದ್ದರೆ ಬ್ರಾಹ್ಮಣರಿಗೆ ಬೊಂಡ (ಎಳೆನೀರು) ಹಾಗೂ ಬಾಳೆಹಣ್ಣು ನೀಡುತ್ತಿದ್ದ.

ಇಂತಹ ಸುಲೇಮ ಔಷಧ ನೀಡುವುದರಲ್ಲಿ ಎತ್ತಿದ ಕೈ ಎಂದು ಪ್ರಸಿದ್ಧನಾಗಿದ್ದ. ಅವನು ದನಕರು ಪ್ರಾಣಿಗಳಿಗೆ ಮತ್ತು ಕೆಲವೊಂದು ರೋಗಗಳಿಗೆ ಮನುಷ್ಯರಿಗೂ ಔಷಧಿ ನೀಡುತ್ತಿದ್ದ. ವಿಟ್ಲದಲ್ಲಿದ್ದ ಒಂದು ಪುಟ್ಟ ಗೋ-ಆಸ್ಪತ್ರೆ ಬಿಟ್ಟರೆ ಪ್ರಾಣಿಗಳಿಗೆ ಔಷಧಕ್ಕೆ ಬೇರೆಲ್ಲೂ ಆಸ್ಪತ್ರೆಗಳಿರಲಿಲ್ಲ. ಕೊಳ್ನಾಡು, ಕೊಡುಂಗಾಯಿ, ಕೆಲಿಂಜ, ವೀರಕಂಭ, ಕುಕ್ಕಿಲ,. ಕೋಡಪದವು, ದಿವಾಣ, ಮಂಗಿಲ ಪದವಿನವರೆಗೆ ಓಡಾಡುತ್ತಿದ್ದ ಒಬ್ಬ ಬರಿಗಾಲು ಪ್ರಾಣಿ ವೈದ್ಯ ಇದ್ದ. ಆತನ ಹೆಸರು ಮಂಜು ಸಫಲ್ಯ.

ಆ ಮಂಜು ಸಫಲ್ಯ ಹೆಗಲಿಗೆ ಒಂದು ಉದ್ದದ ಚೀಲ ಹಾಕಿಕೊಂಡು ಅದರಲ್ಲಿ ಅನೇಕ ಕುಪ್ಪಿಗಳನ್ನು (ಔಷಧಿಯ ಬಾಟ್ಲಿಗಳನ್ನು) ತುಂಬಿಕೊಂಡು ಓಡಾಡುತ್ತಿದ್ದ. ತಲೆಗೆ ದಪ್ಪಕ್ಕೆ ಎಣ್ಣೆ ತಟ್ಟಿಕೊಳ್ಳುತ್ತಿದ್ದ. ನಾನು ನೋಡುವಾಗ ಅವನ ತಲೆ ಸ್ವಲ್ಪ ಬೋಳಾಗಿತ್ತು. ಒಂದು ಪಚ್ಚೆಬಣ್ಣದ ದೊಡ್ಡ ಕಿಸೆಗಳಿರುವ ಅಂಗಿಯನ್ನು ಯಾವತ್ತೂ ಹಾಕಿಕೊಳ್ಳುತ್ತಿದ್ದ. ಹೆಗಲಿಗೆ ಈ ಔಷಧಿ ಬಾಟಲಿಗಳನ್ನು ನೇಲಿಸಿಕೊಂಡು ಕರೆದಲ್ಲಿಗೆ ಹೋಗಿ ದನಕರುಗಳಿಗೆ ಔಷಧಿ ಕೊಡುತ್ತಿದ್ದ.

ನಮ್ಮ ಮನೆಯಲ್ಲೂ ದನಕರುಗಳ ಕಾಲು ಒತ್ತಿದರೆ, ಬಾಯಿಯಲ್ಲಿ ನೊರೆಕಾರಿ ಬಿದ್ದಾರೆ, ತಲೆ ಅದ್ದ ಹಾಕಿ



ಹಟ್ಟಿಯಲ್ಲಿ ಬಿದ್ದುಕೊಂಡರೆ, ಕರುಹಾಕಿದ ದನ, ಎಮ್ಮೆಗಳಿಗೆ ನಂಜಾದರೆ, ಗದ್ದೆ ಉಳುವ ಎತ್ತು, ಕೋಣಗಳ ಹೆಗಲು ವ್ರಣ ವಾದರೆ, ಗಾಡಿ ಎತ್ತುಗಳ ದಡ್ಡು ಕಟ್ಟಿದ ಕೊರಳಲ್ಲಿ ಗಾಯವಾದರೆ, ತಕ್ಷಣ ಮಂಜು ಸಫಲ್ಯನಿಗೆ ಬುಲಾವು ಹೋಗುತ್ತಿತ್ತು.

ಮಂಜು ಸಫಲ್ಯನ ಔಷಧಿಯಲ್ಲಿ ಗುಣ ಆಗದೇ ಇದ್ದರೆ ವಿಟ್ಲದ ಡಾಕ್ಟರನ್ನು ಕರೆತರುವ ಮೊದಲು ಸುಲೇಮನನ್ನು ಕೇಳುವ ಕ್ರಮ ಇತ್ತು. ಮಂಜು ಸಫಲ್ಯ ತೀರಿಕೊಂಡ ಮೇಲೆ ದನಕರುಗಳ ಔಷಧಿಗೆ ನೇರವಾಗಿ ಸುಲೇಮನಲ್ಲಿಗೆ ಹೋಗುತ್ತಿದ್ದರು. ಸುಲೇಮ ಔಷಧಿಯ ಜೊತೆ ಮಂತ್ರಿಸಿದ ನೂಲು ಕೊಡುವ ಕ್ರಮವೂ ಇತ್ತು.

**ಬೆಂಕಿ–ಬೆಳಕು**

ಒಬ್ಬರ ಮನೆಗೆ
ಬಿದ್ದ ಬೆಂಕಿ
ಮತ್ತೊಬ್ಬರ ಮನೆಗೆ
ಬೆಳಕಾಗುವುದು
ಎಂಥ ವಿಷಾದಕರ ಸತ್ಯ !

ಸಿಪಿಕೆ

ಸುಲೇಮ ಹಾಗೂ ದನಗಳಿಗೆ ಒಂದು ಅವಿನಾ ಸಂಬಂಧ ಇತ್ತು. ಸುಲೇಮನ ಮನೆ ಹೆಸರು ಚಂದ್ರ. ಆ ಹೆಸರು ಅವನ ಬಳಿ ಮೊದಲು ಇದ್ದ ದನದ ಹೆಸರು. ಸುಲೇಮ ಮೊದಲಿಗೆ ಸಾಕಿದ್ದು ಒಂದು ದನ. ಅದುವೇ ಚಂದ್ರ. ಆ ದನ ಅನೇಕ ಕರುಗಳನ್ನು ಹಾಕಿ, ಅದರ ಹಾಲು ಮಾರಿ, ಅದರ ಹಾಲಿನ ಚಹಾ ಮಾರಿ ತನ್ನ ವ್ಯಾಪಾರ ಕುದುರಿದ್ದು ಎಂದು ಸುಲೇಮಾ ನಂಬಿದ್ದ. ಅದನ್ನವನು ತನ್ನ ಭಾಗ್ಯಲಕ್ಷ್ಮಿ, ತನ್ನ ಪಾಲಿನ ಕಾಮಧೇನು ಎಂದು ತಿಳಿದಿದ್ದ. ಆ ದನದ ಜೊತೆ ಅವ ಸರಾಗ ಮಾತನಾಡುತ್ತಿದ್ದ.

ಸುಲೇಮನ ಮನೆ ಮಾತು ಮಲಯಾಳ. ಚಂದ್ರ ದನ ಹಾಗೂ ಅದರ ಕರುಗಳ ಜೊತೆ ಮಲೆಯಾಳಂನಲ್ಲಿ ಮಾತು. ಅವು ಅವನ ಮನೆ ಮಂದಿಯ ಹಾಗೆ. ಊರ ಗ್ರಾಮಸ್ಥ ರೊಡನೆ ತುಳುವಿನಲ್ಲಿ ಮಾತು. ಇನ್ನು ಕೆಲವು ಹಿರಿಯರ ಜೊತೆ ವಿಶೇಷ ಗೌರವವಾಗಿ ಅಪರೂಪಕ್ಕೆ ಕನ್ನಡ. ದನದ ಜೊತೆ ಅವ ಯಾವತ್ತೂ ಎಲ್ಲಿಯೂ ಮಾತಾಡಬಲ್ಲ.

ಆ ದನ ದಿನಕ್ಕೆ ಎರಡು ಬಾರಿ ಅವನ ಅಂಗಡಿಗೆ ಬರುತ್ತಿತ್ತು. ಬೆಳಿಗ್ಗೆ ಒಮ್ಮೆ ಅದು ಜಗಲಿಯಲ್ಲಿ ಸೀದಾ ಬಂದು ಅವನ ಜಿನಸಿ ಅಂಗಡಿಯ ಗಲ್ಲಕ್ಕೆ ತಲೆ ಇಡಬೇಕು. ಆಗ ಅವ ಅದರ ಜೊತೆ ಮಾತಾಡುತ್ತಾ ಅದಕ್ಕೆ ಒಂದು ಬನ್ಸ್ ಕೊಟ್ಟು ಕೊರಳು, ತಲೆ ತುರಿಸಿ, ಆಯಿತು ಇನ್ನು ಹೋಗು ಎನ್ನಬೇಕು. ಸಂಜೆಯೂ ಒಮ್ಮೆ ಹಾಗೆ. ಆ ದನ ಅವನ ಅಂಗಡಿಗೆ ಬಂದಾಗ ಬಸ್ಸಿಗೆ ಕಾಯುವ ಎಲ್ಲರೂ ಬದಿಗೆ ಸರಿದು ಅದಕ್ಕೆ ಜಾಗ ಬಿಡುತ್ತಿದ್ದರು.

ಆ ದನ ಅವನಿಗೆ ಒಂದು ರೀತಿ ದೇವರ ಹಾಗೆ. ಚಂದ್ರ ತೀರಿಕೊಂಡ ಮೇಲೆ ಮನೆಯ ಪಕ್ಕದಲ್ಲೇ ಅದನ್ನು ಹೂಳಿ ಅದಕ್ಕೊಂದು ಸಮಾಧಿ ಕಟ್ಟಿದ. ಅದಕ್ಕೆ ಅವನದ್ದೇ ಆದ ರೀತಿಯ ಒಂದು ಪೂಜೆಯೂ ಇದೆ. ಬಹುಶಃ ಈಗಲೂ, ಸುಲೇಮಾನ ನಂತರವೂ, ಅವನ ಮಕ್ಕಳು ಅವರದ್ದೇ ಆದ ರೀತಿಯ ಪೂಜೆ ಮುಂದುವರಿಸಿದ್ದಾರೆ. ಅದರ ವಿವರ ನನಗೆ ಈಗ ತಿಳಿದಿಲ್ಲ. ಅದನ್ನು ಹೋಲಿಸುವುದಿದ್ದರೆ ದರ್ಗಾದ ಉರುಸ್‌ಗಳಿಗೆ ಹೋಲಿಸಬಹುದು. ಸುಲೇಮ ಹಾಗೂ ಅವನ ಕುಟುಂಬದವರಿಗೆ ಅದೊಂದು ಪವಿತ್ರವಾದ ಗೋರಿ. ನನ್ನ ಕಣ್ಣಿಗೆ ಬಾಲ್ಯದಲ್ಲಿ ಆ ಚಂದ್ರ ದನ ದೊಡ್ಡ ಕೆಚ್ಚಲಿನ, ಬಹಳ ಹಾಲು ನೀಡಬಲ್ಲ, ಚಂದದ ಗಂಗೆದೊಗಲಿನ, ಗೆಂದ ಬಣ್ಣದ ಸುಂದರಸಿಂಧಿ ಜಾತಿಯ ಹಸುವಿನಂತೆ ತೋರುತ್ತಿತ್ತು. ನಮ್ಮ ಊರಿನಲ್ಲಿ, ಆ ದನ ಸುಲೇಮನ ಮಗಳು, ಅದರ ಕರುಗಳೆಲ್ಲಾ ಸುಲೇಮನ ಮೊಮ್ಮಕ್ಕಳು ಎಂದು ಪ್ರೀತಿಯಿಂದ ಹೇಳುತ್ತಿದ್ದರು.

ಸುಲೇಮ ದಿನಸಿ ಅಂಗಡಿ, ಸಣ್ಣ ಚಹಾ ಹೋಟೆಲ್, ಸ್ವಲ್ಪ ಬೀಡಿ ಅದು ಇದು ಎಂದು ವ್ಯಾಪಾರ ಮಾಡಿ ತಕ್ಕಮಟ್ಟಿನ ಅನುಕೂಲವಂತನಾದ, ಊರಿನ ದೊಡ್ಡ ಜಮೀನ್ದಾರರಂತೆ ಶ್ರೀಮಂತ ಅಲ್ಲದಿದ್ದರೂ ಅನುಕೂಲವಾಗಿದ್ದ. ಮಕ್ಕಳೂ ಬೆಳೆದು ಹೋಟೆಲ್, ದಿನಸಿ ವ್ಯಾಪಾರ ಮುಂದುವರಿಸಿದರು. ಹೀಗಿರುವಾಗ ವಯಸ್ಸಾಗಿ ಚಂದ್ರ ದನ ತೀರಿಹೋಯಿತು. ಮೊದಲೇ ಹೇಳಿದ ಹಾಗೆ ಅದಕ್ಕೊಂದು ಸಮಾಧಿ ಪೂಜೆ ಇತ್ಯಾದಿ ಆಯಿತು.

ತನ್ನ ಇಳಿ ವಯಸ್ಸಿನಲ್ಲಿ ಸುಲೇಮನಿಗೆ ಆ ದನದ ಹೆಸರಿನಲ್ಲಿ ಊರಿನ ಜನಕ್ಕೆ ಉಪಕಾರವಾಗುವ ಒಂದು ಉತ್ತಮ ಕೆಲಸವನ್ನು ಮಾಡಬೇಕು ಅನಿಸಿತು. ಅವನ ಮನೆಯಿಂದ ಎರಡು ಫರ್ಲಾಂಗ್ ದೂರದಲ್ಲಿ ಕೆಲಿಂಜದ ಎಲಿಮೆಂಟರಿ ಸರ್ಕಾರಿ ಶಾಲೆ ಇದೆ. ಸ್ವಾತಂತ್ರ್ಯ ಉತ್ಸವದ ದಿನ ರಾಷ್ಟ್ರೀಯ ಧ್ವಜಾರೋಹಣ ಮಾಡಲು ಅಲ್ಲಿ ಒಂದು ಗಳು ಹಾಕಿ ಕಷ್ಟಪಡುತ್ತಿದ್ದರು. ವ್ಯವಸ್ಥಿತವಾದ ಒಂದು ಧ್ವಜಸ್ತಂಭ ಆ ಶಾಲೆಯಲ್ಲಿ ಇರಲಿಲ್ಲ.

ಸುಲೇಮ ಹೈಸ್ಕೂಲು ಕೂಡ ಓದಿದವನಲ್ಲ. ರಾಷ್ಟ್ರ, ದೇಶ ಇತ್ಯಾದಿ ಭಾಷಣ ಮಾಡಿದವನೂ ಅಲ್ಲ. ಆದರೆ ರಾಷ್ಟ್ರಧ್ವಜಕ್ಕೆ ಗೌರವ ಸಲ್ಲಿಸಲು ಶಾಲೆಯಲ್ಲಿ ಒಂದು ಉತ್ತಮ ಧ್ವಜಸ್ತಂಭ ಇರಬೇಕು. ಧ್ವಜವಂದನೆಗೆ ಅದು ಅನುಕೂಲ ಆಗುವ ಹಾಗೆ ಇರಬೇಕು ಎಂದು ಅವನಿಗೆ ಅನಿಸಿತು. ತನ್ನ ಉಳಿತಾಯದ ದುಡ್ಡಿನಲ್ಲಿ ತಾನೇ ಸ್ವತಃ ಕೆಲಿಂಜದ ಶಾಲೆಗೆ ಒಂದು ಧ್ವಜಸ್ತಂಭವನ್ನು ತನ್ನ ದನ ಚಂದ್ರನ ಹೆಸರಿನಲ್ಲಿ ಕಟ್ಟಿಸಿಕೊಟ್ಟ. ಅದನ್ನು ಶಾಲೆಗೆ ಕಟ್ಟಿಸಿಕೊಟ್ಟ ಸಂದರ್ಭದಲ್ಲಿ ಕರಾವಳಿ ಪತ್ರಿಕೆ 'ಉದಯವಾಣಿ'ಯ ಒಳಗಿನ ಪುಟದಲ್ಲಿ ಒಂದು ಪುಟ್ಟ ವರದಿ ಬಂದಿತ್ತು. ಅದು ಬಹುಶಃ ೧೯೭೦ರ ದಶಕದ ಕೊನೆಗೆ.

ಆ ವರದಿ ನೋಡಿ ಊರಿಗೆ ಹೋಗಿದ್ದಾಗ ನಾನು ಸುಲೇಮನಲ್ಲಿ ಮಾತಾಡಿದೆ. ಎಲ್ಲಾ ಮಕ್ಕಳೂ ರಾಷ್ಟ್ರಧ್ವಜಕ್ಕೆ ವಂದನೆಯನ್ನು ಚಂದಕ್ಕೆ ಮಾಡಬೇಕು. ಉತ್ತಮ ಧ್ವಜಸ್ತಂಭದಲ್ಲಿ ಧ್ವಜವೇರಿಸಲು ಒಂದು ಪುಟ್ಟ ರಾಟೆ ಇತ್ಯಾದಿ ಇರುವುದರಿಂದ ಬಹಳ ಸುಲಭವಾಗಿ ಚಂದಕ್ಕೆ ಧ್ವಜವೇರಿಸಬಹುದು. ಧ್ವಜವಂದನ ಕಾರ್ಯಕ್ರಮ ಮಕ್ಕಳಿಗೆ ಸ್ಫೂರ್ತಿ ತುಂಬುವ ಹಾಗಿರಬೇಕು ಇತ್ಯಾದಿ ಮಾತು ಹೇಳಿದ. ಚಂದ್ರ ದನದ ಹೆಸರು ಯಾಕೆ ಎಂದು ಕೇಳಿದೆ. ಅದರಿಂದಲೇ ನಾನು ಬೆಳೆದದ್ದು. ಅದಕ್ಕೆ ಚಂದ್ರನ ಹೆಸರು ಹಾಕಿದ್ದು ಎಂದು ಹೇಳಿದ.

ಸುಲೇಮನ ಸ್ವಭಾವದಲ್ಲೆ ಒಂದು ಸಾಮರಸ್ಯ ಇತ್ತು. ಊರಿನ ಎಲ್ಲಾ ಜಾತಿ, ಧರ್ಮದವರ ಜೊತೆ ಸ್ನೇಹದ ಸಂಬಂಧ ಇತ್ತು. ಹಿಂದೂಗಳಲ್ಲಿ ಬ್ರಾಹ್ಮಣರು ಹಾಗೂ ಇತರ ಎಲ್ಲಾ ಜಾತಿಯವರೂ ಸುಲೇಮನ ಅಂಗಡಿಗೆ ಹೋಗುತ್ತಿದ್ದರು. ನಮ್ಮ ಊರಲ್ಲಿ ಕ್ರಿಶ್ಚಿಯನ್ನರು ಬಹಳ ಕಮ್ಮಿ. ನನ್ನ ಕ್ಲಾಸಲ್ಲಿ ಇತರ ಮಂತೆರೋ ಎಂಬ ಒಬ್ಬ ಕ್ರಿಶ್ಚಿಯನ್ ಸಹಪಾಠಿ ಇದ್ದ. ಅವನ ಅಣ್ಣ ಬಹಳ ಉತ್ತಮ ವಾಲೀಬಾಲ್ ಆಟಗಾರ. ಸಂಜೆ ಕೋಡಪದವಿನ ಮೈದಾನಿನಲ್ಲಿ ಪೋಕು ಬ್ಯಾರಿ ಎಂಬ ಇನ್ನೊಬ್ಬ ಕೂಡ ವಾಲೀಬಾಲ್ ಆಡುತ್ತಿದ್ದ. ಲಕ್ಷ್ಮಣ, ಗುಡ್ಡಪ್ಪ ಮೊದಲಾದ ಇತರರೂ ಇದ್ದರು. ಇತರನ ಅಣ್ಣ ಹಾಗೂ ಪೋಕುಬ್ಯಾರಿ ಉತ್ತಮ ದೋಸ್ತಿಗಳು. ಅವರು ಆಗಾಗ ಪಾಲ್ತಿಮಾರಿನ ಸುಲೇಮ ಬ್ಯಾರಿಯ ಹೋಟೆಲ್‌ವರೆಗೆ ಬಂದು ಒಂದೊಂದು ಸಿಂಗಲ್ ಚಾ ಕುಡಿಯುವ ಕ್ರಮ ಇತ್ತು.

ಆ ದಿನಗಳಲ್ಲಿ ಕೋಮು ಹಿಂಸೆ ಸುದ್ದಿ ಇರಲೇ ಇಲ್ಲ ಎಂದಲ್ಲ. ಕಲ್ಲಡ್ಕದಲ್ಲಿ ಆಗಾಗ ಹಿಂದೂ-ಮುಸ್ಲಿಂ ವೈಮನಸ್ಯ, ಸಣ್ಣ ಪುಟ್ಟ ಇರಿತ ಹಿಂಸೆ ನಡೆಯುತ್ತಿತ್ತು. ಆದರೆ ಅದೆಲ್ಲ ಯಾಕೆ ಬೇಕು, ಆ ಗಲಾಟೆ ಯಾಕೆ ಎಂದು ಕೆಲವು ಹಿರಿಯರು ಸುಲೇಮನ ಅಂಗಡಿ ಯಲ್ಲಿ ಅವನ ಜೊತೆಯೇ ಚರ್ಚಿಸುತ್ತಿದ್ದರು. ಶಿವ ಭಂಡಾರಿ ಎಂಬೊಬ್ಬ ಕ್ಷೌರಿಕ ಇದ್ದ. ಅವನಿಗೆ ರಾಜಕೀಯ ತಿಳುವಳಿಕೆ ಇತ್ತು. ಅವ ಒಮ್ಮೊಮ್ಮೆ ಸುಲೇಮನೊಡನೆ ಈ ಗಲಾಟೆ ಯಾಕೆ ಎಂದು ಪೇಪರಿನಲ್ಲಿ ಸುದ್ದಿ ಓದಿ ಚರ್ಚಿಸುತ್ತಿದ್ದ. ಕೈಯಲ್ಲೊಂದು ಪುಟ್ಟ ಕ್ಷೌರದ ಪೆಟ್ಟಿಗೆ ಹಿಡಿದುಕೊಂಡು ಹಳ್ಳಿಯ ಮನೆಗಳಿಗೆ ಹೋಗಿ ಶಿವ ಭಂಡಾರಿ ಕ್ಷೌರ ಮಾಡುತ್ತಿದ್ದ. ಅವನ ಮನೆ ಸುಲೇಮನ ಅಂಗಡಿಯಿಂದ ಅರ್ಧಮೈಲು ದೂರದಲ್ಲಿತ್ತು.

ಈ ಸುಲೇಮ ನೆನಪಾದಾಗಲೆಲ್ಲಾ ನನಗೆ ಸಹಬಾಳ್ವೆಯ ನೆನಪಾಗುತ್ತದೆ. ಅವನು ಚರ್ಮರೋಗಗಳಿಗೆ ಔಷಧ ಕೊಡುತ್ತಿದ್ದ. ಅವನ ಮಕ್ಕಳೂ ಅವನಿಂದ ಆ ಔಷಧ ಗಳನ್ನು ಕಲಿತಿದ್ದರು. ಎಲ್ಲಾ ಜಾತಿ, ಧರ್ಮದವರೂ ಅವನಲ್ಲಿಗೆ ಔಷಧಿಗೆ ಹೋಗು ತ್ತಿದ್ದರು. ಆ ಊರಿನ ಎಲ್ಲಾ ಮನೆಗಳ ಮಕ್ಕಳು, ಮೊಮ್ಮಕ್ಕಳು ಎಲ್ಲಿದ್ದಾರೆ, ಏನು ಮಾಡುತ್ತಾರೆ ಎಂಬುದು ಅವನಿಗೆ ತಿಳಿದಿರುತ್ತಿತ್ತು. ಅವನಿಗೆ ಔಷಧದ ದೃಷ್ಟಿಯಿಂದ ಕಾಸರಗೋಡಿನ ವಿಶೇಷ ಸಂಪರ್ಕ ಇತ್ತು. ಕಾಸರಗೋಡಿನ ಹಿಂಸೆ ಓದಿದಾಗ ಊರಲ್ಲಿ ಸಹಬಾಳ್ವೆಯಲ್ಲಿದ್ದ ಈ ವಾತಾವರಣ ನನಗೆ ನೆನಪಾಗುತ್ತಿತ್ತು. ನಮ್ಮ ಊರಲ್ಲಿ ಆರ್.ಎಸ್.ಎಸ್. ಶಾಖೆ ಪ್ರಾರಂಭ ಆದ ಬಳಿಕವೂ ಆ ಶಾಖೆಗೆ ಹೋಗುತ್ತಿದ್ದ ಈಶ್ವರ ಎಂಬ ಒಬ್ಬ ಮತ್ತು ಖಾದ್ರಿ ಎಂಬ ಇನ್ನೊಬ್ಬ ಉತ್ತಮ ಸ್ನೇಹಿತರಾಗೇ ಇದ್ದರು. ಖಾದ್ರಿ ನಮ್ಮ ಊರು ಬಿಟ್ಟು ಇನ್ಯಾವುದೋ ಊರಿಗೆ ಹೋದ ಬಳಿಕ ಏನಾದ ಎಂಬುದು ನನಗೆ ತಿಳಿದಿಲ್ಲ.

(ಮುಂದುವರಿಯುತ್ತದೆ)

ಎಸ್. ಆರ್. ವಿಜಯಶಂಕರ
ಸಿ-೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೮ನೇ ಮುಖ್ಯರಸ್ತೆ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

# ಹೀಗೊಂದು ಮಾನವ ನೆಲೆಯ ಅನುಭೂತಿ



ಸುಳಿಸುಳಿಯಾಗಿ ಬೀಸುವ ಬೆಳಗಿನ ಚಳಿಯಲ್ಲೂ ಕಾವುಣಿಸುವ ರಾಷ್ಟ್ರೀಯ ಹೆದ್ದಾರಿಯಲ್ಲಿ ಬೆಂಗಳೂರಿನ ದಾರಿ ಸಾಗಿದಂತೆಲ್ಲ, ಬರಡಾಗಿ ಕಾಣುವ ಹಳ್ಳಿಗಳನ್ನು ಹಿಂದಿಕ್ಕಿ ಹೋದರೆ, ಮೊದಲ ನೋಟಕ್ಕೇ ಬೆಂಗಳೂರೆಂಬ ಮಾನವನೆಲೆ ಅಗಾಧವಾಗಿ ಬೆಳೆದಿರುವುದು ಕಾಣದೆ ಇರದು. ಹಿಂದೊಮ್ಮೆ ವೈಭವೀಕರಿಸಿದ್ದ ಉದ್ಯಾನ ನಗರಿಯನ್ನು ಕಾಂಕ್ರೀಟ್ ಕಾಡನ್ನಾಗಿಸಿದ ಅಸಂಖ್ಯ ಆಕರ್ಷಕ ಕಟ್ಟಡಗಳೂ, ಕೊಳಚೆಗೆ ಕಾರಣವಾದ ಜೋಪಡಿ ಪಟ್ಟಿಗಳೂ ಮತ್ತು ಅಲ್ಲಿನ ಸಂದಿಗೊಂದಿಗಳ ಮೌಳಿ ದನ, ಕುರಿ, ಕೋಳಿ, ಹಂದಿಗಳಲ್ಲದೇ ಬೀದಿನಾಯಿ-ಡಾಬರ್ ಮನ್‌ಗಳ ಜೊತೆಗೆ ಪ್ರಕೃತಿದತ್ತ ಗಾಳಿ, ನೀರು, ಬೆಳಕನ್ನು ಕಲುಷಿತಗೊಳಿಸಿಕೊಂಡು ಹಂಚಿಕೊಳ್ಳುತ್ತಿರುವ ಜನಸಾಗರದ ಸಂಕೀರ್ಣ ಬದುಕೂ ಕಲೆ - 'ಬೆಂಗಳೂರು'. ವಿಜಯನಗರದ ಪತನದ ನಂತರ ಅದರ ಮಾಂಡಲೀಕರಾಗಿದ್ದ ಮಾಗಡಿಯ ಕೆಂಪೇಗೌಡ ಬೆಂಗಳೂರನ್ನು ನಿರ್ಮಿಸಿದ್ದು ಈಗ ಐತಿಹ್ಯ.

ಒಂದೆಡೆ ದಿನವಿಡೀ ಒಸರುವ ನಲ್ಲಿಗಳಿದ್ದರೆ ಇನ್ನೊಂದೆಡೆ, ಒಂದೇ ನಲ್ಲಿಯ ಬಾಯಿಗೆ ಸಾಲು ಹಿಡಿದ ನೂರಾರು ಕೊಡಗಳ ದಾಹ ಹಿಂಗಿಸಲಾಗದ ಸ್ಥಿತಿ. ಹದಗೆಟ್ಟ ರಸ್ತೆಗಳಲ್ಲಿ ಎಲ್ಲೆಂದರಲ್ಲಿ ಬಿಸಾಕುವ ಕಸಮುಸುರೆ, ಪ್ಲಾಸ್ಟಿಕ್ಕುಗಳು. ಹಗಲಿರುಳು ಉರಿಯುವ ಬೀದಿ ದೀಪವನ್ನು ಕೇಳುವವರೇ ಇಲ್ಲಿಲ್ಲ. ಈಗಿನ ಪ್ರಜೆಗಳದ್ದೇ 'ಅಮಲು' ದಾರಿಕೆಯಲ್ಲಿ ಈ ಜಗದ ಪರಿವೆ ಇಲ್ಲದೆ ದಾರಿಯಲ್ಲಿ ಮುದುರಿಬಿದ್ದವರು ಅಲ್ಲಲ್ಲಿ ಕಂಡುಬಂದರೆ, "ಎಲ್ರೂ ಕುಡೀರಿ; ಸರ್ಕಾರಿ ಆದಾಯ ಹೆಚ್ಚಾಗ್ಲಿ" ಎನ್ನುವ ಫರ್ಮಾನು ಹೊರಡಿಸುವ ಮಂತ್ರಿಗಳೂ ಬೆಂಗಳೂರಿನಿಂದಲೇ ಆಡಳಿತ ನಡೆಸುತ್ತಿದ್ದಾರೆ!

ಯಾವುದೇ ಪರಂಪರೆಗೆ ಜೋತುಬೀಳದ ಇಲ್ಲಿನ ಗಗನಚುಂಬಿಗಳಂತೂ ಬೆಂಗಳೂರಿನ ಅನಿಯಂತ್ರಿತ ಬೆಳವಣಿಗೆಗಳಿಗೆ ಸಾಕ್ಷಿಯಾಗಿ ನಿಂತಿವೆ. ಶ್ರೀಮಂತ ಬಡಾವಣೆಗಳಿಗೆ, ವೈಭವೋಪೇತ ಕಟ್ಟಡಗಳಿಗೆ ಸರಿಸಾಟಿಯಾದ ಮೂಲಭೂತ ಸೌಕರ್ಯಗಳಿಲ್ಲ ಎಂಬ ಕೂಗು ಮೇಲ್ವರ್ಗದ್ದಾದರೆ, ಗಗನಚುಂಬಿಗಳ ನೆರಳು ಸರಿದೆಡೆ ಸೂರು ಕಟ್ಟಿಕೊಂಡ ಕೊಳಚೆ ನಿವಾಸಿಗಳಿಗೆ ಮಾನವಂತರಾಗಿ ಬಾಳಲು ಬೇಕಾದ ಕನಿಷ್ಠ ಸೌಲಭ್ಯಗಳೂ ಇಲ್ಲಿಲ್ಲ. ಸಮಾಜದ ಅಂಚಿನಲ್ಲಿ ಜೀವ ಸವೆಸುವ ಬಡಜನರು ಪಡುವ ಆತಂಕದ ಕ್ಷಣಗಳಿಗೆ ಸ್ಪಂದಿಸಲು ಒಂದು ವೇದಿಕೆಯೂ ಇಲ್ಲದಿರುವುದು ಈ ಮಹಾನಗರದ ದುರಂತ. ನಾವಿಡುವ ಪ್ರತಿ ಹೆಜ್ಜೆಗೂ ಒಡೆದು ಕಾಣುವ ಸಾಮಾಜಿಕ ಸಂಘರ್ಷದಲ್ಲಿ ಮೂಗು ತೂರಿಸಲು ಇಲ್ಲಿನ ಬಹಳಷ್ಟು ಜನರಿಗೆ ಸಮಯವಿಲ್ಲ. ಭಾವನೆಗಳು ಸತ್ತಂತೆ ಕಾಣುವ ಅವರ ಮಾತುಗಳಲ್ಲಿ ಪ್ರೀತಿಯ ಲವಲೇಶವೂ ಕಾಣಬರುವುದಿಲ್ಲ. ಇವಕ್ಕೆಲ್ಲ ಕಾರಣ ಹುಡುಕಿದರೆ ವ್ಯಾಪಾರೀ ಸಂಸ್ಕೃತಿಯ ಮೇಲಾಟ ಎದ್ದುಕಾಣುತ್ತದೆ. ಮನುಷ್ಯರನ್ನು ವ್ಯಾವಹಾರಿಕವಾಗಿಯಷ್ಟೇ ಸ್ವೀಕರಿಸುವಲ್ಲಿ ಬೆಂಗಳೂರಿನ ಮನುಷ್ಯ, ಮನುಷ್ಯರಿಂದ ದೂರವಾಗುತ್ತಿದ್ದಾನೆ. ಆದರೂ ಒಮ್ಮೊಮ್ಮೆ ಎದುರಿಗೆ ಕಂಡ ಅಪರಿಚಿತನನ್ನು ಎಲ್ಲೋ ನೋಡಿದ ನೆನಪು ಕಾಡುವುದೂ ಇದೆ.

ಸಮೂಹ ಸಾರಿಗೆ ವ್ಯವಸ್ಥೆಗಳಿಲ್ಲದ ಬೆಂಗಳೂರಿನಲ್ಲಿ ಅವ್ಯಾಹತವಾಗಿ ದಾರಿ ಸವೆಸುವ ಆಟೋ-ನಗರ ಸಾರಿಗೆಗಳದ್ದೇ ಭ್ರಾಮಕ ಕಾರುಬಾರಾಗಿದೆ. ಸಾರಿಗೆ ಬಸ್ಸುಗಳಂತೂ ಇತರ ವಾಹನಗಳೊಂದಿಗೆ ಪೈಪೋಟಿ ನಡೆಸಿಯೂ ಅವ್ಯವಸ್ಥೆಯ ಆಗರವಾಗಿವೆ. ಬಣ್ಣ ಬಣ್ಣದ ಬಸ್ಸುಗಳಲ್ಲಿ ಒರಗಿ ಕೂತಾಗ ಕಾಣುವ ಹೊರಗಿನ ವಾಸ್ತವ ಲೋಕ ಒಂದಾದರೆ ಬಸ್ಸಿನ ಒಳಗಿನದು ಇನ್ನೊಂದು. ಒಬ್ಬರು ಬೇಡವೆಂದು ಬಿಟ್ಟ ಉಸಿರು ಇನ್ನೊಬ್ಬರದಾಗುವ ಅನಿವಾರ್ಯತೆಯಲ್ಲಿ, ತರಾವರಿ ಜನರ ಹೊಂದಾಣಿಕೆಯಡಿ ಯಾರಾದರೂ ಕೈ ಮೈ ಕೆರೆದುಕೊಂಡರೆ, ನಮ್ಮದೇ ಕಿಸೆಗಳನ್ನು ತಡವುತ್ತಿದ್ದಾರೇನೋ ಅನಿಸುವುದು ಸುಳ್ಳಲ್ಲ. ಸುಗಮ ಸಂಚಾರದ ಪ್ರಾಥಮಿಕ ಅಗತ್ಯಗಳನ್ನು ಪಾಲಿಸಲಾಗದ ಈ ದಟ್ಟಣೆಯು ಸಮಸ್ಯೆಗಳಿಗೆ ಹೇತುವಾಗಿದೆ. ಮತ್ತವುಗಳ ಆವರ್ತನೆ ಬೆಂಗಳೂರಿನ ಅನಿವಾರ್ಯ ಕೂಡ. ಇಲ್ಲಿನ ದಟ್ಟಣೆಯ ರಸ್ತೆಗಳಲ್ಲಿ ರುಯ್ಯನೆ ಹಾಯುವ ವಾಹನಗಳ ಹೊಡೆತಕ್ಕೆ ಸಿಕ್ಕಿ ನಜ್ಜುಗುಜ್ಜಾಗುತ್ತಿರುವ ಬಣ್ಣದ ಕನಸುಗಳೆಷ್ಟೋ... ಹಲವಾರು ವೈರುಧ್ಯಗಳ ನಡುವೆಯೂ ಬೆಂಗಳೂರಿನ ಬದುಕು ಮುಗುಳ್ನಗುತ್ತಾ ಸಾಗುತ್ತಿರುವುದು ಹೆಚ್ಚುಗಾರಿಕೆಯಾದರೂ ಬದುಕಿನ ಟೊಳ್ಳಿಗೆ ಅವರವರ ನಿಲುವುಗಳೇ ಕಾರಣವೆನ್ನುವುದಕ್ಕೆ ನಿಖರ ದಾಖಲೆಗಳಿವೆ.

ಬದುಕಲು ಹಲವಾರು ಪರ್ಯಾಯ ಮಾರ್ಗಗಳಿರುವ ಬೆಂಗಳೂರಿಗೂ ಕನಸುಗಳು ಬೀಳುತ್ತವೆ... ಇಲ್ಲಿ ಕೆಲವರ ಮಾತು ನಗದಾಗಿ ಮಾರ್ಪಟ್ಟರೆ, ಕೆಲವರದ್ದು ಜನಪರ ಕಾಳಜಿಯಾಗುತ್ತವೆ. ಇನ್ನೂ ಕೆಲವರದ್ದು ಜಗದ ಬೆಳಕಾಗದೆ ಇರುವುದಿಲ್ಲ. ಬದುಕಿನಲ್ಲಿ ಬರೆದಿಡಬೇಕಾದುದು ಇನ್ನೂ ಇರುವಂತೆಯೇ ವಿದ್ಯಾವಂತರ ನಡುವೆ ಬೇಯುವ ಹೆಣ್ಣಿನ ಕನಸುಗಳಿಗಿಲ್ಲಿ ನೇಣಿಗೇರುವ ತವಕ. ವರದಕ್ಷಿಣೆ ಕುರಿತ ಕಾನೂನುಗಳು ನಿಷ್ಕ್ರಿಯವಾಗಿರುವುದನ್ನು ನೋಡಬೇಕೆಂದರೆ ವಿಕ್ಟೋರಿಯಾ ಆಸ್ಪತ್ರೆಯ ಶವಾಗಾರಕ್ಕೆ ಭೇಟಿಕೊಡಬೇಕು..., ವೈದ್ಯಕೀಯ ರಂಗದ ಎಲ್ಲ ಸೌಲಭ್ಯಗಳನ್ನು ಹೊಂದಿರುವ ಈ ನಿವಾಸಿ

**ವಿಶ್ವನಾಥ ಅಡಿಗ**



ನಗರದಲ್ಲಿ ಹುಟ್ಟಿದ ಅಮಾಯಕ ಹೆಣ್ಣು ಸಂತತಿಗಳನ್ನು ಸದ್ದಾಗದಂತೆ ಸುಡುಗಾಡಿಗೆ ಒಯ್ದು, ಕೈಗೆ ಹತ್ತಿದ ಮಣ್ಣನ್ನು ಕೊಡವಿಕೊಳ್ಳುತ್ತಿರುವುದು ಜಗತ್ತಿಗೇ ಗೊತ್ತಿದೆ. ಸರಕಾರದ ಹದ್ದುಬಸ್ತಿಗೆ ನಿಲುಕದ ಅಸಂಖ್ಯಾತ ಆತ್ಮಹತ್ಯೆಗಳೂ ಈ ನಗರದ ಶ್ರೇಯಸ್ಸಾಗಿದೆ.

ಅರೆವಾಸಿ ಸುಂದರ ನಗರದಲ್ಲಿ ವಿಳಾಸ ಹಿಡಿದು ಹೊರಟವರಿಗೆ ಕನ್ನಡ ಜ್ಞಾನವಿದ್ದರೆ ಮಾತ್ರ ಸುರಕ್ಷಿತ. ಬಸ್ಸುಗಳ ನಾಮಫಲಕ, ಮಾರ್ಗಸೂಚಿ, ಬಡಾವಣೆಗಳ ಹೆಸರುಗಳು ಅಚ್ಚ ಕನ್ನಡದಲ್ಲಿ ರಾರಾಜಿಸಿ, ಭಾಷೆ ಬಾರದವರ ಪಡಿಪಾಟಲಿಗೆ ಕಾರಣವಾಗಿವೆ. ಇದೇ ಕಾರಣಕ್ಕಿರಬೇಕು ಕನ್ನಡಿಗರಿಗೆಲ್ಲ ಬೆಂಗಳೂರೆಂದರೆ ಒಂಥರದ ಆತ್ಮೀಯತೆ, ಮತ್ತೆಂಥದೂ ಆಸ್ಥೆ, ಆಸಕ್ತಿಗಳು.

ನವೆಂಬರಿನಲ್ಲಿ ಮಾತ್ರ ಕನ್ನಡಿಗರಾಗಿ ತೋರ್ಪಡಿಸಿ ಕೊಳ್ಳುವ ಬೆಂಗಳೂರಿಗರು ಅಷ್ಟಿಷ್ಟು ಮಾತಾಡಿ ದಣಿಯು ವುದರೊಂದಿಗೆ ಆಗಾಗ ಚಿಗುರುವ ಕನ್ನಡ ಅಭಿಮಾನಕ್ಕೆ ಚಿತ್ರಮಂದಿರಗಳು ನಿಮಿತ್ತವಾಗುತ್ತಿವೆ. ಇದು ಕನ್ನಡಿಗರ ರಾಜಧಾನಿಯಾಗಿದ್ದರೂ, ಕನ್ನಡಿಗರ ಪ್ರಾಬಲ್ಯವಿಲ್ಲಿ ಕುಸಿಯುತ್ತಿದೆ. ವಿಕಾಸದ ಹಾದಿಯಲ್ಲಿ ಬಹುಭಾಷಿಕರ ಊರಾಗಿ ಬೆಳೆದು ಕನ್ನಡಿಗರು ಇಲ್ಲಿ ಅಲ್ಪಸಂಖ್ಯಾಕರಾಗು ತ್ತಿದ್ದಾರೆ. ಇಲ್ಲಿನ ಸಂಸ್ಕೃತಿಯಲ್ಲಿ ಬೆರೆಯದೆ ಗಾಳಿ, ನೀರು, ಮಣ್ಣಿನ ಋಣ ತೀರಿಸುವಲ್ಲಿನ ಅನ್ಯ ಭಾಷಿಕರ ಅಸೀಮ ನಿರ್ಲಕ್ಷ್ಯ ಅಕ್ಷಮ್ಯವಾಗಿದೆ. ಕಣ್ಣೆದುರಿನಲ್ಲೇ ಹಾಳಾಗು ತ್ತಿರುವ ನಾಡುನುಡಿಯ ಪರಂಪರೆಗೆ ಕನ್ನಡಿಗರು ಆತಂಕ ಗೊಂಡರೆ, ಉಳಿದವರು ಸದ್ದಿಲ್ಲದೇ ಬೀಗುತ್ತಾರೆ. ಹತ್ತಾರು ವರ್ಷಗಳಿಂದ ಇಲ್ಲೇ ಇದ್ದರೂ ಬಹಳಷ್ಟು ಪರಭಾಷಿ ಯವರಿಗೆ ಕನ್ನಡದ ಅಗತ್ಯವೇ ಕಂಡುಬರುವುದಿಲ್ಲ. ಬೆಂಗಳೂರಿನಲ್ಲಿ ಕನ್ನಡ ನಶಿಸದಂತೆ ಹೊಸ ಮಾರ್ಗವೊಂದನ್ನು ಸೃಷ್ಟಿಸುವ ಅನಿವಾರ್ಯತೆಯಿದೆ, ಮತ್ತದು ಇವತ್ತಿನ ತುರ್ತು.

ದುಡ್ಡೇ ದೊಡ್ಡಪ್ಪ ಎನ್ನುವ ಬಹುತೇಕ ವ್ಯಾಪಾರಿಗಳು ಎಲ್ಲವನ್ನೂ ಬಲ್ಲವರು. ಜನರ ವ್ಯಾಪಾರಿ ಗುಣಕ್ಕೆ ಬೆಂಗಳೂರಿನ ಮಣ್ಣೆಲ್ಲ ಇಂದು ಹೊನ್ನಾಗಿದೆ. ಜೊತೆಗೆ ಮಾಹಿತಿ-ತಂತ್ರಜ್ಞಾನದ ಜಗತ್ತು ನೀಡುವ ಆಮಿಷಗಳಿಗೆ ಅನೇಕರು ಬಲಿಪಶುಗಳಾಗಿದ್ದಾರೆ. ಸಾಹಿತಿ ಅನಂತ ಮೂರ್ತಿಗಳ ಮಾತೊಂದನ್ನು ಇಲ್ಲಿ ಉಲ್ಲೇಖಿಸಬಹುದು: ''ಅಮೆರಿಕಾದ ಹಗಲು ಅವರಿಗೆ ಅರ್ಥಪೂರ್ಣವಾಗ ಬೇಕೆಂದು ನಮ್ಮ ರಾತ್ರಿಗಳನ್ನು ನಿದ್ದೆ ಇಲ್ಲದೇ ಕಳೆಯುವ ಐಟಿ ನಗರ ಬೆಂಗಳೂರು ಎಂಬುದು ನಮಗೆ ಸಂತೋಷ ದಾಯಕ ಆಗಿರುವುದು ಮನಸ್ಸಿನ ವಿಕಾರದ ಫಲ.'' ಓದಿ ಓದಿ ಮರುಳಾದವರು ಇವರುಗಳಾದರೆ ವಿದ್ಯೆ ಕಲಿತು ಅಮಲ್ದಾರನಾಗಬೇಕಿಲ್ಲ ಎಂಬ ಬದಲಾಗದ ಧೋರಣೆಯು ಶ್ರಮಿಕ ವರ್ಗದ್ದು. ವಿದ್ಯೆಯೆಂಬ ಅಕ್ಷರ ಜ್ಞಾನ ಪಡೆಯುವುದು ಹೊಟ್ಟೆ ಹೊರೆಯಲಿಕ್ಕಾಗಿಯಲ್ಲ, ಅದು ತಮ್ಮ ವಿರುದ್ಧ ನಡೆಯುವ ದೌರ್ಜನ್ಯ, ಅನ್ಯಾಯಗಳನ್ನು ಅರಿತು ಅವುಗಳ ವಿರುದ್ಧ ಹೋರಾಡಲು ಅಗತ್ಯವೆಂಬ ಅರಿವು ಕೆಳಸ್ತರದಲ್ಲಿ ಬೇರೂರಬೇಕಿದೆ.

ನಾಡಿನ ಸರಕಾರ ಇರುವುದು ಈ ಬೃಹತ್ ಊರಿನಲ್ಲಿ ಇರುವ ಸುಂದರ ವಿಧಾನಸೌಧದಲ್ಲಿ, ಅದರ ಖ್ಯಾತಿಗೆ ಕನ್ನಡಿಗರು ಬೀಗುವರು. ಆದರೆ ಸರಕಾರವೆಂದರೆ ಬರಿ ಕಲ್ಲಿನಲ್ಲಿ ಕಟ್ಟಿದ ವಿಧಾನಸೌಧವಲ್ಲ. ಅದು ಜನರಿಂದ, ಜನರಿಗಾಗಿ ಇರುವ ಜನರ ಆಡಳಿತ ವ್ಯವಸ್ಥೆ. ಇಲ್ಲಿ ನ್ಯಾಯವಂತರಿದ್ದಾರೆ. ಹೆಚ್ಚು ಲಂಚಕೋರರೂ ಇದ್ದಾರೆ. ಚೋದ್ಯವೆಂದರೆ ಇಲ್ಲಿನ ಸರಕಾರ ಸದಾ ತನ್ನ ಹಿತಾಸಕ್ತಿಯನ್ನು ಕಾಪಾಡಲು ಮಾತ್ರ ಹೆಣಗುತ್ತಿರುತ್ತದೆ. ವಿಧಾನಸೌಧದಿಂದ ರಾಜ್ಯವ್ಯಾಪಿ ಹರಡುತ್ತಿರುವ ಭ್ರಷ್ಟಾಚಾರ ದಿಂದಾಗಿ ಇಡೀ ವ್ಯವಸ್ಥೆಗೆ ಗೆದ್ದಲು ಹಿಡಿದಿರುವುದು ಸರ್ವವೇದ್ಯ. ವರುಷದ ಎಲ್ಲಾ ದಿನಗಳಲ್ಲೂ ಒಂದಿಲ್ಲೊಂದು ನೇಮಕಾತಿ, ವರ್ಗಾವಣೆ, ಬಡತಿ, ಅಮಾನತ್ತು, ವಿಚಾರಣೆ, ಮರುನೇಮಕ, ಪಿಂಚಣಿಗಳ ನಿರೀಕ್ಷೆಯಲ್ಲಿ ರಾಜಧಾನಿಗೆ ವಕ್ಕರಿಸುವವರಿಗೆ ಲೆಕ್ಕವಿಲ್ಲ.

ಬೆಂಗಳೂರಿನ ಗಂಡು ಹೆಣ್ಣುಗಳ ಅನುಪಾತದಲ್ಲಿ ಏರುಪೇರಿದ್ದರೂ ಅಸಾಧ್ಯ ಗಿಜಿಗಿಡುವ ಮದುವೆ ಮಂಟಪಗಳು ಇಲ್ಲಿನ ಜನಸಂಖ್ಯೆಗೆ ಪೂರಕವಾಗಿವೆ. ಪುರುಷ ಪ್ರಾಬಲ್ಯದ ಕೋಟೆಗಳನ್ನು ಭೇದಿಸಿ ಇಲ್ಲಿನ ಮಹಿಳೆಯರು ಈಗ ಎಲ್ಲಾ ರಂಗಗಳಲ್ಲೂ ಮೇಲುಗೈ ಮೆರೆಯುತ್ತಿದ್ದಾರೆ. ಲಂಚ ಬೇಡುವುದಿಲ್ಲ, ಕಾಲಹರಣವಿಲ್ಲ ಎಂಬ ಕಾರಣಗಳಿಗಾಗಿ ಮಹಿಳೆಯರನ್ನೇ ನೇಮಿಸಿಕೊಳ್ಳು ವುದರಿಂದ ಅಷ್ಟರಮಟ್ಟಿಗೆ ಬೆಂಗಳೂರಿನ ಯುವಕರು ಕೆಲಸದಿಂದ ವಂಚಿತರು. ಆದರೂ ಪರವಾಗಿಲ್ಲ.

ಮುಸ್ಸಂಜೆಯಲ್ಲಿ ಶುರುವಾದ ಮಳೆ ರಾತ್ರಿಯೆಲ್ಲಾ ಜಿನುಗುವುದು ಬೆಂಗಳೂರಿನ ಮಟ್ಟಿಗೆ ನಿಜ. ಹಳೆಯ ಕೆರೆಗಳನ್ನು ಒಂದೊಂದಾಗಿ ತಿಂದು ತೇಗುತ್ತಿರುವ ಬೆಂಗಳೂರಿಗೆ ದೊಡ್ಡ ಮಳೆ ಹೊಡೆದರಂತೂ, ಅಲ್ಲಲ್ಲಿ ಕಟ್ಟಿಕೊಳ್ಳುವ ಒಳಚರಂಡಿಯು ಬೆಂಗಳೂರಿನ ಬದುಕನ್ನು ಬಗ್ಗಡ ಮಾಡುತ್ತಿದೆ. ಇದೊಂದು ಪ್ಲಾಸ್ಟಿಕ್ ಸಂಸ್ಕೃತಿಯ ಅಪ್ಪಟ ಕೊಡುಗೆ. ಹಾಗೆಯೇ ಅನಿಯಂತ್ರಿತ ಕೈಗಾರಿಕಾ ಬೆಳವಣಿಗೆಯಿಂದ ನಗರದ ಪರಿಸರದ ಮೇಲೆ ಗಾಢವಾದ ಪರಿಣಾಮಗಳಾಗುತ್ತಿವೆ. ಕಟ್ಟುನಿಟ್ಟಾಗಿ ಪಾಲಿಸ ಬೇಕಾದ ಮಾಲಿನ್ಯ ನಿಯಂತ್ರಣವನ್ನು ಅನುಷ್ಠಾನಗೊಳಿಸ ಲಾಗುತ್ತಿಲ್ಲ. ನಗರದ ಕೊಳಚೆ ನೀರನ್ನು ಸಂಸ್ಕರಿಸದೇ ಬಳಸಿದ ಸೊಪ್ಪು, ತರಕಾರಿಗಳು ಬೆಂಗಳೂರಿನಲ್ಲಿ ಕಾಮಾಲೆ ರೋಗಕ್ಕೆ ಕಾರಣವಾಗಿದೆ. ಅಂತೆಯೇ ವಾತಾಯನದಲ್ಲಿ ತುಂಬಿಕೊಳ್ಳುತ್ತಿರುವ ವಾಹನಗಳ ದಟ್ಟ ಹೊಗೆಯು ಉಸಿರಾಟದ ಲಯವನ್ನು ಅಷ್ಟಷ್ಟೇ ಕಿತ್ತುಕೊಳ್ಳುತ್ತಾ ಬೆಂಗಳೂರು ವಾಸಿಗಳ ಅಸ್ತಿತ್ವವನ್ನು ಶೂನ್ಯಗೊಳಿಸು ತ್ತಿರುವುದು ಸುಳ್ಳಲ್ಲ.

ಕಟ್ಟುನಿಟ್ಟಿನ ಋತುಚರ್ಯೆ ಪಾಲಿಸುವ ಬೆಂಗಳೂರು ನಿವೃತ್ತರ ಸ್ವರ್ಗವೆಂದು ಪರಿಭಾವಿಸಲಾಗಿದೆ. ಹೊತ್ತು ಕಳೆಯುವ ಪರಿಕ್ರಮಗಳಲ್ಲಿ ಈ ಮಾಗಿದ ಜೀವಗಳು ತಮ್ಮ ಮಕ್ಕಳ ವರ್ತಮಾನದ ಜೀವನಶೈಲಿಗೆ ಹೊಂದಿಕೊಳ್ಳ ಲಾಗದೆ ಚಡಪಡಿಸುತ್ತವೆ. ಜೀವನದ ಸಂಧ್ಯಾಕಾಲದಲ್ಲಿನ ಏಕಾಂಗಿತನ, ಅನಾದರ, ಅಸಡ್ಡೆಗಳಿಂದ ಈ ವೃದ್ಧರ ಸ್ಥಿತಿ ಗತಿಗಳು ಶೋಚನೀಯವಾಗಿವೆ. ಭಾರತೀಯ ಪರಂಪರೆಗೆ ವ್ಯತಿರಿಕ್ತವಾದ ವೃದ್ಧಾಶ್ರಮಗಳು ಈ ದಿನಮಾನದ ಅನಿವಾರ್ಯವಾಗಿರುವುದು ವಿಪರ್ಯಾಸ. ಇದನ್ನು ಮಗುಚಿಹಾಕಿದರೆ, ಮೂಲಭೂತ ಸೌಕರ್ಯಗಳನ್ನು ಮಾಡಿಕೊಂಡಿರುವ ಕೆಲವು ನಿವೃತ್ತ ದಂಪತಿಗಳು ತಲೆಮಾರಿನ ಅಂತರದ ಕಸಿವಿಸಿಗಳಿಗೆ ರೋಸಿ ಹೋಗಿ, ತಾವೇ ನಿಂತು ಕಟ್ಟಿಸಿಕೊಂಡ ಮನೆಯಿಂದ ತಮ್ಮ ಮಗ ಸೊಸೆ ಮೊಮ್ಮಗುವನ್ನು ಹೊರಹೋಗುವಂತೆ ಒತ್ತಾಯಿಸು ತ್ತಿರುವುದು ವಿಪರೀತದ್ದಾಗಿದೆ. ಈ ನಾಗರಿಕ ನಗರದಲ್ಲಿ ಮುದಿದನ, ಕೊಬ್ಬಿದ ನಾಯಿಗಳೂ ಇಲ್ಲಿನ ಕಸಾಯಿಖಾನೆ ಗಳಿಗೆ ಸಾಲಾಗಿ ಬರುವುದನ್ನು ನೋಡಿದಾಗ ''ಅಯ್ಯೋ'' ಕನ್ನಡಿಗರ ನೆಚ್ಚಿನ ಬೆಂಗಳೂರಿಗೆ ಇಂತಹ ದುರ್ಗತಿಯು ಅನಿವಾರ್ಯವೇ ಎಂಬ ಪ್ರಶ್ನೆಗಳು ಕಾಡದೆ ಇರುವುದಿಲ್ಲ.

ಈ ಮಾಯಾನಗರಿಯ ರಸಾನುಭೂತಿಯಲ್ಲಿ ನಿತ್ಯ ಜಾತ್ರೆಯಂತಿರುವ ವಾಣಿಜ್ಯ ಮಳಿಗೆಗಳಲ್ಲಂತೂ ಅಪ್ಪ ಅಮ್ಮ ಬಿಟ್ಟು ಮತ್ತೆಲ್ಲವೂ ಬಿಕರಿಗಿವೆ. ಒಂದೇ ಬಕೀಟಿನಲ್ಲಿ ಅದ್ದಿ ತೆಗೆವ ತಟ್ಟೆ ಲೋಟದ ತಿಂಡಿಗಾಡಿಗಳಿಗೆ ಮುಗಿ ಬೀಳುವ ಬೆಂಗಳೂರಿಗರಿಗೆ ಇಲ್ಲಿಂದಲೇ ಸಾಂಕ್ರಾಮಿಕ ರೋಗಗಳು ಹಬ್ಬುತ್ತವೆ. ಮುಸ್ಸಂಜೆಯ ಇನ್ನೊಂದು ಸಮಸ್ಯೆ ವೇಶ್ಯಾವಾಟಿಕೆ. ಈ ರೋಗ ವಾಹಕಗಳು ರಾತ್ರಿಯೆಲ್ಲಾ ಪೊಲೀಸರ ನೆರಳಿನಲ್ಲಿ ನಿರಾತಂಕ ಚಾಲನೆ ಯಲ್ಲಿದ್ದು, ಬೆಳಗಾಗುತ್ತಲೇ ಏನೂ ಆಗಿಲ್ಲ ಎಂಬಂತೆ ಎಲ್ಲವೂ ಸ್ತಬ್ಧ. ತಮ್ಮನ್ನು ತಾವು ಕಳೆದುಕೊಳ್ಳುವಲ್ಲಿ ಸಿಗುವ ತೃಪ್ತಿಯಷ್ಟೆ ಈ ವರ್ಗದ್ದಾಗಿದೆ.

ಬೆಂಗಳೂರಿನಂತಹ ಮಹಾನಗರದಲ್ಲಿ ಬೆಳೆದ ಮಗಳು ರಾತ್ರಿ ಹತ್ತು ಗಂಟೆಯಾದರೂ ಮನೆಗೆ ಬಂದಿಲ್ಲ ಎಂದರೆ ಆತಂಕ ಪಡುವುದು ಖಾತ್ರಿ. ಒಂಟಿ ಮಹಿಳೆ ಎಂದಾಕ್ಷಣ ಬಹುತೇಕ ಗಂಡಸರ ಮೆಳ್ಳೆಗಣ್ಣು ಬೆಂಗಳೂರಿಗೇನು ಹೊಸತಲ್ಲ.

ಬೆಂಗಳೂರಿನ ರಾತ್ರಿ ಹಗಲಿಗಿಂತ ಸಂಪೂರ್ಣ ಭಿನ್ನ. ಚಟಗಳಿಗೆ ದಾಸರಾಗಿ ಅಡ್ಡದಾರಿ ಹಿಡಿಯುವ ಯುವ ಜನರ ಓಡಾಟವಂತೂ ಯಾರ ಅಂಕೆಗೂ ಸಿಗುವುದಿಲ್ಲ. ರಾತ್ರಿಯಿಡೀ ಬಾಟಲಿಗಳಿಂದ ಚಿಮ್ಮುವ ಭಂಡ ಧೈರ್ಯವು ಒಂಟಿತನದ ದುಗುಡಗಳಿಗೆ ತಡೆಯೊಡ್ಡೀತು ಎನ್ನುವ ಭ್ರಮೆಯಲ್ಲಿ ಯುವಕರು ತೇಲಾಡುತ್ತಿರುತ್ತಾರೆ. ಇದೇ ಸಮಯದಲ್ಲಿ ಬೆಂಗಳೂರು ಮಾದಕ ದ್ರವ್ಯ ಸಮಾರಾಧನೆಯೊಂದಿಗೆ ನೃತ್ಯಸೇವೆಯಲ್ಲಿ ದಣಿದು ಧನ್ಯವಾಗುತ್ತದೆ. ನಿದ್ದೆಗೆ ಜಾರಿದ ಬೆಂಗಳೂರಿನ ರಾತ್ರಿಗಳು ನಾವಂದುಕೊಂಡಷ್ಟು ಸರಳವಾಗಿಲ್ಲ. ಇಲ್ಲಿನ ಭೂಗತ ಜಗತ್ತು, ಕಾಳಸಂತೆಕೋರರ ಚಟುವಟಿಕೆಗಳಿಗೆ ಇಂಥದೇ ಸಮಯವೆಂಬುದಿಲ್ಲ ಅನ್ನುವ ಮಾತಿಗೆ ಅಧಿಕಾರಸ್ಥರ ಮತ್ತು ದುಡ್ಡಿದ್ದವರ ಕಣ್ಗಾವಲು ಸಾಕ್ಷಿಯಾಗುತ್ತವೆ. ಹಾಡು ಹಗಲಿನಲ್ಲೇ ಪಾತಕ ಜಗತ್ತಿನ ಕೊಲೆ, ಸುಲಿಗೆ, ದರೋಡೆಗಳು ವಿಜೃಂಭಿಸುವ ಬೆಂಗಳೂರೊಂದು ಭೂಗಳ್ಳರ ಸ್ವರ್ಗ. ಇದರಿಂದಾಗಿಯೇ ಇಲ್ಲಿನ ಅನಪೇಕ್ಷಿತ ಗಳಾದ ಚಾಕು, ಮಚ್ಚು, ರಿವಾಲ್ವರುಗಳು ಬೆಂಗಳೂರಿಗೆ ಸದಾ ತಳಕುಹಾಕಿಕೊಂಡಿವೆ.

ಬೆಂಗಳೂರಿನ ಈ ಪಶುಪತಿಗಳನ್ನು ನೆನೆಯುತ್ತಾ ಬನ್ನೇರುಘಟ್ಟದ ಮೃಗಾಲಯ ಪ್ರವೇಶಿಸಿದರೆ ಎದುರಿಗೆ ಕಂಬದ ಮೇಲೊಂದು ಪೆಟ್ಟಿಗೆ ಕಾಣಬರುತ್ತದೆ. ಅದರ ಮೇಲಿನ ನುಡಿಬರಹ ಹೀಗಿದೆ: ''ಜಗತ್ತಿನ ಅತಿ ಕ್ರೂರ ಪ್ರಾಣಿಯನ್ನು ನೋಡಬೇಕಾದರೆ ಈ ಬಾಗಿಲನ್ನು ತೆರೆಯಿರಿ.'' ಕುತೂಹಲದಿಂದ ತೆರೆದರೆ ಒಳಗೊಂದು ಕನ್ನಡಿ!

**ವಿಶ್ವನಾಥ ಅಡಿಗ**
ಶಾಸ್ತ್ರಿ ಬಡಾವಣೆ, ಕೊಟ್ಟೂರು - ೫೮೩ ೧೩೪
ಬಳ್ಳಾರಿ ಜಿಲ್ಲೆ

ಕನ್ನಡ ಸಣ್ಣಕತೆಗಳ ಸಂದರ್ಭದಲ್ಲಿ ಯಾರೂ ಹೇಳಲೇಬೇಕಾದ ಮಾತೆಂದರೆ, ಡಾ॥ ರಾಜಶೇಖರ ನೀರಮಾನ್ವಿ ಶಕ್ತ ಕತೆಗಾರ, ಕೆಲವೇ ಕತೆಗಳನ್ನು ಬರೆದಿದ್ದರೂ ನೆನಪಿನಲ್ಲಿ ಉಳಿಯುವ ಕತೆಗಾರರು ಎಂದು. 'ಹಂಗಿನರಮನೆಯ ಹೊರಗೆ' (೧೯೭೮), 'ಕರ್ಪೂರದ ಕಾಯದಲ್ಲಿ' (೧೯೯೦) ಎರಡು ಕಥಾಸಂಕಲನಗಳು ಪ್ರಕಟವಾಗಿವೆ. ಈ ಸಂಕಲನಗಳಲ್ಲಿ ೧೨ ಕಥೆಗಳಿವೆ. ೧೯೯೦ರ ನಂತರ ಅವರು ಕೆಲವು ಕಥೆಗಳನ್ನು ಬರೆದಿದ್ದಾರೆ. 'ಹಂಗಿನರಮನೆಯ ಹೊರಗೆ' ಎಂಬ ಕತೆಯು ಅನೇಕ ಅಂಥಾಲಜಿಗಳಲ್ಲಿ ಸೇರಿದೆ. ಈ ಕಥೆ ಹಿಂದಿ ಭಾಷೆಯಲ್ಲಿ ಕಿರುತೆರೆಯಲ್ಲಿ ಬಿತ್ತರವಾಗಿದೆ.

ಡಾ॥ ರಾಜಶೇಖರ ನೀರಮಾನ್ವಿ ಅವರ ಕತೆಗಳನ್ನು ಅಸ್ತಿತ್ವವಾದದ ಹಿನ್ನೆಲೆಯಲ್ಲಿ ಗ್ರಹಿಸಬಹುದು. ಕನ್ನಡ ನವ್ಯ ಸಾಹಿತ್ಯಕ್ಕೆ ಆರಂಭದಲ್ಲಿ ಅಸ್ತಿತ್ವವಾದವು ಬೆನ್ನೆಲುಬಾಗಿತ್ತು. ಮೂಲತಃ ವ್ಯಕ್ತಿ, ಸಮಾಜದ ಭಾಗವೇ ಆಗಿದ್ದರೂ ವ್ಯಕ್ತಿ ಕೇಂದ್ರಿತ ಚಿಂತನೆಗೆ ಮಹತ್ವ ನೀಡಲಾಯಿತು. ಅದಕ್ಕೆ ಕಾರಣವೂ ಇದೆ. ಸಮಾಜದಲ್ಲಿ ಮದುವೆ, ಕುಟುಂಬ, ಜಾತಿ, ಧರ್ಮ, ಸಂಘ-ಸಂಸ್ಥೆಗಳು ಸ್ಥಾಪಿತ ಮೌಲ್ಯಗಳನ್ನು ಪೋಷಿಸಿಕೊಂಡುಬರುತ್ತಿವೆ. ವ್ಯಕ್ತಿಗೆ ಆಯ್ಕೆ ಸ್ವಾತಂತ್ರ್ಯವಿಲ್ಲ. ಸಿದ್ಧಗೊಂಡ, ಯಾರೋ ರೂಪಿಸಿದ ಜೀವನ ವಿಧಾನದಲ್ಲಿ ವ್ಯಕ್ತಿ ಬದುಕಬೇಕಾಗಿದೆ. ಇದನ್ನು ಮೀರಿ ಬದುಕಲು, ಹೊಸ ಜೀವನ ವಿಧಾನವನ್ನು ರೂಪಿಸಿಕೊಳ್ಳಲು ವ್ಯಕ್ತಿಗೆ ಸಾಧ್ಯವಾಗುವುದಿಲ್ಲ. ಸಾಧ್ಯಮಾಡಿಕೊಳ್ಳಬೇಕಾದರೆ ವ್ಯಕ್ತಿಗತ ನೆಲೆಯಲ್ಲಿ ಹೋರಾಟ ಮಾಡಬೇಕು. ಪ್ರತಿ ಹೆಜ್ಜೆಗೆ ಅಡ್ಡಿ-ಆತಂಕಗಳು ಎದುರಾಗುತ್ತವೆ. ಹೊಸ ನೈತಿಕತೆಯನ್ನು ನೆಲೆಗೊಳಿಸಲು ವ್ಯಕ್ತಿಗೆ ಕಷ್ಟವಾಗುತ್ತದೆ. ಸ್ಥಾಪಿತ ಮೌಲ್ಯಗಳ ಪರಿಸರದಲ್ಲಿ, ಹುಸಿ ನೈತಿಕತೆಯಲ್ಲಿ ವ್ಯಕ್ತಿ ಬದುಕುತ್ತಿದ್ದಾನೆಂಬ ಅರಿವು ಮೂಡಿದರೂ ಬದುಕುವುದು ಅನಿವಾರ್ಯವಾಗಿ, ಅದನ್ನೇ ಸಮರ್ಥಿಸಿಕೊಳ್ಳುತ್ತ ನಿಜವಾದ ವ್ಯಕ್ತಿತ್ವವನ್ನು ಕಳೆದುಕೊಳ್ಳುತ್ತಾನೆ ಎಂಬುದು ಅಸ್ತಿತ್ವವಾದದ ತಿಳುವಳಿಕೆ. ವ್ಯಕ್ತಿ ಏನು ಆಗಿರುವುದಿಲ್ಲವೋ ಅದು ಆಗಬೇಕು. ಆಗಬೇಕಾದರೆ ಸ್ವತಂತ್ರ ಆಯ್ಕೆ ಮತ್ತು ಅದನ್ನು ಸಮರ್ಥವಾಗಿ ನಿಭಾಯಿಸುವ ಛಲ ಬೇಕು. ಆಗ ನಿಜವಾದ ವ್ಯಕ್ತಿ ಆಗುತ್ತಾನೆ. ಇರುವಿಕೆ ಮುಖ್ಯವಲ್ಲ, ಆಗುವಿಕೆ ಮುಖ್ಯ. ಆಗುವಿಕೆಗಾಗಿ ವ್ಯಕ್ತಿ ತನ್ನ ಕುಟುಂಬ, ಧರ್ಮ, ಬದುಕುವ ಪರಿಸರ, ಸಂಘ-ಸಂಸ್ಥೆ ಎಲ್ಲದರ ವಿರುದ್ಧ ಹೋರಾಡಬೇಕು. ಈ ದಾರಿ ಸರಳವಲ್ಲ. ವ್ಯಕ್ತಿ ಏಕಾಂಗಿಯಾಗುತ್ತಾನೆ; ಹತಾಶನಾಗುತ್ತಾನೆ; ವಿಕ್ಷಿಪ್ತನಾಗುತ್ತಾನೆ; ಉಸಿರುಗಟ್ಟುವ ವಾತಾವರಣದಿಂದ ಹೊರಬರಲು ಹೆಣಗುತ್ತಾನೆ; ನಿಜವಾದ ವ್ಯಕ್ತಿಯಾಗಲು ಪ್ರಾಮಾಣಿಕ ಹೋರಾಟ ಮಾಡುತ್ತಾನೆ. ಸಾಧ್ಯವಾಗದಿದ್ದರೆ ಸಾವಿಗೆ ಶರಣಾಗಲೂ ಹಿಂಜರಿಯುವುದಿಲ್ಲ. ಈ ಹಿನ್ನೆಲೆಯಿಂದ ಡಾ॥ ರಾಜಶೇಖರ

# ನೀರಮಾನ್ವಿ ಕಥೆಗಳು ವ್ಯಕ್ತಿ; ತನ್ನತನದ ಹುಡುಕಾಟ

ನೀರಮಾನ್ವಿ ಅವರ ಕಥೆಗಳನ್ನು ಓದಬಹುದು. ಆದರೆ ಸೂತ್ರಬದ್ಧವಾಗಿ ಗ್ರಹಿಸಲು ಸಾಧ್ಯವಿಲ್ಲ. ಕನ್ನಡ ನವ್ಯ ಕತೆಗಳು ಬೇರೆ ಬೇರೆ ಆಯಾಮಗಳನ್ನು ಪಡೆದಿವೆ. ಡಾ॥ ನೀರಮಾನ್ವಿ ಕತೆಗಳು ವ್ಯಕ್ತಿ ಪ್ರಜ್ಞೆ ಕೇಂದ್ರಿತ ನಿರೂಪಣೆ ಮತ್ತು ಸಮಾಜ ಪ್ರಜ್ಞೆ ಕೇಂದ್ರಿತ ನಿರೂಪಣೆ ಹೊಂದಿವೆ. ಮೊದಲ ಮತ್ತು ಎರಡನೇ ಆಯಾಮಗಳಿಗೆ ಅಸ್ತಿತ್ವವಾದವೇ ಕಾರಣ. ಲೋಹಿಯಾವಾದ, ಸಮಾಜವಾದ ಮತ್ತು ಮಾನವೀಯತೆ ಪ್ರಭಾವ ಈ ಕತೆಗಳಲ್ಲಿ ಕಂಡುಬರುತ್ತದೆ. ವ್ಯಂಗ್ಯ ಎಲ್ಲ ಕಥೆಗಳಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ. ಇದು ಕಥೆಗಳ ಮಿತಿಯೂ, ಶಕ್ತಿಯೂ ಹೌದು.

'ವೃತ್ತ' ಕಥೆ ಶಂಕರಪ್ಪಗೌಡನ ಪ್ರಜ್ಞೆಯಲ್ಲಿ ಬಿಚ್ಚಿಕೊಳ್ಳುತ್ತ ಬೆಳೆಯುತ್ತದೆ. ಗೌಡರು ಅನಿರೀಕ್ಷಿತವಾಗಿ ಸಾವಿಗೀಡಾಗುವ ಮುನ್ನಿನ ಎರಡು ದಿನಗಳ ಕಾಲಾವಧಿಯಲ್ಲಿ ತಮ್ಮ ಬದುಕನ್ನು ಅವಲೋಕಿಸಿಕೊಳ್ಳತೊಡಗುತ್ತಾರೆ. ಈ ಅವಲೋಕನ ಸಹಜ ರೀತಿಯಲ್ಲಿ ನಡೆದಂತೆ ಕಂಡರೂ, ಮಗ ತಂದೊಡ್ಡುವ ಬಿಕ್ಕಟ್ಟುಗಳು ಕಾರಣವಾಗುತ್ತವೆ. ಗೌಡರ ಕೊನೆಗಾಲದಲ್ಲಿ ಜತೆಗಿರುವ ಬಲಿಷ್ಠ ನಂಬುಗಸ್ಥ ನಾಯಿ ನಸುಕಿನಲ್ಲಿ ಬೇರೆ ನಾಯಿಗಳ ದಾಳಿಗೆ ಇಕ್ಕು ಸಾವಿಗೀಡಾಗುತ್ತದೆ. ಕಥೆಯ ಶುರುವಿಗೆ ಕಾಣುವ ಈ ಘಟನೆ ಮುಂದಾಗುವ ದುರಂತಕ್ಕೆ ಸಂಕೇತದಂತೆ ನಿಲ್ಲುತ್ತದೆ. ಸತ್ತ ನಾಯಿಯನ್ನು ಗೌಡರು

ಅಮರೇಶ ನುಗಡೋಣಿ

ಡಾ॥ ನೀರಮಾನ್ವಿ ಅವರ ಕಥನ ತಂತ್ರ ವಿಶೇಷವಾದದ್ದು. ಭೂತ ವರ್ತಮಾನವನ್ನು ತೊಡಕಿಲ್ಲದಂತೆ ನಿರ್ವಹಿಸುವುದು, ಸನ್ನಿವೇಶ ಸಂದರ್ಭಗಳ ನಿರ್ಮಾಣ, ಭಾಷೆ ಉಪಭಾಷೆಗಳ ಬಳಕೆ, ಕಾಲದ ಪ್ರಜ್ಞೆ ಎಲ್ಲವೂ ಸಂಕೀರ್ಣವಾಗಿ ವ್ಯಕ್ತವಾಗುತ್ತವೆ. ರಾಯಚೂರಿನ ಆಡುಭಾಷೆ ಮತ್ತು ಅದನ್ನೇ ಗ್ರಾಂಥಿಕ ಭಾಷೆಯನ್ನಾಗಿ ಪುನರ್ ಸೃಷ್ಟಿಸಿಕೊಳ್ಳುವಿಕೆ ಅಂದರೆ ಮಾತು ಮತ್ತು ವಿವರಣೆಗೆ ಬಳಸುವ ಪರಿ ಅನನ್ಯ. ರಾಯಚೂರು ಪ್ರಾಂತದ ಭಾಷೆಯನ್ನು ಡಾ॥ ನೀರಮಾನ್ವಿ ಬಳಸಿದಂತೆ, ಮತ್ಯಾರೂ ಈ ಭಾಗದ ಕಥನಕಾರರು ಬಳಸಿಲ್ಲ.

ದುಃಖತಪ್ತರಾಗಿ ಮಣ್ಣು ಮಾಡಿಸುತ್ತಾರೆ. ಬದುಕಿನ ಅರ್ಥವನ್ನು ಅಲ್ಲಿಂದ ಶೋಧಿಸಲು ತೊಡಗುತ್ತಾರೆ. ಹೊಲದಿಂದ ಮನೆಗೆ ಚಲಿಸುತ್ತಲೇ ಗೌಡರು ತಮ್ಮ ಬದುಕನ್ನು, ಬದುಕಿನ ಭಾಗವಾಗಿದ್ದ ಹೆಂಡತಿ ಪಾರ್ವತೆವ್ವನನ್ನು, ಮಗನನ್ನು ಮತ್ತು ಊರನ್ನು ಅವಲೋಕಿಸುತ್ತ ಅಳೆಯುತ್ತ ಹೋಗುತ್ತಾರೆ. ತನ್ನ ಬಗ್ಗೆ ಅಹಂ ಬಂದಾಗ ಹೆಂಡತಿಯನ್ನು ನೆನೆಯು ಆಕೆಯಿಂದಲೇ ತನಗೆ ಈ ಸಮಾಜದಲ್ಲಿ ಗೌರವ, ಸ್ಥಾನ ಎಂದು ಹೆಮ್ಮೆ ಪಡುತ್ತಾರೆ. ಆ ಹೆಮ್ಮೆ ತಾತ್ಕಾಲಿಕವಾಗುತ್ತವೆ; ಮಗನನ್ನು ನೆನೆದು ಕುಸಿಯುತ್ತಾರೆ. ಸಮಾಜ ವಿರೋಧಿ ಚಟುವಟಿಕೆಗಳಲ್ಲಿ ಭಾಗಿಯಾಗಿದ್ದ ಮಗ ಗೌಡರ ಗೌರವಕ್ಕೆ ಧಕ್ಕೆ ತಂದಿರುತ್ತಾನೆ. ಗೌಡರ ಸಾವಿಗೂ ಮಗನೇ ಕಾರಣವಾಗುವುದು ಇಲ್ಲಿನ ದುರಂತ. ಗೌಡರು ಮನೆಯಿಂದ ಹೊಲಕ್ಕೆ ನಿಧಾನವಾಗಿ ಚಲಿಸುತ್ತಲೇ ಬದುಕನ್ನು ತಮ್ಮ ಪ್ರಜ್ಞೆಮೂಲಕ ಅವಲೋಕಿಸುವಾಗ ಭೂತ ಮತ್ತು ವರ್ತಮಾನವನ್ನು ಒಂದಾಗಿಸುತ್ತಾರೆ. ಮನೆತನವನ್ನು ಕಟ್ಟಿದ್ದು, ಹೆಂಡತಿಯ ಘನತೆ, ಸ್ವಾತಂತ್ರ್ಯ ಚಳುವಳಿ, ರಜಾಕಾರರ ಹಾವಳಿಯಲ್ಲಿ ಕೇಡು ಬಗೆದಿದ್ದ ಹುಸೇನಿಗೆ ಜೀವದಾನ ಮಾಡಿದ್ದು ಭೂತಕಾಲದ ನೆನಪುಗಳು. ಮಗನ ಸಮಾಜಘಾತುಕ ಚಟುವಟಿಕೆಗಳ ಸುದ್ದಿಗಳು, ನಾಯಿಯ ಸಾವು, ಊರ ವಿದ್ಯಮಾನಗಳು, ಒಕ್ಕಲತನದ ಚಟುವಟಿಕೆಗಳು ವರ್ತಮಾನದಲ್ಲಿ ಕಾಣುತ್ತ ಈ ಎರಡು ಕ್ರಿಯೆಗಳು ಗೌಡರ ಒಳಗೆ, ಗೌಡರ ಕಣ್ಣಮುಂದೆ ನಡೆಯುವುದು ಕಥೆಯಲ್ಲಿ ಹೂ ಅರಳಿದಂತೆ ಬಿಚ್ಚಿಕೊಳ್ಳುತ್ತವೆ. ಗೌಡರು ಒಬ್ಬ ವ್ಯಕ್ತಿಯಾಗಿ ಕುಟುಂಬದ ಒಳಗೆ, ಸಮಾಜದ ನಡುವೆ ತನ್ನ ಸ್ಥಾನ ಏನೆಂದು ಶೋಧಿಸುತ್ತಾರೆ. ತಾನು ಏನೆಂಬುದು ತನಗೆ ಮಾತ್ರ ಗೊತ್ತು. ತನಗೆ ಸಲಾಮ್ ಹೊಡೆಯುವ ಜನರನ್ನು, ಸಮಾಜವನ್ನು ಗೌಡರು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ.

"ಈ ಜನ ಏಕೆ ನನಗೆ ಇಷ್ಟು ಮರ್ಯಾದೆ ಕೊಡಬೇಕು ? ನಾನೇನು ಅಂತಹ ದೊಡ್ಡ ಉಪಕಾರದ ಹೊರೆ ಹೊರಿಸಿದ್ದೇನೆ ಇವರ ಮೇಲೆ ? ಹಿಂದೆ ನಿಜಾಮನ ರಾಜ್ಯದಲ್ಲಿ ಹೊಡೆದು ಬಡಿದು, ಹಿಂಸೆ ಕೊಡುವ ರಜಾಕಾರರಿಗೂ ಈ ರೀತಿ ಸಲಾಮು ಹಾಕುತ್ತಿದ್ದರು. ಈಗ ನನಗೂ ಹಾಕುತ್ತಿದ್ದಾರೆ. ಎಲ್ಲರಿಗೂ ಒಂದೇ ಮರ್ಯಾದೆ. ಒಟ್ಟಿನಲ್ಲಿ ಈ ಜನರಿಗೆ ಸಲಾಮು ಹಾಕಲು ಒಂದು ವ್ಯಕ್ತಿ ಬೇಕು ಅಷ್ಟೇ. ಆ ವ್ಯಕ್ತಿ ಒಳ್ಳೆಯವನಿರಲಿ, ಕೆಟ್ಟವನಿರಲಿ ಅದು ಮುಖ್ಯವಲ್ಲ. ಆಗ ಅವರ ರಾಜ್ಯವಿತ್ತೆಂದು ಅವರಿಗೆ ನಮಸ್ಕರಿಸುತ್ತಿದ್ದರು. ಈಗ ಪ್ರಜಾರಾಜ್ಯದಲ್ಲಿ ಊರಿಗೆ ದೊಡ್ಡವನೆನಿಸಿಕೊಂಡ ನನಗೆ ನಮಸ್ಕರಿಸುತ್ತಿದ್ದಾರೆ".

ಕುಟುಂಬ, ಸಮಾಜದ ಒಳಗಿರುವ ವ್ಯಕ್ತಿ ಈ ಸಂಸ್ಥೆಗಳಿಗೆ ಮುಖಾಮುಖಿಯಾಗಿ ಶೋಧಿಸಿ ತನ್ನನ್ನು ಗುರುತಿಸಿಕೊಳ್ಳುವ ಕ್ರಿಯೆ ಈ ಕಥೆಯಲ್ಲಿದೆ.

'ಮುರಕಿ' ಕಥೆಯಲ್ಲಿ ಈ ಕ್ರಿಯೆಯು ಬೇರೆ ಮುಂದುವರಿಯುತ್ತದೆ. ತಿಮ್ಮ ನಗರದಲ್ಲಿ ಸೈಕಲ್ ರಿಕ್ಷಾ ತುಳಿಯುವ ದುಡಿಮೆಗಾರ. ಗಿರಾಕಿಗಳನ್ನು ಕೂಡಿಸಿಕೊಂಡು ರಿಕ್ಷಾ ತುಳಿಯುತ್ತಲೇ ತನ್ನ ಬದುಕನ್ನು ಶೋಧಿಸಿಕೊಳ್ಳುತ್ತಾನೆ. 'ಅಯ್ಯ' ಎಂಬ ದಣಿಗೆ ಮಗನಾಗಿದ್ದರೂ ಜಾತಿ, ಬಡತನ, ದುಡಿಮೆಯಲ್ಲಿ ಯಾವ ಪಲ್ಲಟವನ್ನೂ ಕಾಣದವನು. ತನ್ನ ಕುಟುಂಬದ ಒಳಗೆ ಕಳ್ಳುಬಳ್ಳಿಯ ಸಂಬಂಧಗಳು ಛಿದ್ರವಾಗಿದ್ದರೂ ಅವನ್ನು ಸಹಿಸುವ, [illegible]

ಮಾನವೀಯ ನೆಲೆಯಲ್ಲಿ ಯತ್ನ ನಡೆಸುತ್ತಾನೆ. ತಿಮ್ಮನಿಗೆ ಯಾವುದೂ ಪೂರಕವಾಗಿ ಒದಗುವುದಿಲ್ಲ. ಅನೈತಿಕ ಸಂಬಂಧದಲ್ಲೇ ಬದುಕುವ ಗಂಗಿಯನ್ನು ಮದುವೆಯಾಗಿ ಬಾಳನ್ನು ಕಟ್ಟುವ ಆತನ ಗುರಿಗೆ ಗಂಗಿಯೇ ಕೈ ಕೊಡುತ್ತಾಳೆ. ತಂಗಿ ನಾಗಮ್ಮನನ್ನೂ ಸಂಸಾರಸ್ಥಳನ್ನಾಗಿ ಮಾಡಲು ಯತ್ನಿಸಿ ಸೋಲುತ್ತಾನೆ. ಫ್ರೀವೀಲ್ ಕೆಟ್ಟ ಸೈಕಲ್ ರಿಕ್ಷಾ ತಿಮ್ಮನಿಗೆ ತೊಂದರೆ ಕೊಡುತ್ತಿದ್ದರೂ, ಅದನ್ನು ದುರಸ್ತಿ ಮಾಡದೆ ಗಂಗಿ, ನಾಗಮ್ಮನನ್ನು ದುರಸ್ತಿ ಮಾಡಲು ಪ್ರಯತ್ನಿಸುವುದು ಒಂದು ವ್ಯಂಗ್ಯವಾಗಿ ಕಾಣುತ್ತದೆ. ಕುಟುಂಬದ ಒಳಗೆ ಅನೈತಿಕತೆಗೆ ಬೇಸತ್ತಂತೆ ತಿಮ್ಮ ಸಮಾಜದಲ್ಲೂ ಅದನ್ನೇ ಎದುರುಗೊಳ್ಳುತ್ತಾನೆ. ಹೆಣ್ಣುಗಳನ್ನು ಸಾಗಿಸುವ ದಲ್ಲಾಳಿ, ಸರ್ಕಾರದ ದಾಸ್ತಾನನ್ನು ಕೊಳ್ಳೆಹೊಡೆಯುವ ಉದ್ಯೋಗಿಗಳನ್ನು ತಿಮ್ಮ ಎದುರಿಸಬೇಕಾಗುತ್ತದೆ. ತಾನು ಬದುಕುವ ಕುಟುಂಬ ಮತ್ತು ಸಮಾಜದಲ್ಲಿ ನಡೆಯುವ ಅನೈತಿಕ ಸಂಬಂಧಗಳ ನಡುವೆ ವ್ಯಕ್ತಿಯಾಗಿ ತಿಮ್ಮ ತನ್ನನ್ನು, ತನ್ನತನವನ್ನು ರಕ್ಷಿಸಿಕೊಳ್ಳುವುದೇ ಸವಾಲಾಗುತ್ತದೆ. 'ಇನ್ನಮ್ಯಾಕ ಯಾರು ಸತ್ತರೇನು, ಯಾರು ಅತ್ತರೇನು ನನಮನ್ನಿಗೆ ಬಂದಂಗ ಇದ್ರಾಯ್ತು' ಎಂಬ ನಿರ್ಧಾರವೂ ತಾತ್ಕಾಲಿಕವೇ ಆಗಬಹುದು. 'ವೃತ್ತ' ಮತ್ತು ಈ ಕಥೆಯ ವಿನ್ಯಾಸ ಒಂದೇ. ಶಂಕರಪ್ಪಗೌಡ, ತಿಮ್ಮ ಇಬ್ಬರೂ ಚಲಿಸುತ್ತಲೇ ಭೂತ-ವರ್ತಮಾನಗಳ ಸುಳಿಯಲ್ಲಿ ಸುತ್ತುತ್ತಿರುತ್ತಾರೆ. ಕಥೆಗಳಲ್ಲಿ ಕಾಲ ನಿರ್ದಿಷ್ಟವಾಗಿ ಎರಡು ದಿನಗಳು. 'ವೃತ್ತ' ಹಳ್ಳಿ ಪರಿಸರದಲ್ಲಿ ಸಂಭವಿಸಿದರೂ ಮಾತು ಉಳಿದು (ಸಂಭಾಷಣೆ) ಭಾಷೆ ಗ್ರಾಂಥಿಕವಾಗಿದೆ. 'ದುರಸ್ತಿ' ನಗರ ಕೇಂದ್ರಿತವಾಗಿದ್ದರೂ ಭಾಷೆ ಹಳ್ಳಿಯ ಆಡುನುಡಿಯಲ್ಲಿದೆ. ಕಥೆಗಳಿಗೆ ಎರಡು ನೆಲೆಗಳು ಪೂರಕವಾಗಿಯೇ ಇವೆ.

ಕುಟುಂಬ-ಸಮಾಜ ಮತ್ತು ವ್ಯಕ್ತಿಯ ನಡುವಿನ ಅಂತರ್ ಸಂಬಂಧದ ತೀವ್ರ ಶೋಧ 'ಭೂತ' ಕಥೆಯಲ್ಲಿಯೂ ಮುಂದುವರಿಯುತ್ತದೆ. ಈ ಕಥೆಯ ನಾಯಕ ರಮೇಶ್ ವಿದ್ಯಾವಂತ. ರಾಜವಾಡೆಯಲ್ಲಿ ಹುಟ್ಟಿ ಬೆಳೆದ ದಣಿವಂಶಸ್ಥ. ಆದರೆ ರಾಜವಾಡೆ ಮತ್ತು ಧಣಿತನ ಇವುಗಳ ಯಾಜಮಾನ್ಯದಿಂದ ಬಿಡುಗಡೆಯಾಗುವ ಯತ್ನದಲ್ಲಿ ರಮೇಶ್ ಹಲವು ಸಂಕಷ್ಟಗಳ ಸುಳಿಯಲ್ಲಿ ಸಿಕ್ಕುಬೀಳುತ್ತಾನೆ. ಭೂತಕಾಲದ ಎಲ್ಲ ಬಗೆಯ ಪಾಪಗಳಿಂದ ಮುಕ್ತನಾಗಬೇಕೆಂಬ ಆತನ ಒಳ ಹೋರಾಟವು, ವರ್ತಮಾನದ ಸಮಾಜಿಕರ ಕಣ್ಣಲ್ಲಿ ಭೂತ ಬಡಿದ ವ್ಯಕ್ತಿಯಾಗಿ ಕಂಡು, ಚಿಕಿತ್ಸೆಗೆ ತಾನೇ ಒಳಗಾಗುವ ವ್ಯಂಗ್ಯ ಇಲ್ಲಿದೆ. ಪಾಳೆಗಾರಿಕೆಯ ಸಂಪ್ರದಾಯದ ವಿರುದ್ಧ ರಮೇಶ ನಡೆಸುವ ಹೋರಾಟಕ್ಕೆ ಯಾರದ್ದೂ ಬೆಂಬಲವಿಲ್ಲ. ವಂಶಸ್ಥರ ದಾರಿಯಲ್ಲಿ ನಡೆಯಲು ಸಮಾಜವೇ ಒತ್ತಾಯಿಸುವಂತೆ ಕಾಣುತ್ತದೆ. ಕಥೆಯಲ್ಲಿ

## ಒಂದಾನೊಂದು ಕಾಲದಲ್ಲಿ

**ಕಂ**ದ, ಹಿಂದೆ,
ಆ ಕಾಲದಲ್ಲಿ, ಜನ,
ಮನತುಂಬಿ ನಗುತ್ತಿದ್ದರು
ಕಣ್ಣಂಚಿನಲ್ಲಿ ನಗೆ ಹೊಮ್ಮುತ್ತಿತ್ತು.
ಈಗಲೊ ಹಲ್ಕಿರಿಯುವರು,
ಸ್ತಬ್ಧ ಕಣ್ಣುಗಳು ಬೆನ್ನಹಿಂದೆ ಅಮೂರ್ತವನ್ನು ತಡಕುವಂತೆ.

ಇತ್ತು, ಆ ಒಂದು ದಿನ,
ಅವರು ಹೃದಯತುಂಬಿ ಬಂದು ಕೈ ಕುಲುಕುತ್ತಿದ್ದರು
ಈಗ, ಅದು ಇಲ್ಲವೋ ಕಂದ.

ಈಗಲೂ ಕೈ ಕುಲುಕುವರು, ಹೃದಯವಿಲ್ಲದಂತೆ,
ಕೈಗಳು ಬರಿಯ ಜೇಬನ್ನು ತಡಕುವಂತೆ.
ಮತ್ತೊಮ್ಮೆ ಬನ್ನಿ, ನಿಮ್ಮ ಮನೆಯಲ್ಲವೇ ಇದು ಎಂಬೆಲ್ಲಾ ಹುಸಿನುಡಿಗಳಿಗೆ ಸೋತು
ಮತ್ತೆ ಬಂದನೆಂದರೆ,
ಮೂರಕ್ಕೆ ಮುಕ್ತಾಯ – ಆ ನನ್ನ ಸಂಭ್ರಮ
ಮುಚ್ಚಿದ್ದ ಬಾಗಿಲ ಸ್ವಾಗತದಿಂದಾಗಿ.

ಹೌದು ಕಂದ, ಎಷ್ಟೋ ಕಲಿತಿರುವೆ,
ಉಟ್ಟು ಬಿಚ್ಚೆಸೆಯುವ ಬಟ್ಟೆಯಂತೆ
ಹೊಸಮುಖಿಯಾಗಲು ಕಲಿತಿರುವೆ : ಮನೆಗೊಂದು, ಕಛೇರಿಗೊಂದು, ಬೀದಿಗೊಂದು,
ಅತಿಥಿ-ಅಭ್ಯಾಗತರಿಬ್ಬರಿಗೊ ಬೇರೊಂದು,
ಒಪ್ಪುವ ನಗೆಗಳೊಂದಿಗೆ – ಮೆತ್ತಿದ ಚಿತ್ರದಂತೆ,
ನಾನೂ ಕಲಿತಿರುವೆ
ಹಲ್ಕಿರಿಯಲು, ಕೈ ಆಡಿಸಲು,
ಅಷ್ಟೇ ಅಲ್ಲವೋ ಮಗು,
ಗುಡ್ ಬೈ ಎನ್ನುತ್ತ ತೊಲಗಿತು ಪೀಡೆ ಎನ್ನಲು,
ಸಂತಸವಿಲ್ಲದೆ ಸಂತೋಷವಾಯ್ತು ಎನ್ನಲು,
ಬೇಸತ್ತಿದ್ದರೂ ಸಿಕ್ಕಿದ್ದು ಚೆನ್ನಾಗಿತ್ತು ಎನ್ನಲು.

ಆದರೂ ನನ್ನ ಮನದಳಲನ್ನು ನಂಬು ಕಂದ,
ಇಂದು ನೀನಿರುವಂತೆ,
ಅಂದು ನಾನಿದ್ದಂತೆ,
ಇಂದು ನಾನಿರಬೇಕೆಂದು ಬಯಕೆ,
ಕಣ್ಕಟ್ಟುವ ಕ್ರಿಯೆಗಳನ್ನು ಮರೆಯಬೇಕೆಂಬಾಸೆ.
ಆ ನಗುವನ್ನು ಮತ್ತೆ ಕಲಿಯಬೇಕೆಂಬಾಸೆ
ನಗಲೆಣಿಸಿದರೆ, ವಿಷಸರ್ಪದ ನಾಲಿಗೆಯಂತೆ, ಈ ನನ್ನ ನಗುವು
ಕನ್ನಡಿಯಲ್ಲಿ ಗೋಚರಿಸುವುದು.
ದಾರಿ ತೋರಿಸೋ ನನ್ನ ಮುದ್ದು ಮಗುವೇ,
ಹೇಗೆ ನಗಬೇಕೆಂದು ?
ಆ ನಗು,
ಆ ಮಂದಹಾಸ,
ಅಂದು ನಾ ನಕ್ಕಂತೆ, ಇಂದು ನೀನಿರುವಂತೆ.


ಮೂಲ ಇಂಗ್ಲಿಷ್ : ಗಾಬ್ರಿಯಲ್ ಓಕಾರ
ಕನ್ನಡ ಅನುವಾದ : ಡಾ|| ಎನ್. ಗಿರೀಶ್ (ಜಾಗಿ)
೬೭೦, ೧೮ನೇ ಮುಖ್ಯರಸ್ತೆ, ೫ನೇ ಬ್ಲಾಕ್
ರಾಜಾಜಿನಗರ, ಬೆಂಗಳೂರು - ೫೬೦ ೦೧೦

ಬರುವ ಮೊಹರಂ ಹಬ್ಬ, ಅಲ್ಲಿ ದೆವ್ವ ಬಡಿಸಿಕೊಂಡವರ ಆಟಗಳು, ಜನರ ಮೊಹರಂ ಕುಣಿತ, ಬಾಹ್ಯದಲ್ಲಿ ನಡೆಯುತ್ತಿದ್ದರೆ, ರಮೇಶನ ಆಂತರ್ಯದಲ್ಲಿಯೂ ಅದೇ ಬಗೆಯ ಆಟಗಳು, ಕುಣಿತಗಳು ನಡೆಯುತ್ತಿರುತ್ತವೆ. 'ದುರಸ್ತಿ'ಯ ತಿಮ್ಮ ಮುಕ್ತನಾಗಲು ನಿರ್ಧರಿಸುತ್ತಾನೆ. 'ಭೂತ' ಕತೆಯ ರಮೇಶನಿಗೆ ಅದೂ ಸಾಧ್ಯವಾಗುವುದಿಲ್ಲ. ವ್ಯಕ್ತಿಯ ಅಸ್ತಿತ್ವದ ಹೋರಾಟ 'ಹಂಗಿನರಮನೆಯ ಹೊರಗೆ' ಕಥೆಯಲ್ಲಿಯೂ ಮುಂದುವರಿಯುತ್ತದೆ.

'ಹಂಗಿನರಮನೆಯ ಹೊರಗೆ' ಡಾ॥ ರಾಜಶೇಖರ ನೀರಮಾನ್ವಿ ಅವರ ಪ್ರಾತಿನಿಧಿಕ ಕತೆ ಎಂಬಂತೆ ಹಲವು ಕನ್ನಡ ಸಣ್ಣಕತೆಗಳ ಆಂಥಾಲಜಿಗಳಲ್ಲಿ ಕಾಣಿಸಿಕೊಂಡಿದೆ. ನವ್ಯ ಸಾಹಿತ್ಯ ಸಂದರ್ಭದಲ್ಲಿ ಈ ಕಥೆಗೆ ವಿಶೇಷ ಮನ್ನಣೆ ಸಿಕ್ಕಿದೆ. ಶಂಕರಪ್ಪಗೌಡ (ವೃತ್ತ), ತಿಮ್ಮ (ದುರಸ್ತಿ), ರಮೇಶ (ಭೂತ) ಆಯಾ ಕಥೆಗಳಲ್ಲಿ ಅವರು ಚಲಿಸುತ್ತಿರುತ್ತಾರೆ. ದೈಹಿಕ ಚಲನೆ ಮತ್ತು ಮಾನಸಿಕ ಚಲನೆ ಅಂತರ್‌ಸಂಬಂಧವನ್ನು ಪಡೆದಿವೆ. 'ಹಂಗಿನರಮನೆಯ ಹೊರಗೆ' ಕಥೆಯಲ್ಲಿ ನಾಯಕ ಕರುಳುಬೇನೆಯಿಂದ ಆಸ್ಪತ್ರೆಯಲ್ಲಿ ಚಿಕಿತ್ಸೆಗೆ ಒಳಗಾಗಿ ಚಲನೆರಹಿತನಾಗಿ ಮಲಗಿರುತ್ತಾನೆ. ಸ್ಥಗಿತ ನಾಯಕನಿಗೆ ಹೆಸರೂ ಇಲ್ಲ. ಮನಸ್ಸು ಚಲಿಸುತ್ತಿರುತ್ತದೆ. ನಾಯಕ ವ್ಯಕ್ತಿಯಾಗಿ ಕುಟುಂಬದಲ್ಲಿ ಅಸ್ತಿತ್ವ ಕಳೆದುಕೊಂಡಿದ್ದಾನೆ. ತಂದೆಯ ಜತೆ ಯಾವ ಬಗೆಯ ಸಂಬಂಧವೂ ಏರ್ಪಡದಷ್ಟು ಕಂದರ ಬೆಳೆದಿದೆ. ಪ್ರೀತಿಸಿ ಕೈ ಹಿಡಿಯಬೇಕೆಂದಿದ್ದ ಕಿರಣಳನ್ನು ನಡುನೀರಿನಲ್ಲಿ ಬಿಟ್ಟುಬಿಟ್ಟಿದ್ದಾನೆ. ಕೈಹಿಡಿದ ಹೆಂಡತಿಯನ್ನು ಉಳಿಸಿಕೊಳ್ಳದ ಸ್ಥಿತಿಗೆ ತಲುಪಿದ್ದಾನೆ. ಈ ಎಲ್ಲ ಬಗೆಯ ಸಂಬಂಧಗಳನ್ನು ಕಳೆದುಕೊಂಡಿರುವುದರಿಂದ ಸಮಾಜದ ಕಣ್ಣಲ್ಲಿ ಅಪರಾಧಿಯಾಗಿ ನಿಲ್ಲುವುದಕ್ಕಿಂತಲೂ ತನ್ನ ದೃಷ್ಟಿಯಲ್ಲೇ ಅಪರಾಧಿಯಾಗಿದ್ದನು. ಈ ನಾಯಕ ವಿದ್ಯಾವಂತ, ಮಾನವೀಯ ಮೌಲ್ಯಗಳಿಗೆ ಹಂಬಲಿಸುವವನೂ ಆಗಿದ್ದರೂ ಬದುಕನ್ನು ಕಟ್ಟಿಕೊಳ್ಳಲಾರದ ಸ್ಥಿತಿಗೆ ತಲುಪಿದ್ದಾನೆ. ತಾನು ಬಯಸಿದಂತೆ, ಹಂಬಲಿಸಿದಂತೆ ಯಾವುದೂ ಆಗುತ್ತಿಲ್ಲ. ಕುಟುಂಬದ ಸಂಬಂಧಗಳು, ಸಾಮಾಜಿಕ ಸಂಬಂಧಗಳು ಎಲ್ಲವೂ ಆತನನ್ನು ಆಗಲು ಬಿಡುತ್ತಿಲ್ಲ ಎಂಬುದೇ ಆತನ ತಕರಾರು. ಬದುಕು-ಸಾವಿನ ಮನೆಯಲ್ಲಿರುವ ನಾಯಕನಿಗೆ ಆಯ್ಕೆ ಯಾವುದು ?

''ಮನಸ್ಸಿನ ಹೃದಯ ಅನಿಸಿಕೆಗಳಿಗೆ ಓಗೊಡದ ಯಾರದೋ ಬಂಧನ, ಯಾವುದೋ ಭಿಡೆಗೊಳಗಾಗಿ ತನ್ನತನವನ್ನು ಅದುಮಿಟ್ಟುಕೊಂಡು, ಯಾರದೋ ನಾಲಿಗೆ, ಯಾವುದೋ ಕಣ್ಣು, ಎಂಥದೋ ಕಿವಿಯಾಗಿ, ಮನುಷ್ಯ ತನ್ನತನವನ್ನು ಹಂಚಿಕೊಂಡು ಬಾಳುವವರ ಘಟಕವಾದ ಈ ಜಗತ್ತು, ಸಮಾಜ ನನ್ನ ಪಾಲಿಗಂತೂ ಎಂದೋ ಸತ್ತಂತಾಗಿ ಬಿಟ್ಟಿದೆ. ಅದಕ್ಕೆ ಈ ಸತ್ತ ಜನಜಂಗುಳಿಯಲ್ಲಿ ಬದುಕಿರುವುದಕ್ಕಿಂತ, ಮುಂದೆ ಬದುಕಿರುವ ಸಮಾಜ ನಿರ್ಮಿಸಲು ಸಾಯುವುದು ಲೇಸು...'' ಇದು ಈ ಕಥೆಯ ನಾಯಕನ ಆಯ್ಕೆ. ತಿಮ್ಮ ಆಶಾವಾದಿ, ರಮೇಶ ನಿರಾಶಾವಾದಿ, ಈ ನಾಯಕ ಆಶೆ-ನಿರಾಶೆಗಳನ್ನು ಮೀರಿ ಸಾವಿನ ಕಡೆ ದೃಷ್ಟಿ ಹರಿಸಿದ್ದಾನೆ. ರೋಗಿಯಾಗಿ ಆಸ್ಪತ್ರೆಯಲ್ಲಿ ಮಲಗಿರುವ ನಾಯಕ ಭಯಭೀತ, ಆಂತರ್ಯದಲ್ಲಿ ಮೌನಿ, ಮೌನದೊಳಗೆ ನಿರ್ಣಾಯಕ ಸಂಘರ್ಷ ನಡೆದಿದೆ. ಇಲ್ಲಿಯೂ ಭೂತ-ವರ್ತಮಾನಗಳ ಮುಖಾಮುಖಿ, ಹೆಂಡತಿ ಬಂದು ಹೋಗುವ ನಾಟಕೀಯ ಪ್ರಸಂಗವೂ ನಡೆಯುತ್ತದೆ. ಕಿರಣಳೂ ಬಂದು ಸಂತೈಸುವ ಹೃದಯಸ್ಪರ್ಶಿ ಸನ್ನಿವೇಶವೂ ಇದೆ. ನಾಯಕನ ಹಾಸಿಗೆಯ ಬಳಿ ತಂದೆ, ತಾಯಿ, ತಮ್ಮ, ಗೆಳೆಯ ರವಿ, ಹೆಂಡತಿ, ಪ್ರೇಮಿ ಕಿರಣ ಎಲ್ಲರೂ ಇದ್ದಾರೆ. ಆದರೆ ಯಾರೂ ಇಲ್ಲದ ಸ್ಥಿತಿ ನಾಯಕನದು.

ಕುಟುಂಬ, ಸಮಾಜ ಮತ್ತು ವ್ಯಕ್ತಿಯ ಅಂತರ್‌ಸಂಬಂಧದಲ್ಲಿ ಕುಟುಂಬವೂ, ಸಮಾಜವೂ ಮುಖರಹಿತವಾದಾಗ, ತತ್ವರಹಿತವಾದಾಗ, ಮನುಷ್ಯತ್ವವನ್ನು ಕಳೆದುಕೊಂಡಾಗ ವ್ಯಕ್ತಿ ತನ್ನತನವನ್ನು ಹೇಗೆ ಉಳಿಸಿಕೊಂಡು ಬದುಕುವ ದಾರಿ ಕಂಡುಕೊಳ್ಳಬೇಕಾಗುತ್ತದೆ ಎಂಬುದನ್ನು 'ನೆಲೆ' ಕಥೆ ಸಮರ್ಥವಾಗಿ ಕಟ್ಟಿಕೊಡುತ್ತದೆ. ಈ ಕಥೆಯ ರಂಗಮ್ಮ ಎಲೆ ಮಾರಿ ಜೀವನ ಸಾಗಿಸುವವಳು. ಆಕೆಯ ಹಿನ್ನೆಲೆಯೇ ಭೀಕರವಾಗಿದೆ. ಕೂಲಿ ಮಾಡಿ ಬದುಕುವ ಕುಟುಂಬದಲ್ಲಿ ರಂಗಮ್ಮ ಹುಟ್ಟಿದ ಬೆನ್ನಲ್ಲೇ ಹೆತ್ತವ್ವನನ್ನು ಕಳೆದುಕೊಂಡು, ಬದುಕಿದ್ದರೂ ತಂದೆಯ ಆರೈಕೆ ದಕ್ಕದೆಹೋದಾಗ, ಜಾತಿಗೇರ ಮಾಬವ್ವನಲ್ಲಿ ಬೆಳೆಯುತ್ತಾಳೆ. ಮಾಬವ್ವನ ಗಂಡ ರಜಾಕಾರರ ಜತೆ ಸೇರಿ ಊರೂರು ಅಲೆದು ಕೊಳ್ಳೆ ಹೊಡೆದು, ರಜಾಕಾರರ ಕೊನೆಗಾಲದಲ್ಲಿ ದುರ್ಮರಣ ಕಂಡನು. ಮಾಬವ್ವ ಊರ ಗೌಡನ ಪಾಲಾದಳು. ರಂಗಮ್ಮ ಇಂಥ ಪರಿಸರದಲ್ಲಿ ಬೆಳೆದು ನಿಂತಳು. ಎಲ್ಲೋ ಇದ್ದ ತಂದೆ ಬಂದು, ನೈತಿಕ ಪ್ರಶ್ನೆ ಮುಂದಿಟ್ಟು ಮಾಬಮ್ಮನಿಂದ ಮಗಳು ರಂಗಮ್ಮನನ್ನು ಬಿಡಿಸಿಕೊಂಡು, ಮಗಳನ್ನೇ ಮಾರಿ ಬದುಕಲು ಸಂಚು ನಡೆಸುತ್ತಾನೆ. ಅದನ್ನರಿತು ರಂಗಮ್ಮ ತಂದೆಯನ್ನು ಧಿಕ್ಕರಿಸಿ ಪುನಃ ಮಾಬವ್ವನಲ್ಲಿ ಸೇರಿಕೊಳ್ಳುತ್ತಾಳೆ. ಮಾಬವ್ವನ ಗೌಡನೇ ಸಾಯಿಬಣ್ಣನಿಗೆ ರಂಗಮ್ಮನನ್ನು ಕೊಟ್ಟು ಮದುವೆ ಮಾಡಿಸುತ್ತಾನೆ. ಗಂಡನೂ ರಂಗಮ್ಮನನ್ನು ಮಾರಿ ಬದುಕಲು ನೋಡುತ್ತಾನೆ. ರಂಗಮ್ಮ ಒಂದು ಸರಕು, ಅದನ್ನು ಮಾರುವ ಹಕ್ಕು ತಮಗಿದೆ ಎನ್ನುವ ತಂದೆ, ನಂತರ ಗಂಡ, ಅದನ್ನು [illegible] ಅನುಭವಿಸುವ ಸೀನಪ್ಪನೆಂಬ ಸಮಾಜ. ಹೀಗೆ ಕುಟುಂಬ, ಸಮಾಜಗಳ ಕ್ರೌರ್ಯಕ್ಕೆ ಸಿಕ್ಕರೂ ರಂಗಮ್ಮ ಗಟ್ಟಿಗಳು. ತನ್ನತನ ಉಳಿಸಿಕೊಳ್ಳಲು, ಸ್ವಾತಂತ್ರ್ಯ ಮತ್ತು ಆಯ್ಕೆಯ ಹಕ್ಕನ್ನು ಪಡೆಯಲು ಹೋರಾಟ ನಡೆಸುತ್ತಾಳೆ. ಗಂಡನೇ ರಂಗಮ್ಮನನ್ನು ಸೀನಪ್ಪನಿಗೆ ಮಾರಲು ಯತ್ನಿಸಿದಾಗ, ಅದನ್ನು ಧಿಕ್ಕರಿಸಿ, ಕಿರಾಣಿ ಅಂಗಡಿಯ ಮಾಲಿಕ ಯಂಕಯ್ಯನನ್ನು ಆಯ್ಕೆ ಮಾಡಿಕೊಂಡು ಅದನ್ನು ಘೋಷಿಸುತ್ತಾಳೆ. ಜತೆಗೆ, 'ಇವತ್ತಿಂದ ನನ್ನೋರು ಅಂಬೋರು ಯಾರೂ ಇಲ್ಲ...' ಎಂದು ಸಾರುತ್ತಾಳೆ. ರಂಗಮ್ಮನ ಈ ಆಯ್ಕೆಯ ಹಿಂದೆ ಸವೆಸಿದ ಹಾದಿ ಕಷ್ಟದ್ದಿತ್ತು. ಈ ಆಯ್ಕೆ ರಂಗಮ್ಮನನ್ನು ಬಿಡುಗಡೆ ಮಾಡುತ್ತದೆಯೇ ಎಂಬ ಪ್ರಶ್ನೆ ಹುಟ್ಟಿದರೂ, ಆಕೆ ಅದನ್ನು ನಿಭಾಯಿಸಬಲ್ಲಳು ಅಂತನ್ನಿಸುತ್ತದೆ. ಈ ಕಥೆ ಕೂಡ ರಂಗಮ್ಮನ ಪ್ರಜ್ಞೆಯಲ್ಲೇ ಮುನ್ನಡೆಯುತ್ತದೆ. ರಂಗಮ್ಮನ ಜವಾರಿ ವ್ಯಕ್ತಿತ್ವವನ್ನು ಕಥೆ ಸಮರ್ಥವಾಗಿ ಕಟ್ಟಿಕೊಡುತ್ತದೆ.

ವ್ಯಕ್ತಿ ಪ್ರಜ್ಞೆ ಕೇಂದ್ರಿತ ನಿರೂಪಣೆ ಮೇಲಿನ ಕಥೆಗಳ ಜೊತೆಗೆ ಇನ್ನೂ ಕೆಲವು ಕಥೆಗಳಲ್ಲಿ ಪ್ರಜ್ಞಾಪ್ರವಾಹ ತಂತ್ರವನ್ನು ಡಾ॥ ನೀರಮಾನ್ವಿ ಸಮರ್ಥವಾಗಿ ಬಳಸಿದ್ದಾರೆ. 'ಬಿಸಿಲು ಗುದುರೆ', 'ಎಂಥಾ ಮೋಜಿನ ಕುದರಿ', 'ತಮಂಥ ಕಿರಿದೆನ್ನಬಹುದೇ ಅಯ್ಯಾ' ಕತೆಗಳಲ್ಲಿ ತೀವ್ರತೆ ಕಮ್ಮಿ. ಮೂರೂ ಕತೆಗಳ ನಾಯಕರು ದುರ್ಬಲರಾಗಿ ತಮ್ಮ ಎದುರಾಳಿಗಳಿಂದ ಸೋಲುತ್ತಾರೆ. ದೌರ್ಬಲ್ಯವನ್ನು ವ್ಯಂಗ್ಯವಾಗಿ ಚಿತ್ರಿಸಿದರೂ ತೀವ್ರತೆ ತುಂಬಿಕೊಳ್ಳುವುದಿಲ್ಲ.

ಪ್ರಜ್ಞಾಪ್ರವಾಹ ತಂತ್ರದಿಂದ, ವ್ಯಕ್ತಿಕೇಂದ್ರಿತವಾದ ನಿರೂಪಣೆಯನ್ನು ಕಲಾತ್ಮಕವಾಗಿ ಮಾಡಿದಂತೆ, ಸಮಾಜ-ಸಮೂಹ ಕೇಂದ್ರಿತ ಪ್ರಜ್ಞೆಯ ಮೂಲಕ ಕಥೆ ಕಟ್ಟುವ ಇನ್ನೊಂದು ಆಯಾಮ ಡಾ॥ ನೀರಮಾನ್ವಿ ಅವರ ಕಥೆಗಳಲ್ಲಿದೆ. 'ಬೆತ್ತಲೆ ಸ್ವಾಮಿ', 'ಪ್ರಜಾಪ್ರಭುತ್ವದಲ್ಲಿ ಒಂದು ಸಾವು', 'ಗುಡಿಯ ನೋಡಿರಣ್ಣ' ಮತ್ತು 'ಕರ್ಪುರದ ಕಾಯದಲ್ಲಿ ಬೆಂಕಿ ಉಸಿರಾಟ' ಈ ಕಥೆಗಳಲ್ಲಿ ವ್ಯಕ್ತಿ ಪ್ರಜ್ಞೆಗಿಂತ ಸಮೂಹ ಪ್ರಜ್ಞೆ ಇದೆ. ಸರ್ವಸಾಕ್ಷಿ ಪ್ರಜ್ಞೆಯ ನಿರೂಪಣೆಯಿದೆ. ವ್ಯಕ್ತಿ ಪ್ರಜ್ಞೆ ಮೂಲಕ ಲೋಕವನ್ನು ಗ್ರಹಿಸುವ ವಿಧಾನದ ಕಥೆಗಳು ನಿರೂಪಣೆಯಲ್ಲಿ ತೀವ್ರತೆಯನ್ನು ಹೊಂದಿವೆ. ಸಮೂಹ ಪ್ರಜ್ಞೆಯ ಮೂಲಕ ಲೋಕವನ್ನು ಗ್ರಹಿಸುವ ಕಥೆಗಳು ನಿರೂಪಣೆಯಲ್ಲಿ ತೀವ್ರತೆಯನ್ನು ಕಮ್ಮಿ ಮಾಡಿಕೊಂಡು ಸೊರಗಿದಂತೆ ಕಾಣಿಸುತ್ತವೆ. ಹಾಗೆ ನೋಡಿದರೆ ಈ ನೆಲೆಯುಳ್ಳ ಕಥೆಗಳೇ ದೀರ್ಘವಾಗಿರಬೇಕಿತ್ತು. ಆದರೆ ಈ ಕಥೆಗಳು ಬೆಳೆಯುವುದಿಲ್ಲ. ವ್ಯಕ್ತಿಪ್ರಜ್ಞೆಯ ಕಥೆಗಳು ಬೆಳೆಯುತ್ತವೆ. ದೀರ್ಘವಾಗಿವೆ. ಇದು ಗುಣದೋಷಗಳಿಗಿಂತ, ಡಾ॥ ನೀರಮಾನ್ವಿ ಅವರ ಒಲವನ್ನು ಸೂಚಿಸುತ್ತದೆ. ಅಸ್ತಿತ್ವವಾದ, ವ್ಯಕ್ತಿ ವಿಶಿಷ್ಟವಾದದ ಹಿನ್ನೆಲೆಯುಳ್ಳ ಕಥೆಗಳು ಸಂಕೀರ್ಣವಾಗಿವೆ. ಲಂಕೇಶ್, ತೇಜಸ್ವಿ, 'ನವ್ಯ'ದ ಜಾಡಿನಿಂದ ಹೊರಬಂದು, ಲೋಹಿಯಾ, ಅಂಬೇಡ್ಕರ್, ಗಾಂಧಿ ವಿಚಾರವಾದದ ಪ್ರಭಾವದಿಂದ ಕಥೆಗಳನ್ನು ಬರೆದರು. ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಇದನ್ನು 'ಪರಿವರ್ತಿತ' ನವ್ಯ ಎಂದು ಗುರುತಿಸಲಾಗಿದೆ. ಈ ಬಗೆಯ ಪಲ್ಲಟದಿಂದ ಅತ್ಯುತ್ತಮ ಕಥೆಗಳನ್ನು ಲಂಕೇಶ್, ತೇಜಸ್ವಿ ಬರೆದರು. ಈ ಪಲ್ಲಟವನ್ನು ನೀರಮಾನ್ವಿ ಅವರ ಕಥೆಗಳಲ್ಲಿ ಕಾಣಬಹುದು. ಆದರೆ ಅವು ಅತ್ಯುತ್ತಮ ಕಥೆಗಳಾಗಿ ನಿಂತಿಲ್ಲ. 'ಬೆತ್ತಲೆ ಸ್ವಾಮಿ', 'ಗುಡಿಯ ನೋಡಿರಣ್ಣ', 'ಪ್ರಜಾಪ್ರಭುತ್ವದಲ್ಲಿ ಒಂದು ಸಾವು', 'ಕರ್ಪುರದ ಕಾಯದಲ್ಲಿ ಬೆಂಕಿಯುಸಿರಾಟ' ಕಥೆಗಳಲ್ಲಿ ಸಮಾಜವಾದ, ಮಾನವೀಯತೆ, ಸಾಮಾಜಿಕ ನ್ಯಾಯ, ಶೋಷಣೆ, ಅನ್ಯಾಯ ಈ ವಿಚಾರಗಳು ಕಾಣಿಸುತ್ತವೆ. ನಿರೂಪಣಾ ಶೈಲಿ ನವ್ಯವೇ, ಒಳ ತಿರುಳು ಅಥವಾ ಕಥಾವಸ್ತುಗಳಲ್ಲಿ ಶೋಷಣೆ ಇದೆ. ಕಥಾ ವಸ್ತು ಮತ್ತು ತಂತ್ರಗಳ ಹೊಂದಾಣಿಕೆಯಲ್ಲಿ ಕಥೆಗಳು ಕಲೆಯಾಗಿ ಮೂಡಿ ನಿಂತಿಲ್ಲ. ಕೊಲ್ಯಾಜ್ ಮಾದರಿ ಪೇಂಟಿಂಗ್ ಶೈಲಿ ಇಲ್ಲಿದೆ. 'ಗುಡಿಯ ನೋಡಿರಣ್ಣ' ಈ ಬಗೆಯ ಕೊರತೆ ಇದ್ದರೂ ಅಚ್ಚುಕಟ್ಟಾದ ಕಥೆ.

ಕನ್ನಡ ಕಥಾ ಸಾಹಿತ್ಯ ಸಂದರ್ಭದಲ್ಲಿ ಡಾ॥ ನೀರಮಾನ್ವಿ ಅವರ ಕಥನ ತಂತ್ರ ವಿಶೇಷವಾದದ್ದು. ಭೂತ ವರ್ತಮಾನವನ್ನು ತೊಡಕಿಲ್ಲದಂತೆ ನಿರ್ವಹಿಸುವುದು, ಸನ್ನಿವೇಶ ಸಂದರ್ಭಗಳ ನಿರ್ಮಾಣ, ಭಾಷೆ ಉಪಭಾಷೆಗಳ ಬಳಕೆ, ಕಾಲದ ಪ್ರಜ್ಞೆ ಎಲ್ಲವೂ ಸಂಕೀರ್ಣವಾಗಿ ವ್ಯಕ್ತವಾಗುತ್ತವೆ. ರಾಯಚೂರಿನ ಆಡುಭಾಷೆ ಮತ್ತು ಅದನ್ನೇ ಗ್ರಾಂಥಿಕ ಭಾಷೆಯನ್ನಾಗಿ ಪುನರ್ ಸೃಷ್ಟಿಸಿಕೊಳ್ಳುವಿಕೆ ಅಂದರೆ ಮಾತು ಮತ್ತು ವಿವರಣೆಗೆ ಬಳಸುವ ಪರಿ ಅನನ್ಯ. ರಾಯಚೂರು ಪ್ರಾಂತದ ಭಾಷೆಯನ್ನು ಡಾ॥ ನೀರಮಾನ್ವಿ ಬಳಸಿದಂತೆ ಮತ್ಯಾರೂ ಈ ಭಾಗದ ಕಥನಕಾರರು ಬಳಸಿಲ್ಲ.

'ಹಂಗಿನರಮನೆಯ ಹೊರಗೆ' ಮತ್ತು 'ಕರ್ಪುರದ ಕಾಯದಲ್ಲಿ' - ಈ ಎರಡು ಕೃತಿಗಳು ಬಳ್ಳಾರಿಯ ಲೋಹಿಯಾ ಪ್ರಕಾಶನದಿಂದ ಪ್ರಕಟವಾಗಿವೆ.

ಅಮರೇಶ ನುಗಡೋಣಿ
ಕನ್ನಡ ವಿಶ್ವವಿದ್ಯಾಯಲ, ಹಂಪಿ, ವಿದ್ಯಾರಣ್ಯ (ಬಳ್ಳಾರಿ) ೫೮೩ ೨೭೬



# ಬುಧ-ಶುಕ್ರಗಳ ಕಣ್ಣು ಮುಚ್ಚಾಲೆ

**ಕ**ಳೆದ ತಿಂಗಳಿನ ಹುಣ್ಣಿಮೆಯ ಚಂದ್ರನನ್ನು ನೋಡಿದ್ದು ನೆನಪಿನಲ್ಲಿ ಉಳಿದಿದೆಯೇ? ಹಾಗಿದ್ದರೆ ಅದು ಕಳೆದ ಡಿಸೆಂಬರ್‌ನ ಹುಣ್ಣಿಮೆಗಿಂತ ಮಂಕಾಗಿತ್ತೇ? ಈ ವ್ಯತ್ಯಾಸವನ್ನು ಬರಿಗಣ್ಣು ಗುರುತಿಸಲಾರದು ಎಂಬ ಅಂಶವಂತೂ ಸ್ಪಷ್ಟವಾಗಿರಬೇಕು. ಸಾಮಾನ್ಯವಾಗಿ ಹೀಗೆ ಭೂಮಿಯಿಂದ ಚಂದ್ರನ ದೂರ ಕನಿಷ್ಠ-ಗರಿಷ್ಠವಾಗುವುದರ ಅಂತರ ಸುಮಾರು ಹದಿನೈದು ದಿನಗಳು. ಕಳೆದ ಹುಣ್ಣಿಮೆಯಂದು ಗರಿಷ್ಠ ದೂರದಲ್ಲಿದ್ದ ಚಂದ್ರ ಜೂನ್ ಅಮಾವಾಸ್ಯೆಗೆ ಕನಿಷ್ಠ ದೂರಕ್ಕೆ ಬಂದಿರುತ್ತದೆ. ಸುಮಾರು ೪೦೮,೦೦೦ ಕಿ.ಮೀ. ನಿಂದ ೩೫೮,೦೦೦ ಕಿ.ಮೀ.ಗಳ ಈ ವ್ಯತ್ಯಾಸದ ಪರಿಣಾಮ ಗಮನಿಸಲು ಸಾಧ್ಯವಾಗುವುದು ಕಡಲಿನ ಉಬ್ಬರ ಇಳಿತಗಳ ಸಹಾಯದಿಂದ. ಕಳೆದ ಹುಣ್ಣಿಮೆಗಿಂತ ಈ ಅಮಾವಾಸ್ಯೆಯ ಉಬ್ಬರ ಜೋರು. ಕನಿಷ್ಠ ದೂರದ ಘಟನೆಯಾದ ಆರುಗಂಟೆಯಲ್ಲೇ ಅಮಾವಾಸ್ಯೆ ಎಂಬ ಘಟನೆ ನಡೆಯಲಿದೆ.

ಬೆಳಗಿನ ಜಾವ ಪ್ರಕಾಶಿಸುತ್ತಿದ್ದ ಶುಕ್ರಗ್ರಹ ಈ ತಿಂಗಳ ೯ರಂದು ಸೂರ್ಯನ ಆಚೆಬದಿಯಿಂದ ಹಾದುಹೋಗುವುದು. ತಿಂಗಳ ಕೊನೆಗೆ ಸಂಜೆ ಕಾಣತೊಡಗುವುದು. ಬುಧ ಗ್ರಹ ಸಂಜೆ ಕಾಣುತ್ತಿದ್ದುದು ಸೂರ್ಯನ ಮುಂಭಾಗದಲ್ಲಿ ಹಾದು (೪ರಂದು) ಬೆಳಗಿನ ಜಾವ ಕಾಣತೊಡಗುತ್ತದೆ. ಈ ಎರಡೂ ಘಟನೆಗಳು ಬರಿಗಣ್ಣಿಗೆ ಕಾಣುವಂತಹುವಲ್ಲ. ಯುತಿ, ವಿಯುತಿ ಎಂಬುದು ಈ ಘಟನೆಗಳ ವೈಜ್ಞಾನಿಕ ಹೆಸರು. ಅಕಸ್ಮಾತ್ ಸೌರಮಂಡಲವನ್ನು ದೂರದಿಂದ ನೋಡುವುದು ಸಾಧ್ಯವಾಗುವುದಾಗಿದ್ದರೆ ಸೂರ್ಯನ ಆಚೀಚೆ ಬುಧ, ಶುಕ್ರಗಳು ಕಾಣುತ್ತಿದ್ದವು.

ಭೂಮಿ ತನ್ನ ಕಕ್ಷೆಯಲ್ಲೊಂದು ಮುಖ್ಯ ಹಂತವನ್ನು ಈ ತಿಂಗಳಲ್ಲಿ ದಾಟಲಿದೆ. ೨೦ರಂದು ದಕ್ಷಿಣಾಯನ. ಸುಡುಬಿಸಿಲಿನ ಬೇಗೆಯ ಮುಕ್ತಾಯದ ಹಂತ. ಆ ದಿನ ಹಗಲಿನ ಅವಧಿ ಗರಿಷ್ಠ.

ಮಾರ್ಗದರ್ಶಿ ಚಂದ್ರ ಪ್ರತಿ ರಾತ್ರಿ ನಕ್ಷತ್ರ ಪರಿಚಯ ಮಾಡಿಕೊಡುತ್ತಾ ಮುನ್ನಡೆಯುವಾಗ, ಗ್ರಹಗಳನ್ನು ಪರಿಚಯ ಮಾಡಿಕೊಡುತ್ತಾನೆ. ೪ರಂದು ಅಮಾವಾಸ್ಯೆಯಾದ ಕೆಲವೇ ಗಂಟೆಗಳ ನಂತರ ಶುಕ್ರದ ಜೊತೆಗೂಡುತ್ತಾನೆ. ಆದರೆ ಅದು ನಮಗೆ ಕಾಣುವುದಿಲ್ಲವಲ್ಲ. ಅದೇ ದಿನ ಬುಧಗ್ರಹದ ಜೊತೆಗೆ ಕಾಣುವುದಾದರೂ ಅದೂ ನಮಗೆ ಕಾಣುವುದಿಲ್ಲ. ೮ರಂದು ಬುಧ-ಶುಕ್ರಗಳು ಪಕ್ಕಪಕ್ಕವೇ ಇರುತ್ತವೆ. ೮ರಂದು ಚಂದ್ರನ ಪಕ್ಕ ಕಾಣುವ ಚುಕ್ಕೆಯೇ ಮಂಗಳ. ಮಂಗಳದ ಆಚ್ಛಾದನೆ ಕಳೆದ ತಿಂಗಳು ನಡೆದಿತ್ತು. ಮೋಡದ ಕಾರಣ ಈ ಘಟನೆ ಕಾಣದಂತಾಗಿತ್ತು. ಈ ತಿಂಗಳೂ ಆಚ್ಛಾದನೆ ನಡೆಯಲಿದೆ. ಆದರೆ ಅದು ನಮಗೆ ಕಾಣುವುದಿಲ್ಲ. ೯ರಂದು ಚಂದ್ರನ ಪಕ್ಕ ಎರಡು ಚುಕ್ಕೆಗಳು ಕಾಣುವುವು. ಒಂದು ಮಘ ನಕ್ಷತ್ರ; ಇನ್ನೊಂದು ಶನಿಗ್ರಹ. ಮುಂದೆ ೨೩ರಂದು ಚಂದ್ರ ನೆಪ್ಚೂನ್ ಗ್ರಹವನ್ನು ಆಚ್ಛಾದಿಸುವುದಾದರೂ ಅದು ನಮಗೆ ಕಾಣಲು ಅನುಕೂಲಕರವಾಗಿಲ್ಲ.

ಬೆಳಗಿನ ಜಾವ ಬುಧ-ಶುಕ್ರ ಒಂದನ್ನೊಂದು ಸಂಧಿಸಿ ಬೇರ್ಪಟ್ಟ ಹಾಗೆ ಸಂಜೆ ಮಂಗಳ ಮತ್ತು ಶನಿಗ್ರಹಗಳು ಪರಸ್ಪರ ಸಮೀಪಿಸುತ್ತಿವೆ. ಈ ಆಟವನ್ನು ಬರಿಗಣ್ಣಿನಿಂದಲೇ ಗುರುತಿಸಬಹುದು.




ಮಧ್ಯರಾತ್ರಿಯ ಹೊತ್ತಿಗೆ ಧನುರಾಶಿಯಲ್ಲಿ ಗುರುಗ್ರಹವನ್ನು ಕಾಣಬಹುದು.

ಸಾಧಾರಣವಾಗಿ ಜೂನ್ ತಿಂಗಳಲ್ಲಿ ಉಲ್ಕಾವೃಷ್ಟಿಯೇನೂ ಇಲ್ಲವಾದರೂ ೧೯೯೮ ಮತ್ತು ೨೦೦೪ರಲ್ಲಿ ಬೂಟಿಸ್ (ಸಹದೇವ) ಪುಂಜದಿಂದ ಹೊರಟಂತೆ ಕಾಣುವ ಬೂಟಿಡ್ಸ್ ಎಂಬ ವೃಷ್ಟಿಯನ್ನು ಗುರುತಿಸಲಾಗಿತ್ತು. ಪಾನ್ಸ್-ವಿನ್ನೆಕೆ ಎಂಬ ಧೂಮಕೇತುವೇ ಈ ವೃಷ್ಟಿಗೆ ಕಾರಣ ಎಂದು ಊಹಿಸಲಾಗಿದೆ. ಜೂನ್ ೨೨ರಿಂದ ಜುಲೈ ೩ರವರೆಗೆ ಈ ವೃಷ್ಟಿಯ ಚಟುವಟಿಕೆ ನಡೆಯಲಿದೆ.

**ಖಗೋಳ ದಿನಚರಿ**

ಜೂನ್ ೨ ಶುಕ್ರ-ರೋಹಿಣಿ ಜೋಡಿ
೩ ಭೂಮಿ-ಚಂದ್ರರ ಅಂತರ ಕನಿಷ್ಠ ೧೮:೪೨ಕ್ಕೆ
೪ ಅಮಾವಾಸ್ಯೆ ೦೦:೫೩ಕ್ಕೆ
ಚಂದ್ರ-ಶುಕ್ರ ಜೋಡಿ
ಚಂದ್ರ - ಬುಧ ಜೋಡಿ ಬುಧಗ್ರಹದ ಯುತಿ
೮ ಬುಧ-ಶುಕ್ರದ ನಡುವೆ ೩ ಡಿಗ್ರಿ ಅಂತರ
ಮಂಗಳ - ಚಂದ್ರ ಜೋಡಿ (ಆಚ್ಛಾದನೆ ಕಾಣುವುದಿಲ್ಲ)*
೯ ಶುಕ್ರಗ್ರಹದ ವಿಯುತಿ
ಶನಿ-ಚಂದ್ರರ ನಡುವೆ ೩ ಡಿಗ್ರಿ*
೧೦ ಚಾಂದ್ರಮಾಸದ ಮೊದಲ ಪಾದ
೧೬ ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ
೧೮ ಹುಣ್ಣಿಮೆ ೨೩:೦೦ಕ್ಕೆ
೨೧ ದಕ್ಷಿಣಾಯನ ೦೫:೨೯ಕ್ಕೆ
೨೬ ಚಾಂದ್ರಮಾಸದ ಕೊನೆಯ ಪಾದ
ಜುಲೈ ೧ ಮಂಗಳ - ಮಘ ಜೋಡಿ*
ಬುಧ - ಚಂದ್ರ ಜೋಡಿ
ಬುಧಗ್ರಹದ ಗರಿಷ್ಠ ಕೋನೋನ್ನತಿ

* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ



ಜೂನ್ ೮ರ ಸಂಜೆ ಚಂದ್ರನೊಡನೆ ಶನಿ, ಮಘ ಮತ್ತು ಮಂಗಳ

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ದೇವರು ಚಿಕ್ಕಪ್ಪ

ದೇವರು ಚಿಕ್ಕಪ್ಪ ಸ್ವರ್ಗಸ್ಥರಾದರು ಎನ್ನುವುದಿಲ್ಲ; ಸ್ವರ್ಗ ನರಕ ಪುನರ್ಜನ್ಮಗಳ ಬಗ್ಗೆ ನಂಬಿಕೆಯಿರದಿದ್ದ ಅವರ ಆತ್ಮಕ್ಕೆ ಅಶಾಂತಿಯುಂಟಾಗಬಹುದು. ಇಷ್ಟೇ ಹೇಳುತ್ತೇನೆ: ನಿನ್ನೆ ರಾತ್ರಿ ಅವರಿದ್ದರು; ಇವತ್ತು ಬೆಳಿಗ್ಗೆ ಇಲ್ಲ. ಈಗ ಉಳಿದಿರುವುದು ಸ್ವಾರಸ್ಯಕರವೆನಿಸಿಯೂ ಚಿಂತನಾರ್ಹವಾಗಿರುವ ಕೆಲವು ನೆನಪುಗಳು ಮಾತ್ರ. ಅವುಗಳನ್ನು ದಾಖಲಿಸುವುದಷ್ಟೇ ಅವರ ಆತ್ಮಕ್ಕೆ, ಆತ್ಮವೆಂಬುದೊಂದಿದ್ದರೆ, ಸಲ್ಲಿಸಬಹುದಾದ ಶ್ರದ್ಧಾಂಜಲಿ.

ದೇವರಿದ್ದಾನೆ ಎಂದು ನಂಬಲು ಮತ್ತು/ಅಥವಾ ಇಲ್ಲವೆಂದು ತಳ್ಳಿಹಾಕಲು ಸಾಧ್ಯವಾಗದಂಥ ವಿಲಕ್ಷಣ ಸ್ಥಿತಿಗೆ ನನ್ನನ್ನು ತಂದದ್ದು ಈ ದೇವರು ಚಿಕ್ಕಪ್ಪನೇ. ''ಇಂದಿನ ಹಲವು ದೇವಾಲಯಗಳು ಪೂರ್ತಿ ಕಮರ್ಷಿಯಲ್ ಆಗಿಬಿಟ್ಟಿವೆ. ಅರ್ಚಕವೃತ್ತಿ ಆನುವಂಶಿಕವಾಗಿ ಉಳಿದಿಲ್ಲ. ಸ್ವರ ಉದಾತ್ತ ಅನುದಾತ್ತಗಳ ಅರ್ಥ ವ್ಯತ್ಯಾಸ ತಿಳಿಯದವರೂ ಮಂತ್ರ ಪಠಿಸುತ್ತಾರೆ. ನಾಲ್ಕು ಪಾದಗಳ ಅನುಷ್ಟುಪ್ ಶ್ಲೋಕಗಳು ಎರಡು-ಎರಡೂವರೆ ಪಾದಗಳಲ್ಲಿಯೇ ಮುಗಿಯುತ್ತವೆ. ತಟ್ಟೆಗೆ ಬೀಳುವ ದುಡ್ಡಿನ ಮೇಲೆಯೇ ಅವರ ಕಣ್ಣು... ಅವರ ನಾಟಕ, ಬೆಳಿಗ್ಗೆ ಐದು ಗಂಟೆಯ ಸುಪ್ರಭಾತಮ್‌ನಿಂದ ಹಿಡಿದು ರಾತ್ರಿ ಹತ್ತರವರೆಗೆ ಆಗುವ ಸದ್ದುಗದ್ದಲಗಳಿಗೆ ಹೆದರಿ, ದೇವರಿದ್ದರೂ ಅವನು ದೇವಾಲಯದಿಂದ ಪರಾರಿಯಾಗಬಹುದು'' ಎಂದು ಖಾರವಾಗಿ ಪ್ರತಿಕ್ರಿಯಿಸುವ ದೇವರು ಚಿಕ್ಕಪ್ಪ ಒರಿಜಿನಲ್ ಪುರೋಹಿತರು : ಅವರಿಗೆ ಅಕಸ್ಮಾತ್ ದೇವರ ಗುಡಿಗೆ ಹೋಗುವ ಸಂದರ್ಭ ಬಂದರೆ, ದೇವರೆದುರೇ ದಿಢೀರ್ ನಾಸ್ತಿಕತೆಯ ಭಾವನೆ ಮೂಡುತ್ತಿತ್ತಂತೆ. ಆದರೆ ಚೋದ್ಯವೆಂದರೆ, ಸ್ವಭಾವತಃ ನಾಸ್ತಿಕನಾಗಿರುವ ನನಗೆ ಈ ಚಿಕ್ಕಪ್ಪನ ಎದುರು ನಿಂತಾಗಲೆಲ್ಲ, ದೇವರ ನೆನಪಾಗುತ್ತಿತ್ತು. ಇದಕ್ಕೆ ಅವರ ಹೆಸರು ಮಾತ್ರ ಕಾರಣವಲ್ಲ.

ಅಲ್ಲದೆ, ಹೆಸರಿನಲ್ಲೇನಿದೆ ಮಹಾ? ನನ್ನ ಅಪ್ಪಯ್ಯ ಮತ್ತು ಈ ಚಿಕ್ಕಪ್ಪ ಅವಳಿಜವಳಿಗಳಂತೆ (ಇದೂ ನಂಬಲಸಾಧ್ಯವಾದ ಒಂದು ವಿಸ್ಮಯ). ಅಪ್ಪಯ್ಯ ರಾಮದೇವ; ಚಿಕ್ಕಪ್ಪ ಕೃಷ್ಣದೇವ. ಇವರೇ ಮುಂದೆ ದೊಡ್ಡ ದೇವರು ಭಟ್ಟರೂ ಚಿಕ್ಕದೇವರು ಭಟ್ಟರೂ ಆದರು. ಇಬ್ಬರೂ ಬಾಲ್ಯದಲ್ಲಿ ಅಜ್ಜಯ್ಯನಿಂದ ಸಂಸ್ಕೃತ ಶಿಕ್ಷಣ, ಋಗ್ವೇದ, ಪೌರೋಹಿತ್ಯ (ಪೂರ್ವ ಅಪರ ಪ್ರಯೋಗಗಳು) ಕಲಿತರು. ಜ್ಯೋತಿಷ್ಯ ಮಾತ್ರ ಇವರಿಗೆ ಒಲಿಯಲ್ಲಿಲ್ಲವಂತೆ - ಸಾಮಾನ್ಯವಾಗಿ ವೈದ್ಯರ ಮಕ್ಕಳಿಗೆ ಡಾಕ್ಟರಿಕೆ, ಮೇಷ್ಟ್ರುಗಳ ಮಕ್ಕಳಿಗೆ ಅಧ್ಯಾಪಕ ವೃತ್ತಿ ಒಲಿಯದ ಹಾಗೆ. ಅಜ್ಜಯ್ಯ ಸಾಯುವಾಗ, ತಮ್ಮ ಶಿಷ್ಯರ ಮನೆಗಳನ್ನು ಇಬ್ಬರು ಮಕ್ಕಳಿಗೂ ಸಮವಾಗಿ ಪಾಲುಮಾಡಿಕೊಟ್ಟರಂತೆ. (ಪಾಲು ಮಾಡಿಕೊಡಲು ಮತ್ತೇನು ತಾನೇ ಇತ್ತು ಅವರಲ್ಲಿ?) ಆದರೆ ಚಿಕ್ಕಪ್ಪ ತಮ್ಮ ಪಾಲಿಗೆ ಬಂದ ಶಿಷ್ಯರ ಹೊಣೆಯನ್ನು ಅಣ್ಣನಿಗೆ ವಹಿಸಿ, ಮೇಷ್ಟ್ರು ಕೆಲಸಕ್ಕೆ ಸೇರಿದರಂತೆ. ಹಾಗೆಂದು ಕಲಿತ ಯಾವುದನ್ನೂ ಅವರು ಮರೆಯಲಿಲ್ಲ. ಕೆಲವು ಮಂತ್ರಗಳ ಘನಪಾಠವನ್ನೂ ತಪ್ಪಿಲ್ಲದೆ ಹೇಳಬಲ್ಲ, ನಾಮಕರಣದಿಂದ ಹಿಡಿದು ಅಂತ್ಯಸಂಸ್ಕಾರದವರೆಗಿನ ಪೌರೋಹಿತ್ಯ ಕಾರ್ಯವನ್ನು ಯಶಸ್ವಿಯಾಗಿ ನಿಭಾಯಿಸಬಲ್ಲ ಸಾಮರ್ಥ್ಯವನ್ನು ಅವರು ಉಳಿಸಿಕೊಂಡಿದ್ದರು. ಮನೆಯಲ್ಲಿ ಪ್ರತಿವರ್ಷ ನಡೆಯುವ ಅಜ್ಜಯ್ಯ ಅಜ್ಜಿಯರ ಶ್ರಾದ್ಧಕ್ಕೆ, ನಾಗನಕಲಶ, ಉಪಾಕರ್ಮ, ಸತ್ಯನಾರಾಯಣ ವ್ರತ, ಚಂಡಿಕಾ ಪಾರಾಯಣಗಳಿಗೆ ಅವರು ಯಾರನ್ನೂ ಕರೆಯುತ್ತಿರಲಿಲ್ಲ. ದೇವರ ವಿಗ್ರಹದ ಮೇಲೆ ಅಕ್ಷತೆ ಕಾಳುಗಳನ್ನು ಇರಿಸಿ, ''ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ'' ಎಂಬ ಮಂತ್ರ ಪಠಿಸುತ್ತಾ, ಅಕ್ಷತೆಯೊಂದಿಗೆ ಪವಿತ್ರವನ್ನು ತೆಗೆದುಕೊಂಡು ಬೆರಳಿಗೇರಿಸಿ ತಾವೇ ಪೌರೋಹಿತ್ಯ ನಿರ್ವಹಿಸುತ್ತಿದ್ದರು. ''ವರ್ಷದ ಇಂತಹ ಒಂದೆರಡು ದಿನಗಳಲ್ಲಾದರೂ ಬ್ರಾಹ್ಮಣ ಮುತ್ತೈದೆಯರನ್ನು ಕರೆದು ಊಟ ಹಾಕುವುದಿಲ್ಲವಲ್ಲ? ಜಿಪುಣಾಗ್ರೇಸರರು'' ಎಂದು ಚಿಕ್ಕಮ್ಮ ಹಂಗಿಸುತ್ತಿದ್ದರು. (ಅವರೂ ಈಗ ಇಲ್ಲ) ಆದರೆ ದೇವರು ಚಿಕ್ಕಪ್ಪ ಜಿಪುಣರಲ್ಲ; ಶ್ರಾದ್ಧಕ್ಕೋ ನಾಗನ ಕಲಶಕ್ಕೋ ಪುರೋಹಿತರಿಗೆ ಕೊಡಬೇಕಾಗಿದ್ದ ಐವತ್ತೋ ನೂರೋ ರೂಪಾಯಿಗಳನ್ನು ಯಾವಾಗಲೋ ಯಾವುದೋ ಸತ್ಕಾರ್ಯಕ್ಕಾಗಿ ಕೊಡುಗೆ ನೀಡುತ್ತಿದ್ದರು.

ಈ ಪಾಟಿ ಮಂತ್ರಗಳನ್ನೂ ಶ್ಲೋಕಗಳನ್ನೂ ತಿಳಿದ ಅವರು ಒಂದೇ ಒಂದು ದಿನವೂ ಚಂದವಾಗಿ ದೇವರ ಪೂಜೆ ಮಾಡಿಲ್ಲವಲ್ಲ ಎಂಬುದು ಚಿಕ್ಕಮ್ಮನ ಅಳಲು. ನಾನು ಆಗಾಗ ಅವರಿಗೆ ಹೇಳುತ್ತಿದ್ದೆ: ''ಬೆಂಗಳೂರಿಗೆ ಬನ್ನಿ, ಒಂದು ಮೊಬೈಲ್, ಒಂದು ಸ್ಕೂಟರ್ ಕೊಂಡುಕೊಂಡು, ಭರ್ಜರಿ ಬಿಸಿನೆಸ್ ಮಾಡಬಹುದು, ಕೈತುಂಬ ಗಳಿಸಬಹುದು.'' ನನ್ನ ಈ ಸಲಹೆಗೆ ಅವರ ಪ್ರತಿಕ್ರಿಯೆಯೆಂದರೆ ಅಮಾಯಕ ಹಸುಳೆಯ ಮುಗ್ಧ ಮುಗುಳ್ನಗು.

ಈಗ, ಪ್ರತಿದಿನ ಬೆಳಿಗ್ಗೆ ದೇವರು ಚಿಕ್ಕಪ್ಪ 'ತೊಳೆದಿಡುವ' ದೇವರುಗಳ ಸಂಸಾರದ ಬಗ್ಗೆ ಎರಡು ಮಾತು. ಈ ದೇವರುಗಳೂ ಅವರ ಸ್ವಯಾರ್ಜಿತವಲ್ಲ, ಪಿತ್ರಾರ್ಜಿತ, ಅಜ್ಜಯ್ಯ ಪಾಲುಮಾಡಿ ಕೊಡುವಾಗ ಬಂದಿರುವಂಥವು. ಚಿಕ್ಕಪ್ಪನ ಚಿಕ್ಕ ಸಂಪುಟದಲ್ಲಿ ಭರ್ತಿ ಒಂದು ಡಜನ್ ದೇವರುಗಳಿದ್ದರು. ನಾಲ್ಕು ಸಾಲಿಗ್ರಾಮಗಳು. ಒಂದು ಚಪ್ಪಟೆ ಕೆಂಪು ಕಲ್ಲು (ಅದು ಗಣಪತಿಯಂತೆ), ಮೂರು ಬೆಳ್ಳಿಯ ಸತ್ಯನಾರಾಯಣ ವಿಗ್ರಹಗಳು, ಮೂರು ಚಿಕ್ಕ, ಹೆಡೆಯೆತ್ತಿದ ನಾಗನ ವಿಗ್ರಹಗಳು (ಒಂದು ಚಿನ್ನದ್ದು, ಇನ್ನೆರಡು ಬೆಳ್ಳಿಯವು), ಮತ್ತೊಂದು ಅಂಬೆಗಾಲು ಕೃಷ್ಣನ ಪುಟಾಣಿ ಬೆಳ್ಳಿಯ ವಿಗ್ರಹ. ಇವೆಲ್ಲವೂ ಅಜ್ಜಯ್ಯನಿಗೆ ದಾನದ ರೂಪದಲ್ಲಿ ಸಿಕ್ಕಿದುವು. ದೇವರು ಚಿಕ್ಕಪ್ಪ ಮೇಷ್ಟ್ರರಾದ್ದರಿಂದ, ಅವರ ಮನೆಯ ದೇವರುಗಳ ಸಂಖ್ಯೆ ನಮ್ಮ ಮನೆಯ ದೇವರುಗಳ ಸಂಖ್ಯೆಯಂತೆ ಏರುತ್ತ ಹೋಗಲಿಲ್ಲ... ನಾಗನ ಮೂರು ವಿಗ್ರಹಗಳು ಎಷ್ಟು ಚಿಕ್ಕವು ಎಂದರೆ, ಎಷ್ಟೋ ಸಲ ಅವುಗಳಲ್ಲಿ ಒಂದೋ ಎರಡೋ ತಲೆತಪ್ಪಿಸಿಕೊಳ್ಳುತ್ತಿದ್ದವು. ಹರಿವಾಣದ ಅಭಿಷೇಕ ಜಲದೊಂದಿಗೆ ತೇಲಿಕೊಂಡು ಹೋಗಿ, ತೆಂಗಿನ ಮರದ ಕಟ್ಟೆಯನ್ನೋ ತುಳಸೀ ಕಟ್ಟೆಯನ್ನೋ ಸೇರುತ್ತಿದ್ದವು. ಮಾರನೆಯ ದಿನವೋ ಮೂರನೆಯ ದಿನವೋ ವಿಗ್ರಹ ಕಾಣೆಯಾದುದನ್ನು ಗಮನಿಸದ ದೇವರು ಚಿಕ್ಕಪ್ಪ, ದಪ್ಪ ಕನ್ನಡಕ ಹಾಕಿಕೊಂಡು,



# ಕವಿತೆಯ ಹಂಗಿಲ್ಲ



**ಈ** ಜಗತ್ತು ತಲೆಕೆಡಿಸಿಕೊಳ್ಳುವುದಿಲ್ಲ
ಕವಿತೆಯ ಬಗೆಗೆ

ಹಸಿವೆಗೆ ರೂಪಕವ
ಉಡಿಸಿದರೆ
ತುಂಬುವುದಿಲ್ಲ
ಹೊಟ್ಟೆ
ಬೆತ್ತಲೆಗೆ ಉಪಮೆಗಳ
ತೊಡಿಸಿದರೆ
ಮುಗಿಯಲಾರದು
ನಗ್ನತೆ
ಭಗ್ನ ಪ್ರತಿಮೆಗಳು
ನಾಚಿ ನೀರಾಗಿ
ನಿಂತಾಗ
ಈ ಜಗತ್ತು ಮತ್ತೆ ಮತ್ತೆ
ತಟ್ಟಿ ತೊಡೆ
ಸೆಡ್ಡು ಹೊಡೆಯುತ್ತದೆ

ಈ ಜಗತ್ತಿಗೆ ಕವಿತೆಯೆಂದರೆ
ತಮಾಷೆ

ರುಂಡ ಕತ್ತರಿಸಿಬಿದ್ದ
ಬೀದಿಯಲಿ ಹಾಡಿದ
ಭಾವಗೀತೆ
ನೊಗ ಮುರಿದುಬಿದ್ದ
ಎತ್ತುಗಳ ಎದುರು
ನುಡಿದ ಕೊಳಲು
ಪದ ಮುರಿದು ಅರ್ಥ
ಕೊಡುವ ಹೊತ್ತಿಗೆ
ಇನ್ನೆಲ್ಲೋ ಹಾರಿ ಹೋದ
ಜೀವ.
ಕವಿತೆ ಎಂದರೆ ಈ ಜಗತ್ತಿಗೆ
ಕಿಲುಬು ಕಾಸು

ಸುಟ್ಟು ನೆಲಕ್ಕೊ
ರಗಿದ
ಗುಡಿಸಲುಗಳಲಿ
ಕಂಡ ಚಿಗುರು
ಗಬಕಾಯಿಸಲು ಕಾದು ಕುಳಿತ
ಸುಳಿ ತಣ್ಣನೆ
ಇಕ್ಕೆಲಗಳಲಿ
ಸರಿದಾಡುವ ಮರಳು
ಕವಿತೆಯೆಂದರೆ ಒಲ್ಲೆ ಎನ್ನುತ್ತದೆ ಜಗತ್ತು
ಇನ್ನಾದರೂ,

ಬರೆಯುವ ಬೆರಳು ಬಯಲಿಗೆ ಬರಬಾರದೇ ?

ವಾಸುದೇವ ನಾಡಿಗ್
ನವೋದಯ ವಿದ್ಯಾಲಯ, ಎನಿಗದಲೆ - ೫೬೩ ೧೨೫, ಚಿಂತಾಮಣಿ, ಕೋಲಾರ

ತುಳಸಿಕಟ್ಟೆ, ತೆಂಗಿನ ಮರದ ಕಟ್ಟೆಗಳನ್ನು ಜಾಲಾಡಿ, ಕಳೆದುಹೋದ ದೇವರುಗಳನ್ನು ಪತ್ತೆ ಮಾಡಿ, ಓಡಿದು ತಂದು, ಮತ್ತೆ ಸೆರೆಮನೆ ಸೇರಿಸುತ್ತಿದ್ದರು. ''ನೀವು ಹುಷಾರಾಗಿರದಿದ್ದರೆ, ಮುಂದೊಂದು ದಿನ ಸಂಪುಟ ಖಾಲಿಯಾಗಿ, ನಮ್ಮ ಮನೆಯಲ್ಲಿ ದೇವರುಗಳೇ ಇಲ್ಲವಾಗುತ್ತದೆ'' ಎಂಬ ಚಿಕ್ಕಮ್ಮನ ಮಾತಿಗೆ ''ಬೇಕಾದರೆ ಇರಲಿ, ಬೇಡವಾದರೆ ಹೋಗಲಿ'' ಎಂಬ ಉಡಾಫೆ ಉತ್ತರ ಕೊಟ್ಟರೂ, ದೇವರು ಚಿಕ್ಕಪ್ಪ ಪ್ರತಿದಿನ ಪೂಜಾ ನಂತರ, ವಿಗ್ರಹಗಳ ಗಣತಿ ನಡೆಸುವ ಅಭ್ಯಾಸವನ್ನು ಕಾಲಕ್ರಮೇಣ ರೂಢಿಸಿಕೊಂಡರು. ಆ ಸಂಪುಟವೋ - ಚಿಕ್ಕಮ್ಮ ಅಣಕಿಸುತ್ತಿದ್ದಂತೆ, ಒಂದು ಕಿಷ್ಕಿಂಧೆ. ''ಅಲ್ಲಿ ದೇವರುಗಳು ಉಸಿರು ಕಟ್ಟಿ ಸತ್ತುಹೋದರೂ ಆಶ್ಚರ್ಯವಿಲ್ಲ!''

ದೇವರು ಚಿಕ್ಕಪ್ಪ, ನನ್ನ ಸೋದರತ್ತೆಯ ಅಭಿಪ್ರಾಯದಲ್ಲಿ ''ಸ್ವಂತ ಮನೆಯಲ್ಲಿ ಮಾತ್ರ ಬ್ರಾಹ್ಮಣ.'' ಪರವೂರುಗಳಿಗೆ ಹೋದಾಗ ಅವರು ಯಾವ ಉಡುಪಿ ಹೋಟೆಲಿನಲ್ಲಾದರೂ ಊಟ ಮಾಡಲು ತಯಾರು – ನಾನ್‌ವೆಜ್ ಬಿಟ್ಟು. ಉಡುಪಿ ಶ್ರೀಕೃಷ್ಣ ಭವನ ಎಂಬ ಬೋರ್ಡ್ ಇದ್ದ ಮಾತ್ರಕ್ಕೆ ಅದು ಬ್ರಾಹ್ಮಣರದು ಎನ್ನುವಂತಿಲ್ಲ. ಜನಿವಾರ ಹಾಕಿಕೊಂಡು ಅಡಿಗೆಮನೆಯಲ್ಲಿ ಇಡ್ಲಿಗೆ ಹಿಟ್ಟು ರುಬ್ಬಿದ ಮಾತ್ರಕ್ಕೆ ಶೂದ್ರರು ಬ್ರಾಹ್ಮಣರಾದಾರೇನು ? ಎಂದು ತಮಾಷೆಯಾಗಿ ಹೇಳುತ್ತಿದ್ದರೂ, ವಾಸ್ತವವಾಗಿ ದೇವರು ಚಿಕ್ಕಪ್ಪ ಜಾತ್ಯತೀತರು. ವ್ಯಕ್ತಿಯ ಜಾತಿಯನ್ನು ನಿರ್ಧರಿಸುವುದು ಅವನ ಹುಟ್ಟಲ್ಲ; ಅವನ ಆಚರಣೆ ಎಂಬುದು ಅವರ ಅಭಿಪ್ರಾಯವಾಗಿತ್ತು.

ದೇವರು ಚಿಕ್ಕಪ್ಪನ ದಿನಚರಿ ಶುರುವಾಗುತ್ತಿದ್ದದ್ದೇ ದೇವರ ಪೂಜೆಯಿಂದ. ಅವರದ್ದು ದೇವರ ಪೂಜೆಯೋ ಅಥವಾ ದೇವರ ಪೂಜೆಯ 'ಶಾಸ್ತ್ರವೋ' ಎಂದು ನನ್ನ ಪ್ರಿಯ ವಾಚಕರೇ ಹೇಳಬೇಕು. ಬೆಳಿಗ್ಗೆ ಬಾನಲ್ಲಿ ಮಿನುಗುವ ನಕ್ಷತ್ರಗಳನ್ನು ವೀಕ್ಷಿಸಿ, ಗಂಟೆಯೆಷ್ಟೆಂದು ಕರಾರುವಾಕ್ ತಿಳಿಯಬಲ್ಲ ದೇವರು ಚಿಕ್ಕಪ್ಪ ಐದಕ್ಕೇ ಎದ್ದು ಮಾವಿನೆಲೆಯಿಂದ ಹಲ್ಲು ತಿಕ್ಕಿಕೊಂಡು, ಅದರ ದಂಟಿನಿಂದ ನಾಲಗೆ ಕೀಸಿಕೊಂಡು, ತಮ್ಮ ಪುಷ್ಪೋದ್ಯಾನದಿಂದ ಏಳೆಂಟು ಹೂಗಳನ್ನು ಕುಯ್ದುಕೊಂಡು ಬಂದು, ದೇವರ ಮನೆಯಲ್ಲಿರಿಸಿ, 'ಪ್ರಾತರಗ್ನಿಂ ಪ್ರಾತರಿಂದ್ರ ಹವಾಮಹೇ' ಇತ್ಯಾದಿ ಮಂತ್ರಗಳನ್ನು ಪಠಿಸುತ್ತಾ, ತಣ್ಣೀರ ಸ್ನಾನದ ಶಾಸ್ತ್ರವನ್ನು ಪೂರೈಸುತ್ತಿದ್ದರು. ಪೂಜೆಗೆ ಪರಿಶುದ್ಧ ಭಕ್ತಿಯೇ ಮುಖ್ಯ ಎಂಬ ಅವರ ಪೂಜಾ ವಿಧಾನ ತುಂಬ ಸರಳ. ಗಂಧ ಪುಷ್ಪದೀಪ ಆರತಿ ಊದಬತ್ತಿ ಏನೂ ಇಲ್ಲದಿದ್ದರೂ ಸರಿ, ಕೆಲವು ಸಲ ನೈವೇದ್ಯಕ್ಕೂ ಬರಿಯ ಒಂದು ಚಮಚ ನೀರೇ – ''ಅಮೃತಂ ನಿವೇದಯಾಮಿ''. ''ಎಲ್ಲವನ್ನೂ ಮಂತ್ರದಿಂದಲೇ ಮುಗಿಸಬಲ್ಲ ನೀವು ಸ್ನಾನವನ್ನಾದರೂ ಏಕೆ ಮಾಡುತ್ತೀರಿ ?'' ಎಂದು ಚಿಕ್ಕಮ್ಮ ಹಂಗಿಸುತ್ತಿದ್ದುದರಿಂದ ನೈವೇದ್ಯಕ್ಕೆ ಬೇರೇನೂ ಇಲ್ಲದೆ ಇದ್ದರೆ, ಆ ದಿನದ ಮಧ್ಯಾಹ್ನದ ಅಡುಗೆಗೆ ಬಳಸುವ ಕುಸುಬಲಕ್ಕಿಯನ್ನೇ ದೇವರಿಗೆ ನೈವೇದ್ಯ ಮಾಡುತ್ತಿದ್ದರು. ಮನೆಗೆ ನೆಂಟರಿಷ್ಟರು ಬಂದಿದ್ದರೆ, ಅವರ ಬೆಳಗ್ಗೆಯ ಸುಖನಿದ್ರೆಗೆ ಭಂಗ ಉಂಟಾಗಬಾರದೆಂಬ ಮುನ್ನೆಚ್ಚರಿಕೆಯಿಂದ ಪೂಜೆಯ ಕಾಲದಲ್ಲಿ ಗಂಟೆಯನ್ನೂ ಢಣಢಣ ಬಾರಿಸುತ್ತಿರಲಿಲ್ಲ. ಮೂಕಾರತಿ ಮಾಡುತ್ತಿದ್ದರು ಎಂದರೆ ನೀವು ನಂಬಲಿಕ್ಕಿಲ್ಲ.

ಸತ್ಯ ಸಂಕುಲ, ಜೀವವೈವಿಧ್ಯಗಳೂ ದೇವರ ಸೃಷ್ಟಿ,

ಅವುಗಳನ್ನು ಪ್ರೀತಿಯಿಂದ ಪಾಲಿಸಬೇಕು ಎಂದು ನಂಬಿದ್ದ ದೇವರು ಚಿಕ್ಕಪ್ಪನ ದೃಷ್ಟಿಯಲ್ಲಿ ಮನೆಯ ಹಿತ್ತಲೇ ದೇವಾಲಯವಾಗಿತ್ತು. ಅಲ್ಲಿ ಎಷ್ಟೊಂದು ಜಾತಿಯ ಹೂಗಿಡಗಳು! ಅಗಸೆ, ನಂದಿಬಟ್ಟಲು, ಬೇರೆಬೇರೆ ಬಣ್ಣದ ದಾಸವಾಳಗಳು, ಸಂಜೆ ವೇಳೆ ಸುತ್ತಮುತ್ತ ಪರಿಮಳ ಹರಡುವ ಪಾರಿಜಾತ, ಜಾಜಿ, ಸೂಜಿಮಲ್ಲಿಗೆ, ದೊಡ್ಡಗಂಟೆ, ಕೆಂಪು ಬಿಳಿ ಮುಂತಾದ ಗೋರಟೆಗಳು, ನಾಮಗೋರಟೆ, ಸಂಜೆಮಲ್ಲಿಗೆ, ಸೇವಂತಿಗೆ... ಹೂಗಳು ಗಿಡಗಳಲ್ಲಿದ್ದರೇ ಚಂದ ಎನ್ನುವ ದೇವರು ಚಿಕ್ಕಪ್ಪ ಕೆಲವೇ ಹೂಗಳನ್ನು ಕುಯ್ಯುತ್ತಿದ್ದರು. ದೇವರನ್ನು ಹೂಗಳಿಂದ ಮುಚ್ಚುವುದೆಂದರೆ ಅವರಿಗೆ ಆಗದು. ಪ್ರತಿದಿನ ಬೆಳಿಗ್ಗೆ ಬಂದು ಪಾರಿಜಾತ ಮರದ ಪ್ರತಿ ರೆಂಬೆಗಳನ್ನು ಅಲ್ಲಾಡಿಸಿ ಹೂಗಳನ್ನು ನೆಲಕ್ಕೆ ಜೀಳಿಸಿ ಸಂಗ್ರಹಿಸುವ ಪುಷ್ಪಚೋರ ಬಾಯಿರಿಯವರನ್ನು ಅವರು ಒಂದು ದಿನ ಹಿಡಿದು 'ಭೂತ ಬಿಡಿಸಿದ್ದರು'. ಸಸ್ಯಗಳಿಗೂ ಜೀವವಿದೆ, ಅವುಗಳಿಗೂ ನೋವುಂಟಾಗುತ್ತದೆ ಎಂದು ನಂಬಿದ್ದ ದೇವರು ಚಿಕ್ಕಪ್ಪ ತಮ್ಮ ಹಿತ್ತಲಿನ ಪಕ್ಕದ ಸರ್ಕಾರಿ ಸ್ಥಳದಲ್ಲಿ ತೋಡುಮಾಡಿ, ಕೆರೆಯ ನೀರನ್ನು ಗದ್ದೆಗಳಿಗೆ ಸಾಗಿಸಲು ಯೋಜಿಸಿದ್ದ ಶೆಟ್ಟರ ಪ್ರಯತ್ನಕ್ಕೆ ಕಲ್ಲು ಹಾಕಿದ್ದರು. ಹಲವು ವರ್ಷಗಳಿಂದ ಹುಲುಸಾಗಿ ಬೆಳೆದಿರುವ ಇಲ್ಲಿನ ಪೊದೆಗಳಲ್ಲಿ, ಬಳ್ಳಿಗಳಲ್ಲಿ ಆಶ್ರಯ ಪಡೆದಿರುವ ಹುಳುಹುಪ್ಪಟೆ, ಹಾತೆ ಪತಂಗ, ಎಲೆಹಾವು ಮತ್ತಿತರ ಕ್ರಿಮಿಕೀಟಗಳ ಗತಿಯೇನು? ಎಂದರೂ ಸೊಪ್ಪುಹಾಕದ ಶೆಟ್ಟರಿಗೆ "ಈ ಜಾಗ ನಾಗನ ಎಡೆ; ಇಲ್ಲೇನಾದರೂ ನೀವು ತೋಡುಮಾಡಿದರೆ, ಹಾವುಗಳು ನಿಮಗೆ ಉಪದ್ರವ ಕೊಡದೆ ಇರುವುದಿಲ್ಲ" ಎಂಬ ಬೆದರಿಕೆ ಹಾಕಿದ್ದರು. ಆಗ ಶೆಟ್ಟರು ತಮ್ಮ ಕೃಷಿಯೋಜನೆಯನ್ನು ಕೈ ಬಿಟ್ಟಿದ್ದರು.

ಇಂಥದ್ದೇ ಇನ್ನೊಂದು ಪ್ರಸಂಗ: ಬೊಂಬಾಯಿಗೆ ಹೋಗಿ ಉಡುಪಿ ಹೋಟೆಲ್ ಉದ್ಯಮ ಪ್ರಾರಂಭಿಸಿ ಕಂಡಾಪಟ್ಟೆ ದುಡ್ಡುಮಾಡಿಕೊಂಡ ಸೀನ ಸೇರೆಗಾರರು, ಹಾಡಿಯಲ್ಲಿ ದೊಡ್ಡ ಧೂಪದ ಮರದ ಬುಡದಲ್ಲಿದ್ದ ನಾಗವಿಗ್ರಹಗಳಿಗೆ ಗುಡಿಯೊಂದನ್ನು ನಿರ್ಮಿಸಲು ಆಸೆಪಟ್ಟಿದ್ದರು. ಆದರೆ ಗುಡಿಯ ನಿರ್ಮಾಣಕ್ಕೆ ಧೂಪದ ಮರವನ್ನೂ ಕಡಿಯಬೇಕಾದ್ದರಿಂದ ಅದಕ್ಕೆ ದೇವರು ಚಿಕ್ಕಪ್ಪ ಒಪ್ಪಿಗೆ ನೀಡಿರಲಿಲ್ಲ.

ಅವರಿಗೇನು? ಚಿಕ್ಕಮ್ಮನಿಗೇ ಚಿಕ್ಕಪ್ಪನ ವಿಲಕ್ಷಣ ನಡೆನುಡಿಗಳು ಹಿಡಿಸುತ್ತಿರಲಿಲ್ಲ. ಅವಳಿಗೆ ಆಡಂಬರ ಇಷ್ಟ. ದೇವರ ಮನೆ ಪರಿಮಳದಿಂದ ಗಮಗಮಿಸುತ್ತಿರಬೇಕು. ಮಂಗಳೂರಿನ ಗಣೇಶ ಬೀಡಿಯವರ ಕ್ಯಾಲೆಂಡರ್ ಆದರೂ ಸರಿಯೇ, ಗೋಡೆಗಳ ತುಂಬ ಹಲವು ದೇವರುಗಳ ಬಣ್ಣಬಣ್ಣದ ಚಿತ್ರಗಳಿರಬೇಕು. ಆದರೆ ಚಿಕ್ಕಪ್ಪನಿಗೋ – ಸರಳತೆ ಇಷ್ಟ. ಆದುದರಿಂದ ಹೆಂಡತಿ ಟೀಕಿಸಿದಾಗ, "ನಾನು ಮಾಡುವುದು ಇಷ್ಟೇ. ನೀನು ಏನು ಬೇಕಾದರೂ ಮಾಡಿಕೋ" ಎಂದುಬಿಟ್ಟಿದ್ದರು. ಚಿಕ್ಕಮ್ಮ ಪ್ರತಿದಿನ ಎಂಟು ಎಂಟೂವರೆಗೆ ತಲೆಸ್ನಾನ ಮಾಡಿ ತಮಗೆ 'ಬೇಕಾದ' ರೀತಿಯಲ್ಲಿ ದೇವರಿಗೆ ಪುನಃ ಪೂಜೆ ಮಾಡುತ್ತಿದ್ದರು. ದೇವರು ಚಿಕ್ಕಪ್ಪನ ವಿರೋಧಕ್ಕೂ ಮಣಿಯದೆ, ಹಿತ್ತಲಿನಿಂದ ಇನ್ನಷ್ಟು ಹೂಗಳನ್ನು ಕಿತ್ತುತಂದು ಹಾರಮಾಡಿ ದೇವರ ಫೋಟೋಗಳಿಗೆ ಅಲಂಕಾರ ಮಾಡುತ್ತಿದ್ದರು. ಊದಬತ್ತಿ ಹಚ್ಚಿ, ಗಣಗಣ ಗಂಟೆ ಬಡಿದು, ಸದ್ದು ಮಾಡಿ ಖುಷಿಪಡುತ್ತಿದ್ದರು. "ಇನ್ನಾದರೂ ಯಜಮಾನರಿಗೆ, ಮಂತ್ರಗಳನ್ನು ರಾಗವಾಗಿ ಹೇಳಿ, ಚಂದವಾಗಿ ನಿನ್ನ ಪೂಜೆ ಮಾಡುವ ಸದ್ಭಕ್ತಿ ನೀಡಪ್ಪ" ಎಂದು ಪ್ರಾರ್ಥನೆ ಮಾಡುತ್ತಿದ್ದರು. ನವರಾತ್ರಿಯಲ್ಲಂತೂ, ಎಲ್ಲ ದಿನ, ಕಿಸ್ಕಾರದಂತಹ ಕಾಟು ಹೂಗಳಾದರೂ ಸರಿಯೇ, ತಂದು ಸರಮಾಡಿ, ಎಲ್ಲ ಕ್ಯಾಲೆಂಡರ್‌ಗಳಿಗೂ ತೊಡಿಸಿ, ಧನ್ಯತಾ ಭಾವದಿಂದ ಬೀಗುತ್ತಿದ್ದರು. ಹಬ್ಬಹರಿದಿನಗಳಂದು ಆಚೆ-ಈಚೆ ಮನೆಯ ಮುತ್ತೈದೆಯರನ್ನು ಕರೆದು, ಕುಂಕುಮವಿರಿಸಿ, ಹಣ್ಣು, ರವಿಕೆಖಣಗಳನ್ನು, ಅರ್ಧಾಣೆ ಪಾವಲಿಜೊತೆ ನೀಡಿ, ಸಂಭ್ರಮಿಸುತ್ತಿದ್ದರು.

ಆಗ ಹೆಂಡತಿಯನ್ನು ಟೀಕಿಸಲು ಸಿಗುವ ಅವಕಾಶವನ್ನು ಬಳಸಿಕೊಳ್ಳದೆ ಬಿಡುತ್ತಿರಲಿಲ್ಲ ನಮ್ಮ ದೇವರು ಚಿಕ್ಕಪ್ಪ. "ನಿನಗೆ ವರ್ಷದ ಎಲ್ಲ ದಿನಗಳೂ ಹಬ್ಬವೇ. ನಿನಗೆ ಮಾತ್ರವೇ ಏನು? ಎಲ್ಲ ಹಿಂದೂಗಳಿಗೂ! ಅವರಿಗೆ ಶ್ರಾವಣ ಶನಿವಾರ, ಕಾರ್ತಿಕ ಸೋಮವಾರ, ಸಂಕಷ್ಟ ಚತುರ್ಥಿ, ಅಮಾವಾಸ್ಯೆ (?) ಸಂಕ್ರಾಂತಿ ಹುಣ್ಣಿಮೆಗಳೂ ಹಬ್ಬಗಳೇ". "ವಿಶೇಷದಿನಗಳಲ್ಲಿಯೂ ನಿಮ್ಮದು ಅದೇ ಮಾಮೂಲಿ ಪೂಜೆ" ಎಂಬ ಚಿಕ್ಕಮ್ಮನಿಗೆ "ಹಳೆಯ ಗಂಡ ನಿನಗಿಷ್ಟವಿಲ್ಲವಾದರೆ ಧಾರಾಳವಾಗಿ ಬದಲಿಸಿಕೊಳ್ಳಬಹುದು" ಎಂದು ಕುಶಾಲು ಮಾಡಿ ಚಿಕ್ಕಮ್ಮನ ಕೆನ್ನೆಗಳನ್ನು ಕೆಂಪು ಮಾಡುತ್ತಿದ್ದರು.

ಇಂಥ ರಸಿಕರಿಗೆ ಮಕ್ಕಳಾಗದೆ ಇದ್ದದ್ದು ಮಾತ್ರ ಬೇಜಾರಿನ ವಿಷಯ – ಮುಖ್ಯವಾಗಿ ಚಿಕ್ಕಮ್ಮನಿಗೆ. ದೇವರು ಚಿಕ್ಕಪ್ಪನೇನೋ ಎಲ್ಲ ಚಿಕ್ಕಮಕ್ಕಳನ್ನು ತಮ್ಮ ಸ್ವಂತ ಮಕ್ಕಳೆಂದೇ ಭಾವಿಸುತ್ತಿದ್ದರು. ಸ್ವಂತ ಶಿಕ್ಷಣದಿಂದ ನಿಧಾನವಾಗಿ ಬಿ.ಎ., ಬಿ.ಇಡಿ. ಪದವಿಗಳನ್ನು ಗಳಿಸಿದರೂ, ಹೈಸ್ಕೂಲು ಶಿಕ್ಷಕರಾಗಲು ಪ್ರಯತ್ನಿಸದೆ ಪ್ರೈಮರಿ ಶಾಲಾಧ್ಯಾಪಕರಾಗಿಯೇ ಸಂಪೂರ್ಣಸೇವೆ ಸಲ್ಲಿಸಿ ಮೊನ್ನೆ ಮೊನ್ನೆ ನಿವೃತ್ತರಾದವರು ಈ ಚಿಕ್ಕಪ್ಪ.

ಇಲ್ಲಿ ನೆನಪಿಗೆ ಬರುತ್ತಿರುವ ಇನ್ನು ಕೆಲವು ವಿಷಯಗಳು: ಕೆದಕಿದರೂ ನೆನಪಿಗೆ ಬಾರದ ಸಣ್ಣ ಸಂಗತಿಗಳನ್ನು ನೆನಪಿಗೆ ಬಂದಾಗಲೇ ದಾಖಲಿಸಬೇಕು. ದೇವರು ಚಿಕ್ಕಪ್ಪನಿಗೆ ಜಾತಿ ಪದ್ಧತಿಯಲ್ಲಿ ಅಷ್ಟೇನೂ ನಂಬಿಕೆ ಇರದಿರುವುದಕ್ಕೆ, ಅವರು ಕ್ರಿಸ್‌ಮಸ್ ದಿನ ಮೇರಿ ಮಿಸ್ ಮನೆಗೆ ಮತ್ತು ಬಕ್ರೀದ್ ದಿನ ವಯೋವೃದ್ಧ ಇಮಾಮ್ ಸಾಹೇಬರ ಮನೆಗೆ ತಪ್ಪದೆ ಭೇಟಿ ನೀಡಿ ಶುಭ ಹಾರೈಸಿಬರುವುದೇ ಸಾಕ್ಷಿ. ತಮ್ಮ ತೋಟದಲ್ಲಿ ಸಾಹೇಬರು ಪ್ರೀತಿಯಿಂದ ನೆಟ್ಟು ಬೆಳಸಿದ ಮಾವಿನ ಮರವನ್ನು ಅವರು ಇಮಾಮ್ ಸಾಹೇಬರ ಮಾವಿನ ಮರವೆಂದೇ ಕರೆಯುತ್ತಿದ್ದರು. ಕಳೆದ ಕೆಲವು ವರ್ಷಗಳಿಂದ ಆ ಮರ 'ಸಾಹೇಬರ ಮಾವಿನ ಹಣ್ಣುಗಳನ್ನು ಬಿಡತೊಡಗಿತ್ತು'. ನಾನು ಸತ್ತಾಗ ನನ್ನನ್ನು ಸುಡಲು ಈ ಮಾವಿನಮರದ ಒಂದೇ ಒಂದು ಕೊಂಬೆಯನ್ನು ಕಡಿಯಕೂಡದು ಎಂಬ ತಾಕೀತನ್ನೂ ಅವರು ಹೊರಡಿಸಿದ್ದರು.

"ದೇವರ ಪೂಜೆ ಮಾಡುವಾಗ ಏನು ಪ್ರಾರ್ಥನೆ ಮಾಡುತ್ತೀರಿ?" ಎಂದು ಒಮ್ಮೆ ನಾನು ತುಂಟ ಪ್ರಶ್ನೆ ಕೇಳಿದ್ದೆ "ಪ್ರಾರ್ಥನೆ ಮಾಡುವುದೂ ಸ್ವಾರ್ಥ. ಆದುದರಿಂದ ಸಂತಾನ, ಐಶ್ವರ್ಯ, ದೀರ್ಘಾಯುಷ್ಯ, ಸಂಪತ್ತುಗಳನ್ನು ಅನುಗ್ರಹಿಸು ಎಂದು ನಾನೆಂದೂ ಪ್ರಾರ್ಥಿಸುವುದಿಲ್ಲ. 'ಎಲ್ಲರಿಗೂ ಯಾವಾಗಲೂ ಒಳ್ಳೆಯದಾಗಲಿ' ಎಂಬುದೇ ದೇವರಲ್ಲಿ ನನ್ನ ಅನುದಿನದ ಪ್ರಾರ್ಥನೆ" ಎಂದು ಉತ್ತರಿಸಿದ ದೇವರು ಚಿಕ್ಕಪ್ಪ "ಅದೂ ದೇವರೆಂಬವನೊಬ್ಬ ಇದ್ದು, ಹೀಗೆ ಒಳ್ಳೆಯದನ್ನು ಮಾಡುವ ಸಾಮರ್ಥ್ಯ ಅವನಿಗಿದ್ದರೆ" ಎಂಬ ಛೂಬಾಣವನ್ನೂ ಎಸೆದಿದ್ದರು.

"ಹಾಗಾದರೆ ಪ್ರತಿದಿನ ಬೆಳಿಗ್ಗೆ ತಪ್ಪದೆ ಪೂಜೆ ಮಾಡುವುದಾದರೂ ಏಕೆ?" ಎಂದುಕೊಂಡರೂ ಆಮೇಲೆ ಅವರ ಜೀವನಶೈಲಿ ಸಾಕಷ್ಟು ಬದಲಾಯಿತು.

"ಅಭ್ಯಾಸವಾಗಿಹೋಗಿರುವುದರಿಂದ – ಪ್ರತಿದಿನ ಎದ್ದಂತೆ, ಮಲಗಿದಂತೆ, ಉಂಡಂತೆ, ಮಲಮೂತ್ರ ವಿಸರ್ಜನೆ ಮಾಡಿದಂತೆ."

ಚಿಕ್ಕಮ್ಮ ಸತ್ತಾಗ ದೇವರು ಚಿಕ್ಕಪ್ಪ ದುಃಖಿಸಿದಂತೆ ಕಾಣಿಸಲಿಲ್ಲ. "ದೇವರಿಗೆ ಬೇಕಾಗಿರಬೇಕು, ಕರೆಯಿಸಿಕೊಂಡ" ಎಂದುಕೊಂಡರೂ ಆಮೇಲೆ ಅವರ ಜೀವನಶೈಲಿ ಸಾಕಷ್ಟು ಬದಲಾಯಿತು. ಅವರಿಗೆ ಲಗಾಮು ಹಾಕಲು ಯಾರೂ ಇರಲಿಲ್ಲವಲ್ಲ! ಉಂಡರೆ ಉಂಡರು, ಇಲ್ಲವಾದರೆ ಇಲ್ಲ; ಪೂಜೆ ಮಾಡಿದರೆ ಮಾಡಿದರು, ಇಲ್ಲವಾದರೆ ಇಲ್ಲ. ಅವರಿಗೆ ಸ್ವಲ್ಪ ನೆಮ್ಮದಿ ಸಿಗಲಿ ಎಂಬ ಉದ್ದೇಶದಿಂದ, ನಾನು ರಜಾ ಇದ್ದಾಗಲೆಲ್ಲ ಬೆಂಗಳೂರಿನಿಂದ ಬಂದು ಅವರ ಮನೆಯಲ್ಲಿಯೇ ಠಿಕಾಣಿ ಹೂಡುತ್ತಿದ್ದೆ - ನನ್ನ ಅಮ್ಮ ಅಸಮಾಧಾನ ಸೂಚಿಸಿದರೂ ಹಿಂಜರಿಯದೆ.

ಇಂಥ ದೇವರು ಚಿಕ್ಕಪ್ಪ ನಿನ್ನೆ ಇದ್ದರು. ಇವತ್ತು ಇಲ್ಲ. ಸ್ವಂತ ಅಪ್ಪಯ್ಯ ಸತ್ತಾಗ ಕೂಡ ಬಹುಶಃ ನನಗೆ ಇಷ್ಟು ದುಃಖವಾಗಿರಲಿಲ್ಲ. ನನ್ನ ಪಾಲಿಗೆ ಚಿಕ್ಕಪ್ಪನೇ ಅಪ್ಪಯ್ಯ, ಸ್ನೇಹಿತ ಎಲ್ಲವೂ ಆಗಿದ್ದರು. ಅವರೇ ದೇವರಾಗಿದ್ದರು. ಈಗ ನನ್ನಂತೆ ಈ ದೇವರುಗಳೂ ತಬ್ಬಲಿಗಳಾಗಿದ್ದಾರೆ. ನಾನು ಏನು ಮಾಡಿದರೆ ತಾನೇ ದೇವರು ಚಿಕ್ಕಪ್ಪನಿಗೆ, ಮತ್ತು ಸಂಪುಟದಲ್ಲಿರುವ ಅನಾಥ ದೇವರುಗಳಿಗೆ ಸಂತೋಷವಾದೀತು?

ನಿನ್ನೆ ರಾತ್ರಿಯಿಂದ ಜಿರಾಪತಿ ಮಳೆ ಸುರಿಯುತ್ತಲೇ ಇದೆ – ದೇವರು ಚಿಕ್ಕಪ್ಪನ ನಿಧನಕ್ಕೆ ದೇವರೇ ಕಣ್ಣೀರು ಸುರಿಸುತ್ತಿದ್ದಾನೋ ಎಂಬಂತೆ.

ಎಚ್. ಗಣೇಶ ಐತಾಳ
[illegible], ಏಳನೆಯ ಕ್ರಾಸ್, ಅನಿಕೇತನ ರಸ್ತೆ,
ಕುವೆಂಪುನಗರ, ಮೈಸೂರು - [illegible]

## ಹಟ

ಸೋಲಬಾರದು
ಎಂದು ಜೀವ
ಹಟ ಹಿಡಿದಿದೆ;
ನೆಳಲು ಬೆಳಕಿನ ಆಟ
ಸಾಗುತ್ತಿದೆ!

ಸಿ.ಪಿ.ಕೆ.
ಮೈಸೂರು





## ಕನ್ನಡಿ – ಕೈದೀವಿಗೆ

(ನವೋದಯದ ಹಿನ್ನೆಲೆಯಲ್ಲಿ ಎ.ಆರ್.ಕೃ, ಬೇಂದ್ರೆ, ಕುವೆಂಪು ಅವರ ವಿಮರ್ಶಾ ನಿಲುವುಗಳು)

*ಡಾ|| ಪ್ರೀತಿ ಶುಭಚಂದ್ರ*

**ಪುಟ : viii + ೧೫೬** **ಬೆಲೆ : ರೂ. ೧೨೦**

ವಿವೇಕ ಪ್ರಕಾಶನ, ೪೯೨, ಚಿತ್ರಭಾನು ರಸ್ತೆ, 'ಎ' ಮತ್ತು 'ಬಿ' ಬ್ಲಾಕ್, ಕುವೆಂಪುನಗರ, ಮೈಸೂರು - ೫೭೦ ೦೨೩.

ಇದು ನವೋದಯದ ಹಿನ್ನೆಲೆಯಲ್ಲಿ ಎ. ಆರ್. ಕೃಷ್ಣಶಾಸ್ತ್ರಿ, ಬೇಂದ್ರೆ ಮತ್ತು ಕುವೆಂಪು – ಅವರ ವಿಮರ್ಶಾ ನಿಲುವುಗಳನ್ನು ವಿಶ್ಲೇಷಿಸುವ ಸಂಶೋಧನ ಬರವಣಿಗೆ. ಈಗಾಗಲೇ ನವೋದಯ ವಿಮರ್ಶೆಯ ಬಗ್ಗೆ ನಡೆದಿರುವ ಸಂಶೋಧನೆ, ವಿಮರ್ಶಾ ಲೇಖನಗಳ ಹಿನ್ನೆಲೆಯಲ್ಲಿ ಅಪಾರ ಓದು, ವಿಮರ್ಶಾ ಪ್ರಜ್ಞೆ ಮತ್ತು ಕ್ರಿಯಾಶೀಲತೆಯಿಂದ ನವೋದಯ ಸಾಹಿತ್ಯ ವಿಮರ್ಶೆಯ ಆಶಯ ಮತ್ತು ನಿಲುವುಗಳನ್ನು ಸಂಕ್ಷಿಪ್ತವಾಗಿ ಲೇಖಕಿ ಈ ಕೃತಿಯಲ್ಲಿ ಹಿಡಿದಿಟ್ಟಿದ್ದಾರೆ. ಕನ್ನಡದಲ್ಲಿ ವಿಮರ್ಶೆಯ ಶಿಸ್ತನ್ನು ಆರಂಭಿಸಿ, ಅದಕ್ಕೆ ಬಹುಮುಖೀ ನೆಲೆಗಳನ್ನು ಒದಗಿಸಿ, 'ಸಾಹಿತ್ಯ'ವನ್ನು ಬದುಕಿನೊಂದಿಗೆ, ಸಾಮಾಜಿಕ ಸಂಗತಿಗಳೊಂದಿಗೆ ನೋಡುವುದನ್ನು ತೋರಿಸಿಕೊಟ್ಟ, ಹೊಸ ಪ್ರಸ್ಥಾನಗಳನ್ನೇ ಹುಟ್ಟುಹಾಕಿ ಕಾವ್ಯಮೀಮಾಂಸೆ ಮತ್ತು ವಿಮರ್ಶೆ ಎರಡನ್ನೂ ಬೆಳೆಸಿದ ನವೋದಯದ ಮುಖ್ಯ ವಿಮರ್ಶಕರಾದ ಬೇಂದ್ರೆ, ಕುವೆಂಪು, ಎ. ಆರ್. ಕೃಷ್ಣಶಾಸ್ತ್ರಿಗಳ ವಿಮರ್ಶಾ ಸ್ವರೂಪವನ್ನು ಮತ್ತು ಅವರ ಕೊಡುಗೆಯನ್ನು ಈ ಕೃತಿ ಸಂಕ್ಷಿಪ್ತವಾಗಿ ತಿಳಿಸುತ್ತದೆ.

## ...ಮಣ್ಣೇ ಮೊದಲು (ಕಥೆಗಳು)



*ಕುಂ. ವೀರಭದ್ರಪ್ಪ*

**ಪುಟ : xii + ೧೬೨** **ಬೆಲೆ : ರೂ. ೧೨೦**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜು, ಹೊಸೂರು ರಸ್ತೆ ಬೆಂಗಳೂರು - ೫೬೦ ೦೨೯

ಕುಂ. ವೀರಭದ್ರಪ್ಪನವರ ಹತ್ತು ಕತೆಗಳು ಈ ಸಂಕಲನದಲ್ಲಿವೆ. ಸಂಕಲನದಲ್ಲಿ – ವಿಭಿನ್ನ ವ್ಯಕ್ತಿ, ವಿಷಯಗಳನ್ನು ಲೇಖಕರು ಪ್ರಾದೇಶಿಕ ಭಾಷಾ ಸೊಗಡಿನೊಂದಿಗೆ ಕಟ್ಟಿಕೊಟ್ಟಿದ್ದಾರೆ. 'ದೇವರ ಹೆಣ' ಕತೆಯಂತೂ ಪಠ್ಯಪುಸ್ತಕದಲ್ಲಿ ಸೇರಿ ಈಗಾಗಲೇ ಸಾಕಷ್ಟು ಪರಿಚಯವಾಗಿದೆ. 'ಹಸಿವಿ'ನ ಭೀಕರತೆಯನ್ನು ಭಾಷಣ ಮಾಡದೆ, ಕತೆ ಮತ್ತು ಘಟನೆಗಳಿಂದ ಕಟ್ಟುವ ಲೇಖಕರ ಕಥನಕಲೆ ವಿಶಿಷ್ಟವಾದುದಾಗಿದೆ. ಗಾಢವಾಸ್ತವವನ್ನು ಅದರ ಮಣ್ಣಿನ ವಾಸನೆಯೊಂದಿಗೆ ಅದರದೇ ಭಾಷೆಯಲ್ಲಿ ಕಟ್ಟುವ ಮೂಲಕ ಇಲ್ಲಿನ ಬಹುತೇಕ ಕತೆಗಳು ಸಾಂಸ್ಕೃತಿಕ ಸಂಕಥನಗಳೂ ಆಗಿವೆ. 'ಹತ್ಯೆ', 'ಕುಬುಸ', 'ದೇವರ ಹೆಣ', 'ಬರಿಗೊಡಗಳು' – ಕತೆಗಳು ಕತೆಗಾರರ ಕಲೆಗಾರಿಕೆ, ಸೂಕ್ಷ್ಮತೆ, ಕಥನ ಕ್ರಮದಿಂದಾಗಿ ಬರವಣಿಗೆಯ ಬಗ್ಗೆ ಬೆರಗು ಹುಟ್ಟಿಸುತ್ತವೆ. ಹಾಸ್ಯಬೆರೆತ, ಧ್ವನಿಪೂರ್ಣವಾದ ಕತೆಗಳಾಗಿ ಓದುಗರನ್ನು ಸೆಳೆಯುತ್ತವೆ.



## ತುರ್ತು ಪರಿಸ್ಥಿತಿಯ ಕರಾಳ ಮುಖ (ತಂದೆಯ ನೆನಪುಗಳು)

*ಮಲಯಾಳಂ ಮೂಲ: ಪ್ರೊ|| ಈಚರ ವಾರಿಯರ್; ಅನು : ಸಾರಾ ಅಬೂಬಕ್ಕರ್*

**ಪುಟ : ೬೮ + v** **ಬೆಲೆ : ರೂ. ೫೦**

**ಚಂದ್ರಗಿರಿ ಪ್ರಕಾಶನ**, ೨-೨೧-೧೬೩೧/೨ ಸೂಕ್ಷ್ಮತರಂಗ ನಿಲಯ ರಸ್ತೆ, ಮಂಗಳೂರು - ೫೭೫ ೦೦೬

ನಮ್ಮ ದೇಶದ ಚರಿತ್ರೆಯಲ್ಲಿ ತುರ್ತು ಪರಿಸ್ಥಿತಿಯ ದಿನಗಳನ್ನು (೧೯೭೫-೧೯೭೭) ಕಪ್ಪುದಿನಗಳೆಂದು ವರ್ಣಿಸಲಾಗಿದೆ. ಅಂಥ ದಿನಗಳಲ್ಲಿ ರಾಜ ಎಂಬ ವಿದ್ಯಾರ್ಥಿಯನ್ನು ಪೊಲೀಸರು ವಿನಾ ಕಾರಣ ಕೊಂಡೊಯ್ದು ಅವನನ್ನು ಹಿಂಸಿಸಿ, ಕೊಂದು, ಆತನ ದೇಹವನ್ನು ನಾಶ ಮಾಡಿದ್ದಲ್ಲದೆ, ತಾವು ಆತನನ್ನು ಬಂಧಿಸಿಯೇ ಇಲ್ಲವೆಂದು ಹಿರಿಯ ಅಧಿಕಾರಿಗಳಿಂದ ಹಿಡಿದು ಪೊಲೀಸ್ ಪೇದೆಯವರೆಗೂ ಎಲ್ಲರೂ ಸುಳ್ಳು ಹೇಳಿದರು. ಅಂಥ ಸಂದರ್ಭದಲ್ಲಿ ರಾಜನ ತಂದೆಯಾದ ಈಚರ ವಾರಿಯರ್ ಭ್ರಷ್ಟ ವ್ಯವಸ್ಥೆಯ ವಿರುದ್ಧ, ಅನ್ಯಾಯದ ವಿರುದ್ಧ ಹೋರಾಟ ಕೈಗೊಂಡರು. ಅವರು ಬರೆದ ವಾಸ್ತವ ಘಟನೆ 'ತುರ್ತು ಪರಿಸ್ಥಿತಿಯ ಕರಾಳ ಮುಖ' ಕೃತಿಯಾಗಿದೆ. ಮಗನನ್ನು ಕಳೆದುಕೊಂಡ ತಂದೆಯ ನೋವು, ಸಂಕಟ, ತಳಮಳಗಳ ಜತೆಗೆ, ಮಗನಿಗಾಗಿ ಆತ ನಡೆಸಿದ ಪಟ್ಟುಬಿಡದ ಹೋರಾಟವನ್ನು ಇಲ್ಲಿ ಕಾಣಬಹುದು. ಮಗನ ಶೋಧನೆಯ ಜತೆಗೆ ಸರಕಾರದ ವಿರುದ್ಧ ಮೊಕದ್ದಮೆ ಹೂಡಿ, ವ್ಯವಸ್ಥೆಯಲ್ಲಿನ ಅನ್ಯಾಯದ ವಿರುದ್ಧ ಸಿಡಿದೆದ್ದ ತಂದೆಯ ಧೀರ ಹೋರಾಟದ ಕಥೆಯೇ ಈ ಕೃತಿ.

## ವಿಚಾರಣೆ (ಕಥಾ ಸಂಕಲನ)



*ಲಕ್ಷ್ಮಣ ಕೊಡಸೆ*

**ಪುಟ : viii + ೧೧೩** **ಬೆಲೆ : ರೂ. ೪೦**

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ, ಬೆಂಗಳೂರು - ೧೮

ಸುಮಾರು ಇಪ್ಪತ್ತು ವರ್ಷಗಳ ಅವಧಿಯಲ್ಲಿ ಬರೆದ ಕತೆಗಳ ಸಂಗ್ರಹವಿದು. ಲೇಖಕರು ಪತ್ರಕರ್ತರಾಗಿದ್ದು, ಸಂಪರ್ಕಕ್ಕೆ ಬಂದ ವ್ಯಕ್ತಿ, ವಿಷಯಗಳನ್ನು ಕತೆಯಾಗಿಸುವ ಕಥೆಗಾರಿಕೆಯನ್ನು ಇಲ್ಲಿ ಕಾಣಬಹುದು. 'ಸೇವಕ' ಕತೆಯಲ್ಲಿ ರಾಜಕೀಯಕ್ಕೆ ಇಳಿದ ಗೋವಿಂದಪ್ಪ ದಿನಗಳೆದಂತೆ ಹೇಗೆ ಭ್ರಷ್ಟ ರಾಜಕಾರಣದ, ವ್ಯವಸ್ಥೆಯ ಭಾಗವೇ ಆಗಿಬಿಡುತ್ತಾನೆ ಎಂಬುದರ ಚಿತ್ರವಿದೆ. 'ವಿಚಾರಣೆ'ಯಲ್ಲಿ ಕಳೆದುಕೊಂಡ 'ಕೊಡೆ'ಯನ್ನು ತನ್ನದೆಂದು ಪಡೆದುಕೊಳ್ಳಲಾಗದ ಹಾಲಪ್ಪ, ಚಾಣಾಕ್ಷತನದಿಂದ ಹಳೆಕೊಡೆಗೆ ಬದಲಾಗಿ ಹೊಸ ಕೊಡೆ ಗಳಿಸುವ ನಾರಣಪ್ಪರ ಸುತ್ತ ನಡೆವ ಘಟನೆ ಸರಳವಾದರೂ ಸೂಕ್ಷ್ಮವಾದ ವ್ಯಂಗ್ಯವನ್ನು ಒಳಗೊಂಡಿದೆ. 'ಸ್ವಾಮಿ ದೊಡ್ಡವನಾದ' ಕತೆಯಲ್ಲಿ ಸ್ವಾಮಿ ದೊಡ್ಡವನಾಗುವುದು ಮಾಡಬಾರದ್ದನ್ನು ಮಾಡಿದ ಮೇಲೆ ಓದು, ಕೆಲಸದಲ್ಲಿ ಬಡ್ತಿ ಪಡೆಯುವುದರ ಮೂಲಕವೇ ಹೊರತು ವ್ಯಕ್ತಿತ್ವ ವಿಕಸನದಿಂದಲ್ಲ. ಹೀಗೆ ಇಲ್ಲಿನ ಕತೆಗಳೂ ಕೂಡ ಬದುಕಿನ ಎಳೆಗಳನ್ನು ವ್ಯಂಗ್ಯದೊಂದಿಗೆ ಹಿಡಿದಿಟ್ಟಿವೆ.



## ಒಡನಾಟ (ವ್ಯಕ್ತಿಚಿತ್ರಗಳು)

*ಎಸ್. ಆರ್. ವಿಜಯಶಂಕರ್*

**ಪುಟ : xx + ೨೨೪** **ಬೆಲೆ : ರೂ. ೧೨೦**

**ಆನಂದಕಂದ ಗ್ರಂಥಮಾಲೆ**, ಬಲರಾಮ ಅಧ್ಯಾಪಕರ ಕಾಲೋನಿ, ಮಲ್ಲಾಡಿಹಳ್ಳಿ - ೫೭೭ ೫೩೧

ಲೇಖಕರು ಒಡನಾಡಿದ ವ್ಯಕ್ತಿಗಳ ಪರಿಚಯ, ಅವರೊಂದಿಗೆ ಬೆರೆತು ಕಲಿತು, ಗಳಿಸಿದ ಅನುಭವ, ಅವರ ವ್ಯಕ್ತಿತ್ವ ಮತ್ತು ಸಾರ್ಥಕ ಬದುಕಿನಿಂದ ಸಮಾಜಕ್ಕೆ ಸಿಕ್ಕ ಕೊಡುಗೆ – ಇದೆಲ್ಲವನ್ನೂ ವಿಮರ್ಶಾಪ್ರಜ್ಞೆಯ ಮೂಲಕ, ಅದಕ್ಕೂ ಮಿಗಿಲಾಗಿ ಮಾನವೀಯ ನೆಲೆಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾ ವ್ಯಕ್ತಿಚಿತ್ರವನ್ನು ಕಟ್ಟಿಕೊಟ್ಟಿದ್ದಾರೆ. ಒಟ್ಟು ಇಪ್ಪತ್ತಾರು ಅಸದೃಶ ವ್ಯಕ್ತಿಚಿತ್ರಗಳು ಇಲ್ಲಿ ಅಡಕವಾಗಿವೆ. ಜತೆಗೆ ಸಮಾಜ, ಸಾಹಿತ್ಯ, ಬದುಕಿನ ಬಗ್ಗೆ ಅನೇಕ ವಿಚಾರಗಳನ್ನು ಈ ಕೃತಿ ತಿಳಿಸುತ್ತದೆ. ಈ ಕೃತಿಯ ವಿಶೇಷವೇನೆಂದರೆ ವ್ಯಕ್ತಿಗಳ ಹೆಸರುಗಳ ಮುಂದೆ ಸಬ್‌ಟೈಟಲ್ ಎನ್ನುವಂತಿರುವ ನುಡಿಗಟ್ಟು ಗಳು. ಉದಾ : ದ. ರಾ. ಬೇಂದ್ರೆ; ವೈಯಾರ ಮತ್ತು ವೈರಾಗ್ಯದ ನಡುವಿನ ಸಂವೇದನೆ. ಡಾ|| ಎಚ್. ಎಸ್. ಬಿಳಿಗಿರಿ; ಕಾವ್ಯಮೋಹದ ಭಾಷಾ ವಿಜ್ಞಾನಿ. ಡಾ|| ಗೌರೀಶ ಕಾಯ್ಕಿಣಿ; ಅನೌಪಚಾರಿಕ ವಿಶ್ವವಿದ್ಯಾಲಯ – ಮೊದಲಾದವು ಧ್ವನಿಪೂರ್ಣವಾಗಿವೆ.

## ಮತ್ತೆ ಒಲಿದ ಸಖಿ (ಕವನ ಸಂಕಲನ)



*ಅಶೋಕ ನರೋಡೆ*

**ಪುಟ : xxii + ೭೦ = ೯೨** **ಬೆಲೆ : ರೂ. ೫೦**

**ಅಪೂರ್ವ ಪ್ರಕಾಶನ**, ಬಸವನಗರ ಮಹಾಲಿಂಗಪುರ - ೫೮೭ ೩೧೨, ಬಾಗಲಕೋಟೆ ಜಿಲ್ಲೆ

ವಿಭಿನ್ನ ವಸ್ತುಚಿತ್ರಗಳನ್ನು ಒಳಗೊಂಡಿರುವ ಈ ಕವನ ಸಂಕಲನದಲ್ಲಿ ಬಹುಪಾಲು ಕವನಗಳು 'ಸಖಿ'ಯನ್ನು ಕುರಿತದ್ದಾಗಿವೆ. ಈ 'ಸಖಿ' – ಕಾವ್ಯಸಖಿ, ಬಾಳಸಖಿ, ಸೌಂದರ್ಯಸಖಿ, ಪ್ರೀತಿಸಖಿ – ಹೀಗೆ ವಿಭಿನ್ನ ರೂಪಗಳಲ್ಲಿ ಕಾಣಿಸಿಕೊಳ್ಳುವ ಕವಿಯ ಚೇತನವಾಗಿದೆ. 'ಸಖಿ'ಯೊಂದಿಗೆ ನಡೆಸುವ 'ಸರಸ', 'ಸಂವಾದ', 'ಸಲ್ಲಾಪ', 'ಸಾಂತ್ವನ' – ಹೀಗೆ ಗಂಡು-ಹೆಣ್ಣಿನ ಪ್ರೇಮ ಮಾಧುರ್ಯವನ್ನು ನವುರಾಗಿ ಹಿಡಿಯುವಲ್ಲಿ ಈ ಕವಿತೆಗಳು ಯಶಸ್ವಿಯಾಗಿವೆ. ಇದರೊಂದಿಗೆ ಸಾಮಾಜಿಕ ಅಸಮಾನತೆ, ಹಸಿವು, ಭ್ರಷ್ಟಗೊಂಡ ವ್ಯವಸ್ಥೆ ಬಗ್ಗೆ ಸಿಟ್ಟು, ಆಕ್ರೋಶ, ಬದುಕಿಗೆ ಪ್ರೀತಿ ಭರವಸೆಗಳು, ಕೋಮುಗಲಭೆ, ಯುದ್ಧ, ಹಿಂಸೆ – ಹೀಗೆ ಸುತ್ತಲಿನ ಹತ್ತು ಹಲವು ಸಂಗತಿಗಳಿಗೆ ಕವಿಮನಸ್ಸು ಸ್ಪಂದಿಸಿದ ಆರೋಗ್ಯಕರ ನಿಲುವನ್ನು ಇಲ್ಲಿನ ಕವಿತೆಗಳು ತಿಳಿಸುತ್ತವೆ. ಅರ್ಥಪೂರ್ಣ ಕವಿತೆಗಳು.

**– ಸುಜಾತ ಲಕ್ಷ್ಮೀಪುರ**

*ನಂ. ೩೨೧, ೭ನೇ ಅಡ್ಡರಸ್ತೆ, ಲಕ್ಷ್ಮೀಪುರ, ಬೆಂಗಳೂರು - ೫೬೦ ೦೧೯*



ಭಾರತದ ಭವಿಷ್ಯ ಜ್ಞಾನದ ಉದ್ದಿಮೆಗಳನ್ನು ಅವಲಂಬಿಸಿದೆ. ನಾವು ನಮ್ಮ ಮಾನವ ಸಂಪನ್ಮೂಲವನ್ನು ಎಷ್ಟರಮಟ್ಟಿಗೆ ಸುಧಾರಿತ, ಸಶಕ್ತ ಹಾಗೂ ಸಮರ್ಥಗೊಳಿಸಬಲ್ಲೆವು ಎಂಬುದರ ಮೇಲೆ ನಮ್ಮ ಯಶಸ್ಸು ಅವಲಂಬಿಸಿದೆ. ಜ್ಞಾನ ಆಧಾರಿತ ಉತ್ಪಾದನೆ ಹಾಗೂ ಜ್ಞಾನ ಆಧಾರಿತ ಕೃಷಿ ರಾಷ್ಟ್ರದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣವಾಗಬಲ್ಲದು. ಇದಕ್ಕಾಗಿ ಅತ್ಯುನ್ನತ ಸಾಮರ್ಥ್ಯಸಂಪನ್ನ ಹಾಗೂ ಅತ್ಯಂತ ವ್ಯಾಪಕ ಸಂಖ್ಯಾಪ್ರಮಾಣದ ಮಾನವ ಸಂಪನ್ಮೂಲ ನಮಗೆ ಅವಶ್ಯಕವಾಗುತ್ತದೆ.

ಉನ್ನತ ಮಟ್ಟದ ಬುದ್ಧಿಮತ್ತೆ ಸಾಧನೆಯಲ್ಲಿ ಭಾರತ ಹೆಚ್ಚಿನ ಮಟ್ಟದ ಪ್ರಗತಿ ಸಾಧಿಸಿದೆ. ಮಾಹಿತಿ ತಂತ್ರಜ್ಞಾನದಲ್ಲಿ ಭಾರತೀಯ ಪ್ರತಿಭೆ ಪ್ರಶ್ನಾತೀತ ಶ್ರೇಷ್ಠತೆ ಹೊಂದಿದೆ ಹಾಗೂ ಸಾಧಿಸಿದೆ. ಇದನ್ನು ಇನ್ನೂ ಹೆಚ್ಚು ಸಮೃದ್ಧಗೊಳಿಸಲು ನಾವು ಉತ್ತಮ ಅರ್ಹ ವೃತ್ತಿಪರರನ್ನು ಇನ್ನೂ ಹೆಚ್ಚು ಹೆಚ್ಚು ಸಂಖ್ಯೆಯಲ್ಲಿ ಸಜ್ಜುಗೊಳಿಸುತ್ತಲೇ ಇರಬೇಕಾಗುತ್ತದೆ.

ನಮ್ಮ ಜನಸಂಖ್ಯಾ ಬೆಳವಣಗೆ ನಮ್ಮ ಪರವಾಗಿದೆ. ಭಾರತ ಯುವಕ ಪ್ರಧಾನ ರಾಷ್ಟ್ರ. ನಮ್ಮ ದೇಶದಲ್ಲಿ ದುಡಿಯುವವರ ಸಂಖ್ಯೆ ಮುಂಬರುವ ಇನ್ನೂ ಒಂದೆರಡು ದಶಕಗಳವರೆಗೆ ಹೆಚ್ಚುತ್ತಹೋಗುವ ಎಲ್ಲ ಲಕ್ಷಣಗಳಿವೆ. ಆದರೆ ಅದೇ ಅಭಿವೃದ್ಧಿ ಹೊಂದಿದ ರಾಷ್ಟ್ರಗಳಲ್ಲಿ ಹಾಗೂ ಚೀನಾದಲ್ಲೂ ಸಹ ದುಡಿಯುವವರ ಜನಸಂಖ್ಯೆಯಲ್ಲಿ ಗಮನಾರ್ಹ ಕೊರತೆ ಕಂಡುಬರುತ್ತಿದೆ. ಭಾರತದಲ್ಲಿ ದುಡಿಮೆ ವಯಸ್ಸಿನವರ ಜನಸಂಖ್ಯೆ ೨೦೩೦ ಸಂದರ್ಭದಲ್ಲಿ ೪೭ ದಶಲಕ್ಷ ಹೆಚ್ಚಳಗೊಳ್ಳುವುದಿದ್ದರೆ, ಅಮೆರಿಕಾ ದೇಶವೊಂದರಲ್ಲೇ ೧೭ ದಶಲಕ್ಷ ದುಡಿಮೆ ವಯಸ್ಸಿನ ಜನತೆಯ ಕೊರತೆಯ ಅಂದಾಜಿದೆ. ಜನಸಂಖ್ಯಾ ಸ್ಫೋಟದ ಈ ಸನ್ನಿವೇಶದ ಪೂರ್ಣ ಪ್ರಯೋಜನ ಪಡೆದುಕೊಳ್ಳಲು ನಾವು ಜನಸಂಖ್ಯೆಯನ್ನು ಸುಶಿಕ್ಷಿತ ಹಾಗೂ ಬುದ್ಧಿಸಾಮರ್ಥ್ಯದ ದುಡಿಯುವ ವರ್ಗವನ್ನಾಗಿ ಪರಿವರ್ತಿಸಬಲ್ಲ ಶಿಕ್ಷಣವನ್ನು ರೂಪಿಸಿ ಸಾರ್ಥಕ ರೀತಿಯಲ್ಲಿ ದುಡಿಸಿಕೊಳ್ಳಬೇಕು.

ಒಂದೆಡೆ ಶಿಕ್ಷಣವನ್ನು ವ್ಯಾಪಕಗೊಳಿಸುವ ಪ್ರಯತ್ನ ಆಶಾದಾಯಕ ರೀತಿಯಲ್ಲಿ ತೀವ್ರವಾಗಿ ಮುನ್ನಡೆದಿದೆ. ಆದರೆ ಮಾಹಿತಿ ತಂತ್ರಜ್ಞಾನ ಮತ್ತು ಇತರ ಕ್ಷೇತ್ರಗಳಲ್ಲಿ ಆಯ್ಕೆಗೊಳ್ಳುವ ವಿದ್ಯಾರ್ಥಿಗಳ ಪ್ರಮಾಣ ನಿರಾಶಾದಾಯಕವಾಗಿದೆ. ಪದವೀಧರರ ಸಂಖ್ಯೆ ಸಾಕಷ್ಟಿದೆ. ಚೀನಾದ ಪದವೀಧರರ ಹತ್ತುಪಟ್ಟು ಹೆಚ್ಚು ಪದವೀಧರರನ್ನು ಹೊಂದಿದ ದೇಶ ನಮ್ಮದಾಗಿದೆ. ಆದರೆ ಪದವೀಧರರ ಶೈಕ್ಷಣಿಕ ಗುಣಮಟ್ಟ ಆಶಾದಾಯಕವಾಗಿಲ್ಲ. ಇದು ಶಿಕ್ಷಣದ ಗುಣಮಟ್ಟದ ಕಳಪೆತನವನ್ನು ಬಿಂಬಿಸುತ್ತದೆ. ಪ್ರತಿಶತ ೧೦ರಿಂದ ೧೫ರಷ್ಟು ಪದವೀಧರರು ಜಾಗತಿಕಮಟ್ಟದ ಉನ್ನತ ಪ್ರತಿಭೆ ಹೊಂದಿದ್ದರೆ ಉಳಿದ ಪ್ರತಿಶತ ೮೫ರಿಂದ ೯೦ರಷ್ಟು ಪದವೀಧರರು ಸರಾಸರಿ ಪ್ರಮಾಣಕ್ಕಿಂತಲೂ ಕಡಿಮೆ ಗುಣಮಟ್ಟ ಹೊಂದಿದ್ದಾರೆ.

ನಮ್ಮ ಪದವೀಧರರ ಶೈಕ್ಷಣಿಕ ಕಳಪೆತನಕ್ಕೆ ಕಾರಣಗಳು ಹಲವಾರು ಇವೆ. ಅವು ಪರಸ್ಪರ ಅವಲಂಬಿತವಾಗಿವೆ. ಬೋಧನಾ ಗುಣಮಟ್ಟ ನಿರೀಕ್ಷಿತ

# ಗುಣಮಟ್ಟದ ಶಿಕ್ಷಣ ಸದ್ಯದ ತೀವ್ರತೆ

◆ ಟಿ. ವಿ. ಮಾಗಳದ

**ಶಿಕ್ಷಣದ ಗುಣಮಟ್ಟ ಹೆಚ್ಚಳ ಸಾಧಿಸಲು ಪಠ್ಯವನ್ನು ಪ್ರಸ್ತುತ ಸನ್ನಿವೇಶಕ್ಕೆ ಸೂಕ್ತಗೊಳಿಸಬೇಕು. ಪಠ್ಯವನ್ನು ಅರ್ಥಪೂರ್ಣ, ಸಕಾಲಿಕ, ಸಮರ್ಥ ಹಾಗೂ ಔಚಿತ್ಯಪೂರ್ಣಗೊಳಿಸುವಲ್ಲಿ ಉದ್ದಿಮೆಗಳ ಪಾತ್ರ ಹಿರಿದಾದುದು. ಉತ್ಪಾದನಾ ಕ್ಷೇತ್ರದ ತೀರಾ ಇತ್ತೀಚಿನ ಬೆಳವಣಿಗೆಗಳ ಒಲುವು ನಿಲುವುಗಳ ಹಿನ್ನೆಲೆಯಲ್ಲಿ ಭವಿಷ್ಯದ ಬೆಳವಣಿಗೆಯನ್ನು ಕಲ್ಪಿಸಿ ಅದಕ್ಕೆ ತಕ್ಕ ಕೌಶಲ್ಯ ಸ್ವರೂಪ ಆಲೋಚಿಸಿ ಪಠ್ಯದಲ್ಲಿ ಅವು ಅಳವಡಿಕೆಗೊಳ್ಳುವಂತೆ ವ್ಯವಸ್ಥೆಗೊಂಡರೆ ಪಠ್ಯವನ್ನು ಹೆಚ್ಚು ಅರ್ಥಪೂರ್ಣ ಹಾಗೂ ಕ್ರಿಯಾಶೀಲ ಮಾಡಲು ಸಾಧ್ಯ.**





ಮಟ್ಟದಲ್ಲಿಲ್ಲ. ಇದು ಸುದೀರ್ಘ ಅವಧಿಯ ಅಸಂಖ್ಯ ಪದವೀಧರರ ಶೈಕ್ಷಣಿಕ ಗುಣಮಟ್ಟದ ಮೇಲೆ ಗಂಭೀರ ಪರಿಣಾಮ ಬೀರುತ್ತದೆ. ಅದರ ಜೊತೆಗೆ ರಾಷ್ಟ್ರದ ಭವಿಷ್ಯದ ಪ್ರಗತಿಯ ಮುನ್ನಡೆಗೆ ಬಲವಾದ ಪೆಟ್ಟು ಕೊಡುತ್ತದೆ.

ಶಿಕ್ಷಣದ ಗುಣಮಟ್ಟ ಹೆಚ್ಚಳ ಸಾಧಿಸಲು ಪಠ್ಯವನ್ನು ಪ್ರಸ್ತುತ ಸನ್ನಿವೇಶಕ್ಕೆ ಸೂಕ್ತಗೊಳಿಸ ಬೇಕು. ಪಠ್ಯವನ್ನು ಅರ್ಥಪೂರ್ಣ, ಸಕಾಲಿಕ, ಸಮರ್ಥ ಹಾಗೂ ಔಚಿತ್ಯಪೂರ್ಣಗೊಳಿಸುವಲ್ಲಿ ಉದ್ದಿಮೆಗಳ ಪಾತ್ರ ಹಿರಿದಾದುದು. ಉತ್ಪಾದನಾ ಕ್ಷೇತ್ರದ ತೀರಾ ಇತ್ತೀಚಿನ ಬೆಳವಣಿಗೆಗಳ ಒಲವು ನಿಲುವುಗಳ ಹಿನ್ನೆಲೆಯಲ್ಲಿ ಭವಿಷ್ಯದ ಬೆಳವಣಿಗೆಯನ್ನು ಕಲ್ಪಿಸಿ ಅದಕ್ಕೆ ತಕ್ಕ ಕೌಶಲ್ಯ ಸ್ವರೂಪ ಆಲೋಚಿಸಿ ಪಠ್ಯದಲ್ಲಿ ಅವು ಅಳವಡಿಕೆಗೊಳ್ಳುವಂತೆ ವ್ಯವಸ್ಥೆಗೊಂಡರೆ ಪಠ್ಯವನ್ನು ಹೆಚ್ಚು ಅರ್ಥಪೂರ್ಣ ಹಾಗೂ ಕ್ರಿಯಾಶೀಲ ಮಾಡಲು ಸಾಧ್ಯ. ಇದರಿಂದಾಗಿ ತೀವ್ರ ಬದಲಾವಣೆಗಳ ಇಂದಿನ ವೇಗಗತಿಯ ಜಗತ್ತಿನಲ್ಲಿ ಪದವೀಧರರು ಹೊಸ ಬೆಳವಣಿಗೆಗಳ ಮೇಲೆ ಬೌದ್ಧಿಕ ಹಿಡಿತ ಹೊಂದಲು ಸಾಧ್ಯವಾಗುತ್ತದೆ. ಹೇಗೆ ಕಲಿಯಬೇಕೆಂಬುದನ್ನು ಕಲಿಯುವುದೂ ಕೂಡಾ ಉತ್ತಮ ಶಿಕ್ಷಣದ ಒಂದು ಮಹತ್ವದ ಭಾಗವಾಗಿರುತ್ತದೆ.

ಶಿಕ್ಷಣದಲ್ಲಿ ಮೂಲಭೂತ ಅವಶ್ಯಕತೆಗಳನ್ನು ಅದರಲ್ಲೂ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ನಿರಂತರ ಉನ್ನತ ಗುಣವನ್ನು ಕಾಯ್ದುಕೊಳ್ಳಬೇಕಾಗುತ್ತದೆ ಹಾಗೂ ಪ್ರಚಲಿತ ಸನ್ನಿವೇಶಕ್ಕೆ ಸ್ಪಂದಿಸುವ ರೀತಿಯಲ್ಲಿ ಸಜ್ಜುಗೊಳಿಸಬೇಕಾಗುತ್ತದೆ. ಪ್ರಯೋಗಾಲಯ, ಉಪಕರಣಗಳು, ಗ್ರಂಥಾಲಯ, ತೀವ್ರವೇಗ ಸಂಪರ್ಕದ ಗಣಕಯಂತ್ರಗಳು ಹಾಗೂ ಸುಸಜ್ಜಿತ ವರ್ಗಕೋಣೆಗಳು ಜಾಗತಿಕ ಮಟ್ಟಕ್ಕೆ ಸರಿಸಾಟಿಯಾಗಬಲ್ಲಂಥವುಗಳಾಗದಿದ್ದರೂ ಕನಿಷ್ಠ ಸಮರ್ಪಕ ಮಟ್ಟದಲ್ಲಾದರೂ ಇರುವಂತೆ ನೋಡಿಕೊಳ್ಳಬೇಕಾಗುತ್ತದೆ.

ತೀವ್ರವೇಗ ಗತಿಯ ಪ್ರಗತಿಯ ಪ್ರಸ್ತುತ ಸಂದರ್ಭದ ಹಿನ್ನೆಲೆಯಲ್ಲಿ ಪ್ರತಿಭಾವಂತ ಸಂಶೋಧನಾಕಾರರ ಸಂಖ್ಯಾಪ್ರಮಾಣವೂ ಹೆಚ್ಚಳಗೊಳ್ಳುವುದು ಅವಶ್ಯವಿದೆ. ಅತ್ಯುನ್ನತ ಮಟ್ಟದ ಸಂಶೋಧನಾ ಸಾಮರ್ಥ್ಯದ ಹೆಚ್ಚು ಹೆಚ್ಚು ವಿದ್ಯಾರ್ಥಿಗಳನ್ನು ವಿಶ್ವವಿದ್ಯಾಲಯಗಳು ಎಲ್ಲಿಯವರೆಗೆ ಹೊಂದುವುದಿಲ್ಲವೋ ಅಲ್ಲಿಯವರೆಗೆ ಒಂದು ರಾಷ್ಟ್ರವಾಗಿ ನಮ್ಮ ದೇಶ ತನ್ನ ನಿಜವಾದ ಸಾಮರ್ಥ್ಯವನ್ನು ಕಂಡುಕೊಳ್ಳಲಾರದು, ತನ್ನ ಯುವಶಕ್ತಿಯ ಪೂರ್ಣ ಪ್ರತಿಭೆಯನ್ನು ಬಳಸಿಕೊಳ್ಳಲಾರದು, ಬೆಳೆಸಿಕೊಳ್ಳಲಾರದು. ವಿಶ್ವವಿದ್ಯಾಲಯದಲ್ಲಿ ಸಂಶೋಧನಾ ವಿದ್ಯಾರ್ಥಿಗಳ ಪ್ರಸ್ತುತ ಸಂಖ್ಯೆ ಅತ್ಯಂತ ನಿರಾಶಾದಾಯಕ ಮಟ್ಟದಲ್ಲಿದೆ. ತಂತ್ರಜ್ಞಾನದಲ್ಲಿ, ಪ್ರತಿವರ್ಷ ಇಡೀ ರಾಷ್ಟ್ರದಲ್ಲಿ ಪಿಎಚ್.ಡಿ.ಗಳ ಸಂಖ್ಯೆ ಐದುನೂರಕ್ಕೂ ಕಡಿಮೆ ಇದೆ. ಗುಣಮಟ್ಟವೂ ಕೂಡಾ ಅಷ್ಟೇ ಕಳವಳಕಾರಿ ರೀತಿಯಲ್ಲಿ ಕಳಪೆತನದ್ದಾಗಿದೆ. ಬಹಳಷ್ಟು ಸಂಶೋಧನೆ ಪುನರಾವರ್ತನೆಯಾಗಿದೆ ಅಥವಾ ಅಪ್ರಸ್ತುತವಾಗಿದೆ. ಎಮ್.ಟೆಕ್. ಹಾಗೂ ಪಿಎಚ್.ಡಿ. ವಾಸಿಸಿಗೆ ಹೆಚ್ಚು ಹೆಚ್ಚು ವಿದ್ಯಾರ್ಥಿಗಳನ್ನು ಆಕರ್ಷಿಸುವುದು ಹಾಗೂ ಅವರ ಸಂಶೋಧನೆಗಳನ್ನು ಸದ್ಯದ ಸನ್ನಿವೇಶಕ್ಕೆ ಸ್ಪಂದಿಸುವ ರೀತಿಯಲ್ಲಿ ಸೂಕ್ತವಾಗಿರುವಂತೆ ನೋಡಿಕೊಳ್ಳುವುದು ಅವಶ್ಯವಿದೆ.

ಸಂಶೋಧನೆಗಳು ಕೈಗಾರಿಕೆಗಳಿಗೆ ಪ್ರಸ್ತುತವಾದರೆ ಕೈಗಾರಿಕೆಗಳು ಅಂಥ ಸಂಶೋಧನೆಗಳಿಗೆ ಮಹತ್ವ ಕೊಡುತ್ತವೆ. ಇದರಿಂದಾಗಿ ಎಮ್.ಟೆಕ್. ಹಾಗೂ ಪಿಎಚ್.ಡಿ.ಗಳಿಗೆ ಕೈಗಾರಿಕಾ ಕ್ಷೇತ್ರದಲ್ಲಿ ಬೇಡಿಕೆ ಹೆಚ್ಚಳಗೊಳ್ಳುತ್ತದೆ. ಪರಿಣಾಮವಾಗಿ ಎಮ್.ಟೆಕ್. ಮತ್ತು ಪಿಎಚ್.ಡಿ.ಗಳಿಗೆ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಆಕರ್ಷಿಸಲು ಸಹಾಯಕವಾಗುತ್ತದೆ. ಪ್ರತಿಭೆಗಳು ಕೂಡ ಸಂಶೋಧನೆಗಾಗಿ ವಿಶ್ವವಿದ್ಯಾಲಯಗಳಲ್ಲಿ ಮತ್ತೆ ಮುಂದುವರಿಯುವ ಸಾಧ್ಯತೆಗಳು ಹೆಚ್ಚುತ್ತವೆ. ಎಮ್.ಟೆಕ್. ಹಾಗೂ ಪಿಎಚ್.ಡಿ.ಗಳ ಹೆಚ್ಚಳ ಶಿಕ್ಷಣದ ಗುಣಮಟ್ಟದ ಹೆಚ್ಚಳಕ್ಕೆ ಪೂರಕವಾಗಿ ಸಹಾಯಕವಾಗುತ್ತದೆ. ಸಂಶೋಧನೆಗಳ ಹೆಚ್ಚಳ ಉತ್ಪಾದನೆಯನ್ನು ಹೆಚ್ಚಿಸುವುದರ ಜೊತೆಗೆ ಉತ್ಪಾದನಾ ಗುಣಮಟ್ಟದ ಹೆಚ್ಚಳಕ್ಕೂ ಸಹಾಯಕವಾಗುವುದರಿಂದ ವಿಶ್ವವಿದ್ಯಾಲಯ ಶಿಕ್ಷಕರ ಸಂಬಳ ಹಾಗೂ ಸ್ಥಾನಮಾನ ಹೆಚ್ಚಳಗೊಳಿಸಲು ವಿಶ್ವವಿದ್ಯಾಲಯದ ಜೊತೆಗೆ ಉದ್ದಿಮೆದಾರರೂ ಕೈಜೋಡಿಸಲು ಮುಂದಾಗುತ್ತಾರೆ. ಇದು ಶಿಕ್ಷಕರನ್ನು ಉತ್ಸಾಹಗೊಳಿಸುವುದಲ್ಲದೆ ಪೂರ್ಣ ಶ್ರಮ, ಶ್ರದ್ಧೆ ಹಾಗೂ ಅಧ್ಯಯನದೊಂದಿಗೆ ಸಂಶೋಧನೆಯಲ್ಲಿ ತೊಡಗಿಕೊಳ್ಳಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತದೆ. ಪ್ರಾಧ್ಯಾಪಕ ವೃತ್ತಿಯನ್ನು ಆಕರ್ಷಕಗೊಳಿಸುವುದರ ಜೊತೆಗೆ ಸಂಶೋಧನಾ ಕ್ಷೇತ್ರಕ್ಕೆ ಪ್ರತಿಭೆಗಳನ್ನು ಆಕರ್ಷಿಸುವಲ್ಲಿ ಯಶಸ್ಸು ನೀಡುತ್ತದೆ.

ತಂತ್ರಜ್ಞಾನದ ಜ್ಞಾನಕ್ಷೇತ್ರಗಳಲ್ಲಿ ಶಿಕ್ಷಣವನ್ನು ಇಂದಿನ ಅವಶ್ಯಕತೆಗಳಿಗೆ ಸ್ಪಂದಿಸುವಂತೆ ಹೆಚ್ಚು ಅರ್ಥಪೂರ್ಣಗೊಳಿಸಬೇಕಿದೆ. ಪದವಿ ಪ್ರಮಾಣಪತ್ರಗಳೊಂದಿಗೆ ವಿದ್ಯಾರ್ಥಿಗಳು ಉದ್ಯೋಗ ಮಾರುಕಟ್ಟೆಗೆ ನುಗ್ಗುತ್ತಾರೆ. ಅವರಿಗೆ ಉದ್ಯೋಗಾವಕಾಶ ಕಲ್ಪಿಸಿಕೊಡುವುದು ಪರಿಣತರ ಹಾಗೂ ಉದ್ದಿಮೆದಾರರ ಹೊಣೆಯಾಗಿದ್ದು, ಸೌಮ್ಯ ಕೌಶಲ್ಯಗಳಾದ ಸಂಪರ್ಕ, ಮಾಹಿತಿ ರವಾನೆ, ತಂಡಕಾರ್ಯೋತ್ಸಾಹಗಳು, ಕಲೆ, ವಿಜ್ಞಾನ ಹಾಗೂ ವಾಣಿಜ್ಯ ಪಠ್ಯದ ಮುಖ್ಯಭಾಗಗಳಾಗಬೇಕು.

ಶಿಕ್ಷಣ ವ್ಯಾಪಕಗೊಳ್ಳುತ್ತಿರುವ ಸದ್ಯದ ಸಂದರ್ಭದಲ್ಲಿ ಪ್ರಮಾಣ ಅಥವಾ ಗಾತ್ರ ಗಂಭೀರ ಸಮಸ್ಯೆಯಾಗಿಲ್ಲ. ಇಂದು ಪ್ರತಿವರ್ಷದ ಇಂಜನಿಯರಿಂಗ್ ಸೀಟುಗಳ ಸಂಖ್ಯೆ ದೇಶಾದ್ಯಂತ ಒಟ್ಟು ೪,೫೦,೦೦೦ ಇದೆ. ಪ್ರತಿವರ್ಷ ಮೂರುದಶಲಕ್ಷ ಪದವೀಧರರು ಹೊರಬರುತ್ತಾರೆ. ಆದಾಗ್ಯೂ ಪೂರೈಕೆ ಹಾಗೂ ಬೇಡಿಕೆ ಎರಡು ಇನ್ನೂ ಸಾಕಷ್ಟು ಹೆಚ್ಚಾಗ ಬೇಕಿದೆ. ಇದನ್ನು ಸಾಧಿಸುವಲ್ಲಿ ಗುಣಮಟ್ಟ ಕಾಯ್ದುಕೊಳ್ಳುವುದರ ಜೊತೆಗೆ ಸುಧಾರಿಸುವುದೂ ಅವಶ್ಯವಿದೆ. ಸರಕಾರವು ಎಲ್ಲ ಪದವಿ ಪಠ್ಯಗಳಲ್ಲಿ ಜಾಗತಿಕ ಗುಣಮಟ್ಟ ಕಾಯ್ದುಕೊಳ್ಳಲು ಪ್ರತಿವರ್ಷ ಜಾಗತಿಕ ಗುಣಮಟ್ಟದ ಸುಸಜ್ಜಿತ ಸಂಸ್ಥೆಗಳನ್ನು ಸ್ಥಾಪಿಸುವುದು ಅವಶ್ಯವಿದೆ. ದೇಶವನ್ನು ಜಾಗತಿಕ ಶಿಕ್ಷಣ ಕೇಂದ್ರವನ್ನಾಗಿಸುವತ್ತ ಪ್ರಾಮಾಣಿಕ ಪ್ರಯತ್ನ ಇಂದಿನ ಬಹು ತುರ್ತು ಅವಶ್ಯಕತೆಯಾಗಿದೆ.

ಶಿಕ್ಷಣ ಕ್ಷೇತ್ರದಲ್ಲಿ ಸಂಶೋಧನೆ ಹಾಗೂ ನಾವೀನ್ಯತೆಯನ್ನು ಭಾರತ ಬೆಳೆಸಿಕೊಳ್ಳಬೇಕಾಗಿದೆ. ವೈವಿಧ್ಯತೆಗೆ ಒತ್ತುಕೊಡಬೇಕಿದೆ. ಸಾಂಪ್ರದಾಯಿಕ ಕಲಿಕೆಯನ್ನು ಕನಿಷ್ಠಗೊಳಿಸಬೇಕಾಗಿದೆ. ಪರೀಕ್ಷಾ ಪದ್ಧತಿಯನ್ನು ಬದಲಿಸ ಬೇಕಿದೆ. ಪಠ್ಯವನ್ನು ನಾವೀನ್ಯತೆಗೆ ಸರಿಹೊಂದಿಸಬೇಕಿದೆ. ಬೋಧನಾ ವಿಧಾನದಲ್ಲಿ ಸೂಕ್ತ ಮಾರ್ಪಾಡಿನ ಅವಶ್ಯಕತೆ ಇದೆ. ಉನ್ನತ ಶಿಕ್ಷಣದಲ್ಲಿ ಮುಕ್ತತೆಯನ್ನು ಸಾಧಿಸಬೇಕಿದೆ. ಹೆಚ್ಚು ಹೆಚ್ಚು ಪ್ರತಿಭಾವಂತರನ್ನು ಹೆಚ್ಚು ಸಂಖ್ಯೆಯಲ್ಲಿ ವಿಜ್ಞಾನಕ್ಕೆ ಆಕರ್ಷಿಸುವ ಕೆಲಸ ನಡೆಯಬೇಕಿದೆ. ವಿಜ್ಞಾನವು ತಂತ್ರಜ್ಞಾನದ ಬುನಾದಿಯಾಗಿದೆ. ಶಾಲೆಗಳಲ್ಲಿ ಗಣಿತ ಹಾಗೂ ವಿಜ್ಞಾನದ ಉತ್ತಮ ಬೋಧನೆ,. ಉತ್ತಮ ಪ್ರಯೋಗಾಲಯ ಸೌಲಭ್ಯಗಳು ಮತ್ತು ಸದ್ಯದ ಸಂದರ್ಭಕ್ಕೆ ಸೂಕ್ತವಾದ ಪಠ್ಯ ಸದ್ಯದ ಜರೂರು ಅವಶ್ಯಕತೆ ಗಳಾಗಿವೆ. ಈ ಕಾರಣಕ್ಕಾಗಿ ಖಾಸಗಿ ಹಾಗೂ ಸರಕಾರಿ ವಲಯಗಳು ಒಂದುಗೂಡಬೇಕು. ಕೈಗಾರಿಕೆ ಹಾಗೂ ಶಿಕ್ಷಣಕ್ಷೇತ್ರಗಳು ಒಂದು ಗೂಡಬೇಕು. ಇದರಿಂದ ಪರಸ್ಪರ ಹೆಚ್ಚು ಹೆಚ್ಚು ಪ್ರಯೋಜನಗಳು ಖಚಿತ.

ಟಿ. ಎ. ಮಾಗಳದ
ನಿಸರ್ಗ, ಹಿರೇಮಲ್ಲೂರ್ ಈಶ್ವರನ್ ಪಿ. ಯು. ಕಾಲೇಜ್ ಎದುರಿಗೆ, ೮ನೇ ಕ್ರಾಸ್
ಕಲ್ಯಾಣನಗರ, ಅಂಚೆ : ಧಾರವಾಡ - ೫೮೦ ೦೦೭

# ಅಮೃತಾ ಪ್ರೀತಂ ಅವರ 'ಪಿಂಜರ್'

## ಸಾಹಿತ್ಯದ ಕೈಗನ್ನಡಿಯಲ್ಲಿ ಸ್ತ್ರೀ ಶೋಷಣೆಯ ಪ್ರತಿಬಿಂಬಗಳು

ಧರ್ಮ ಹಾಗೂ ಸಾಮಾಜಿಕ ರೂಢಿಗಳ ತುಳಿತಕ್ಕೆ ಸಿಲುಕಿ ನಲುಗುವ ಅಸಂಖ್ಯಾತ ಹೆಣ್ಣುಗಳೇ ಅಮೃತಾ ಅವರ ಬರಹಗಳ ಜೀವನಾಡಿಗಳಾಗಿದ್ದಾರೆ. ಅಂತಹ ಹೆಣ್ಣುಗಳ ಬದುಕಿನುದ್ದಕ್ಕೂ ನಡೆಯುವ ಭಾವನೆಗಳ ಸೂಕ್ಷ್ಮ ತಾಕಲಾಟವೇ ಅವುಗಳ ಬೇರು. ಅವಳು ಎದುರಿಸುವ ಎಲ್ಲ ನೋವುಗಳ ಎಡೆಯಲ್ಲೂ ಜೀವಸಂಜೀವಿನಿಯಂತೆ ಮಿನುಗುವ ಮಾನವತೆಯ ತುಣುಕುಗಳೇ ಅವುಗಳ ಜೀವಾಳ. ಅವರ 'ಕಾಡಿನ ಬೇರು'ವಿನಂತಹ ಕತೆಗಳಲ್ಲಾಗಲೀ, 'ಪಿಂಜರ್'ನಂತಹ ಕಾದಂಬರಿಯಲ್ಲಾಗಲೀ 'ಅಂಗೂರಿ', 'ಪೂರೋ'ರಂತಹ ಹೆಣ್ಣುಗಳು ಇಂತಹ ಕಾಲಾತೀತವಾದ ನೋವಿಗೆ ಆಹಾರವಾದ ಅಸಂಖ್ಯಾತ ಹೆಣ್ಣುಗಳ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ.

— ಡಾ|| ಶೈಲಾ ಯು. —



**ಹೆ**ಣ್ಣಿನ ಶೋಷಣೆಗೆ ಅನಾದಿ ಕಾಲದ ಇತಿಹಾಸವಿದೆ. ಅದು ಹಲವು ಆಯಾಮಗಳ ಮೂಲಕ ಹಲವು ನೆಲೆಗಳಲ್ಲಿ ನಿರಂತರವಾಗಿ ಸಾಗಿಬಂದಿದೆ. ಇಂದಿಗೂ ಅದು ಹೊಸ ಹೊಸ ಮುಖಗಳ ಮೂಲಕ ನಮ್ಮೆದುರು ಅನಾವರಣಗೊಳ್ಳುತ್ತಲೇ ಇದೆ. ಅದಕ್ಕೆ ಧರ್ಮ, ವರ್ಗ, ವರ್ಣ, ಜಾತಿ ಸಂಘರ್ಷಗಳು ಕೇವಲ ನೆಪವಾಗಿವೆ. ಸಾಮಾಜಿಕ ಸಂಕ್ರಮಣಾವಸ್ಥೆಗಳು ಶೋಷಣೆಗೆ ಸಂದರ್ಭಗಳಾಗಿವೆ. ಇಂತಹ ಸಂದರ್ಭಗಳಲ್ಲಿ ಹುಟ್ಟಿಕೊಂಡ ಸಮಸ್ಯೆಗಳು ಸಮಸ್ಯೆಗಳಾಗಿಯೇ ಉಳಿಯುತ್ತವೆ. ಉಪಖಂಡಗಳಲ್ಲಿನ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಇದು ಸಾಮಾನ್ಯವೂ ಹೌದು. ಅಲ್ಲಿ ಅಸ್ತಿತ್ವದಲ್ಲಿ ಇದ್ದೂ ನಿರುಪಯುಕ್ತವಾದ ಕಾನೂನು, ಎರಡನೆಯ ದರ್ಜೆಯ ಪ್ರಜೆಯಾಗಿ ಪರಿಗಣಿತಳಾದ ಹೆಣ್ಣಿಗೆ ರಕ್ಷಣೆ ನೀಡುತ್ತಿಲ್ಲ. ಪುರುಷ ತನ್ನ ಪರವಾಗಿಯೇ ಬಳಸಿಕೊಳ್ಳಲು ಹೇರಳ ಅವಕಾಶವಿರುವ ಧಾರ್ಮಿಕ ನೀತಿ ನಿಯಮಗಳು ಹೆಣ್ಣಿನ ಸಮಸ್ಯೆಗಳು ಸದಾ ಜೀವಂತವಾಗಿ ಇಡುವುದಕ್ಕೆ ಕಾರಣವಾಗಿವೆ. ಆ ಮೂಲಕ ಪುರುಷಪ್ರಧಾನ ವ್ಯವಸ್ಥೆಗೆ ಪೂರಕವಾಗಿ ದುಡಿದು ಶೋಷಣೆಯನ್ನು ನಿರಂತರವಾಗಿಸುತ್ತವೆ. ಈ ಎಲ್ಲ ಕಾರಣಗಳಿಗಾಗಿಯೇ ಜಾತಿ, ಭಾಷೆ, ಪ್ರದೇಶಗಳ ಮಿತಿಯನ್ನೂ ಮೀರಿ ಸಾರ್ವತ್ರಿಕವೂ ವಿಶ್ವವ್ಯಾಪಿಯೂ ಆಗಿ ಶೋಷಣೆಯು ಕಾಣಿಸಿಕೊಳ್ಳುತ್ತಿದೆ. ಮತ್ತು ಅದು ಸಾಹಿತ್ಯದ ಹಲವು ಮಜಲುಗಳಲ್ಲಿ ನಮ್ಮೆಲ್ಲರೆದುರು ತೆರೆದುಕೊಳ್ಳಬೇಕಾದ ಅಗತ್ಯ ಮತ್ತು ಅನಿವಾರ್ಯತೆ ಎರಡೂ ಇದೆ.



ಹಾಗಾಗಿಯೇ ಕನ್ನಡಕ್ಕೆ ಅನುವಾದಗೊಂಡ ಮಹಾಶ್ವೇತಾದೇವಿಯವರ ಹಜಾರ್ ಚೌರೇಶಿರ್ ಮಾ (1084ರ ತಾಯಿ; ಅನು ಎಚ್. ಎಸ್. ಶ್ರೀಮತಿ) ಹಾಗೂ ದ್ರೌಪ್ದಿ (ದ್ರೌಪ್ದಿ ಮತ್ತು ಇತರ ಕಥೆಗಳು ; ಅನು: ಎಚ್. ಎಸ್. ಶ್ರೀಮತಿ)ಯಾಗಲಿ, ನವಲ್ ಎಲ್. ಸಾದವಿಯವರ ವುಮನ್ ಅಟ್ ಜೀರೋ ಪಾಯಿಂಟ್ (ಶೂನ್ಯವಾದವಳು; ಅನು: ವೆಂ. ವನಜ) ಆಗಲೀ, ಸುಶ್ಮಿತಾ ಬಂಡೋಪಾಧ್ಯಾಯ ಅವರ ಆತ್ಮಚರಿತ್ರಾತ್ಮಕ ಕಾದಂಬರಿ (ಕಾಬೂಲಿವಾಲಾನ ಬಂಗಾಲಿ ಹೆಂಡತಿ; ಅನು: ಜಿ. ಕುಮಾರಪ್ಪ)ಯಾಗಲೀ ಸಮಕಾಲೀನ ಸಂದರ್ಭದಲ್ಲೂ ಪ್ರಸ್ತುತವೆನಿಸಿವೆ. ಮತ್ತು ಅವು ಎಲ್ಲ ಭಾಷೆಯ ಓದುಗರನ್ನು ತಲುಪಬೇಕಾದ ತುರ್ತನ್ನು ಈಗಷ್ಟೇ ತುಂಬುವ ಪ್ರಯತ್ನಗಳಾಗಿದ್ದು, ಭಾಷಾಂತರ ಕಾರ್ಯದ ಮೂಲಕ ಆ ಪ್ರಯತ್ನ ಆರಂಭವಾಗಿದೆ. ಅಂತಹ ಇನ್ನೊಂದು ಪ್ರಾಮಾಣಿಕ ಪ್ರಯತ್ನವನ್ನು ಡಾ|| ಎಲ್. ಸಿ. ಸುಮಿತ್ರಾ ಅವರು ಅಮೃತಾ ಪ್ರೀತಂ ಅವರ ಪಿಂಜರ್ ಕಾದಂಬರಿಯನ್ನು ಅದೇ ಹೆಸರಿನಲ್ಲಿ ಕನ್ನಡಕ್ಕೆ ಅನುವಾದಿಸುವ ಮೂಲಕ ಮಾಡಿದ್ದಾರೆ. ಈಗಾಗಲೇ ಚಲನಚಿತ್ರವಾಗಿ ಸಾಕಷ್ಟು ಪರಿಣಾಮಕಾರಿಯಾಗಿ ನಮ್ಮೆದುರು ಮೂಡಿಬಂದ 'ಪಿಂಜರ್' ಅಷ್ಟೇ ಸಮರ್ಥವಾಗಿ ಅನುವಾದಿತ ಬರಹರೂಪದಲ್ಲೂ ಮೂಡಿಬಂದಿದೆ. ಯಾವುದೋ ಧಾರ್ಮಿಕ, ಸಾಮಾಜಿಕ ಸ್ಥಿತ್ಯಂತರದ, ಚಳುವಳಿಯ ಸಂದಿಯಲ್ಲಿ ಮಿಂಚಿ ಮರೆಯಾಗಬಹುದಾದ, ಇತರರಿಗೆ ಗೌಣವಾಗಬಹುದಾದ ಘಟನೆಗಳೇ ಮೇಲೆ ಹೇಳಿದ ಲೇಖಕಿಯರ ಹೆಚ್ಚಿನ ಕಥೆಗಳ ವಸ್ತುಗಳಾಗಿವೆ. ಇದು ಗಮನಾರ್ಹ ಅಂಶವಾಗಿದೆ.

ಧರ್ಮ ಹಾಗೂ ಸಾಮಾಜಿಕ ರೂಢಿಗಳ ತುಳಿತಕ್ಕೆ ಸಿಲುಕಿ ನಲುಗುವ ಅಸಂಖ್ಯಾತ ಹೆಣ್ಣುಗಳೇ ಅಮೃತಾ ಅವರ ಬರಹಗಳ ಜೀವನಾಡಿಗಳಾಗಿದ್ದಾರೆ. ಅಂತಹ ಹೆಣ್ಣುಗಳ ಬದುಕಿನುದ್ದಕ್ಕೂ ನಡೆಯುವ ಭಾವನೆಗಳ ಸೂಕ್ಷ್ಮ ತಾಕಲಾಟವೇ ಅವುಗಳ ಬೇರು. ಅವಳು ಎದುರಿಸುವ ಎಲ್ಲ ನೋವುಗಳ ಎಡೆಯಲ್ಲೂ ಜೀವಸಂಜೀವಿನಿಯಂತೆ ಮಿನುಗುವ ಮಾನವತೆಯ ತುಣುಕುಗಳೇ ಅವುಗಳ ಜೀವಾಳ. ಅವರ 'ಕಾಡಿನ ಬೇರು'ವಿನಂತಹ ಕತೆಗಳಲ್ಲಾಗಲೀ, 'ಪಿಂಜರ್'ನಂತಹ ಕಾದಂಬರಿಯಲ್ಲಾಗಲೀ 'ಅಂಗೂರಿ', 'ಪೂರೋ'ರಂತಹ ಹೆಣ್ಣುಗಳು ಇಂತಹ ಕಾಲಾತೀತವಾದ ನೋವಿಗೆ ಆಹಾರವಾದ ಅಸಂಖ್ಯಾತ ಹೆಣ್ಣುಗಳ ಪ್ರತಿನಿಧಿಗಳಾಗಿ ಕಾಣಿಸಿಕೊಳ್ಳುತ್ತಾರೆ. ಹಾಗಾಗಿಯೇ 'ಸಾಹೇಬ್ ಕಾ ಮಾಲ್' ಎಂದೇ ಗುರುತಿಸಲ್ಪಡುವ ಕಾಬೂಲಿವಾಲಾನ ಬಂಗಾಲಿ ಹೆಂಡತಿ ಸುಮಿಯ ನೋವಾಗಲೀ, ಅವಳಂತೆಯೇ ತಾನು ತನ್ನ ಪತಿಯ ಎರಡನೆಯ ಹೆಂಡತಿ ಎಂದು ಅನಿರೀಕ್ಷಿತವಾಗಿ ತಿಳಿದು ಆಘಾತಕ್ಕೊಳಗಾಗುವ ಪಿಂಜರ್‌ನ ತಾರೋಳ ನೋವಾಗಲೀ ಎರಡೂ ಸಮಾನ ಮಟ್ಟದವು. ಹೆಣ್ಣು ತನ್ನ ಬದುಕಿನ ಒಂದಿಲ್ಲೊಂದು ಹಂತದಲ್ಲಿ ಅನುಭವಿಸಿಯೇ ಇರುವ ನೋವನ್ನು ಇವರೆಲ್ಲ ಜಿಂಜಿಸುತ್ತಾರೆ, ನೋವಿನ ಹಾಲಾಹಲವನ್ನು ನುಂಗುತ್ತಾರೆ, ಬದುಕುಳಿಯುತ್ತಾರೆ ಮತ್ತು ಅಸದಳ ಜೀವನಪ್ರೀತಿಗೆ ದೃಷ್ಟಾಂತವಾಗುತ್ತಾರೆ.

ಮೂಲತಃ ಹಿಂದೂ-ಮುಸ್ಲಿಂ ಸಂಘರ್ಷದ ಮುಖ್ಯ ಎಳೆಯಿಂದ ಹೊರಟಂತೆ ಕಾಣುವ ಕಾದಂಬರಿ ವಾಸ್ತವದಲ್ಲಿ ಹೆಣ್ಣಿನ ಪಾವಿತ್ರ್ಯದ ಕುರಿತ ಸಿದ್ಧಮಾದರಿಯ ಪರಿಕಲ್ಪನೆಗಳು ಹೇಗೆ ಅವಳ ಬದುಕನ್ನು ನುಚ್ಚು ನೂರಾಗಿಸುತ್ತವೆ, ಎಷ್ಟು ಸಲೀಸಾಗಿ ಹೊಸಕಿಹಾಕುತ್ತವೆ, ಅವಳ ಮೈಯ್ಯನ್ನು ಮನಸ್ಸಿನಿಂದ ಹೇಗೆ ಬೇರ್ಪಡಿಸಿ ನೋಡುತ್ತವೆ ಎಂಬುದಕ್ಕೆ ಸಾಕ್ಷಿಯಾಗಿವೆ. ಚೆನ್ನಾಗಿ ಉಂಡುಟ್ಟು ಬದುಕಿದ್ದ ಕುಟುಂಬದ ಪೂರೋ ಕೌಟುಂಬಿಕ ವೈಷಮ್ಯದ ದಳ್ಳುರಿಯೇ ನೆಪವಾಗಿ ರಶೀದನಿಂದ ಅಪಹರಿಸಲ್ಪಡುತ್ತಾಳೆ. ಅವಳ ಮದುವೆ ನಿಶ್ಚಯವಾಗಿದ್ದು, ಅದರ ಸವಿಗನಸಿನಲ್ಲೇ ತೇಲಾಡುತ್ತಿದ್ದ ಪೂರೋಳ ಭವಿಷ್ಯ ಅಂಧಕಾರದಲ್ಲಿ ಸಿಲುಕುತ್ತದೆ. ಹದಿನೈದು ದಿನಗಳ ಕಾಲ ರಶೀದನ ಜೊತೆ ಕಳೆಯ ಬೇಕಾಗಿ ಬರುವ ಪೂರೋ ಒಂದು ದಿನ ಅಲ್ಲಿಂದ ಪಲಾಯನಮಾಡುತ್ತಾಳೆ. ಹೆತ್ತವರ ಮಡಿಲಿನ ಸುಖೋಷ್ಣವನ್ನು ಮಾತ್ರ ಅನುಭವಿಸಿದ್ದ ಪೂರೋಳ ಎಳೆಯ ಮನಸ್ಸು, ಸಮಾಜದ ಬಹಿಷ್ಕಾರಕ್ಕೆ ಹೆದರಿ ತನ್ನದಲ್ಲದ ತಪ್ಪಿಗೆ [ಸಮಾಜ ಹೇಳುವ ಯಾವ ಬಗೆಯ ಆಕ್ರಮಣಕ್ಕೂ (ಲೈಂಗಿಕ ಅಥವಾ ದೈಹಿಕವಾಗಿ) ರಶೀದನಿಂದ ಒಳಗಾಗದಿದ್ದರೂ] ತನ್ನನ್ನು ನಿರಾಕರಿಸುವ ತಂದೆ-ತಾಯಿಯರಿಂದ ಬಹುದೊಡ್ಡ ಆಘಾತಕ್ಕೆ ಒಳಗಾಗುತ್ತಾಳೆ. ಮುಂದೆ ನಿರ್ವಾಹವಿಲ್ಲದೆ ರಶೀದನನ್ನೇ ಮದುವೆಯಾಗಬೇಕಾಗಿ ಬಂದು, ತನ್ನ ಬದುಕಿನಲ್ಲಿ ಎದುರಾಗುವ ಎಲ್ಲ ಸಂಘರ್ಷಗಳಿಗೆ ಅವಳು ಮುಖಾಮುಖಿಯಾಗಬೇಕಾಗುತ್ತದೆ. ಒಂದು ಹಂತದವರೆಗೂ ಮಾನಸಿಕವಾಗಿ ತೊಳಲಾಡುವ ಪೂರೋ ಅನಂತರದಲ್ಲಿ ತನ್ನ ನೋವು ನೋವೇ ಅಲ್ಲವೇನೋ ಎಂಬಷ್ಟರಮಟ್ಟಿಗೆ ತನ್ನದೇ ಆದ ನೆಲೆಯಲ್ಲಿ ಶೋಷಿತ ಹೆಣ್ಣುಗಳ ರಕ್ಷಣೆಯಲ್ಲಿ ತೊಡಗುವುದು ಕಥೆಯ ಹಂದರ.

ಸಮಾಜವು ಧರ್ಮನಿರ್ಮಿತವಾದುದು. ಅದು ತನ್ನ ಮೇಲೆ ಹೇರಿರುವ ನಿರ್ಬಂಧಗಳ ಭಾರಕ್ಕೆ ಸಿಲುಕಿ ಹೆಣ್ಣು ತನ್ನ ಬದುಕಿಗಾಗಿ ಹೋರಾಡಲೇಬೇಕಾಗಿದೆ. ಹೆಣ್ಣಾಗಿರಲಿ, ಗಂಡಾಗಿರಲಿ – ಆತ್ಮಸಾಕ್ಷಿಗೆ ಉತ್ತರಿಸಬೇಕಾದ ಯಾವ ವ್ಯಕ್ತಿಗೂ ಧರ್ಮದ ಚೌಕಟ್ಟನ್ನು ಮೀರಿನಿಲ್ಲುವ ಮಾನಸಿಕ ತೊಳಲಾಟ ತಪ್ಪಿದ್ದಲ್ಲ ಎಂಬುದನ್ನು ರಶೀದನ ಸಂದರ್ಭದಲ್ಲಿ ಕಾದಂಬರಿ ನಿರೂಪಿಸುತ್ತದೆ. ಕಾದಂಬರಿಯ ಆರಂಭದಲ್ಲಿ ಕರಡಿಯಂತೆ ಖಳನಾಗಿ ಕಾಣಿಸುವ ರಶೀದ ಮುಂದೆ ನಿಧಾನಕ್ಕೆ ನಾಯಕನಾಗುತ್ತ ನಿಜವಾದ ಅರ್ಥದಲ್ಲಿ ಮಾನವನಾಗುತ್ತ ಸಾಗುತ್ತಾನೆ. ರಶೀದನೇ ಹೇಳುವಂತೆ ಪೂರೋಳನ್ನು ತಾನು ಅಪಹರಿಸಿದುದಕ್ಕೆ ಮನೆತನದ ದ್ವೇಷಕ್ಕಿಂತ ಹೆಚ್ಚಾಗಿ ಅವನಿಗೆ ಅವಳಲ್ಲಿ ಹುಟ್ಟಿಕೊಂಡ ಯೌವನಸಹಜವಾದ ಆಕರ್ಷಣೆಯೇ ಕೆಲಸಮಾಡಿದೆ ಎನ್ನಬಹುದು. ಮುಂದೆ ಈ ಆಕರ್ಷಣೆ ಪ್ರೀತಿಯಾಗಿ ಬದಲಾಗುತ್ತದೆ. ಹಾಗಾಗಿಯೇ ಆತ ಹಮೀದಳಾಗಿ ಬದಲಾದ ಪೂರೋಳ ಎಲ್ಲ ಸಾಹಸಗಳಲ್ಲಿ ಪಾಲುದಾರನಾಗುವ ಮೂಲಕ ತನ್ನನ್ನು ಉದ್ದಕ್ಕೂ ಕಾಡುವ ಪಾಪಪ್ರಜ್ಞೆಯಿಂದ ಪಾರಾಗಲು ಪ್ರಯತ್ನಿಸುತ್ತಾನೆ. ಆರಂಭದಲ್ಲಿ ಮಾತ್ರ ಅನ್ಯಧರ್ಮೀಯನಾಗಿ ಕಾಣಿಸುವ ರಶೀದ ಮುಂದೆ ಕೇವಲ ಮಾನವನಾಗುತ್ತಾನೆ. ಕಾದಂಬರಿಯಲ್ಲಿ 1947ರ ಬಳಿಕ ನಡೆದ ದೇಶ ವಿಭಜನೆಯಂತಹ ಸಾಮಾಜಿಕ ವಿಘಟನೆಯ ಸಂದರ್ಭದ ಪಾಶವೀಕೃತ್ಯಕ್ಕೆ ಸಾಕ್ಷಿಯಾಗುವ ಎಲ್ಲ ಘಟನೆಗಳು ಇಂದಿಗೂ ವಿಭಿನ್ನ ನೆಲೆಗಳಲ್ಲಿ, ವಿಭಿನ್ನ ರೂಪಗಳಲ್ಲಿ ಜೀವಂತವಾಗಿವೆ.

ಪೂರೋ ತನ್ನ ಬದುಕನ್ನು ಬಂದ ಹಾಗೆ ಸ್ವೀಕರಿಸುವಂತೆ ಕಂಡರೂ, ಹಲವು ಸಂದರ್ಭಗಳು ಅದನ್ನು ಮೀರಿ ಅವಳ ಒಳತೋಟಿಯನ್ನು ಪ್ರಕಟಿಸುತ್ತವೆ. ಚಾತ್ತೋ ಊರಿನ ರತ್ತೋವಲ್‌ನ ಹೆಸರು ಕೇಳುವಾಗಲೆಲ್ಲ ಅವಳ ಭಾವನೆಗಳು ಕೆರಳುತ್ತವೆ, ಮೈನವಿರೇಳುತ್ತದೆ. ಅಲ್ಲಿನ ಹಾದಿಗಳಲ್ಲಿ ಅವಳು ಮತ್ತೆ ಮದುಮಗಳಾಗುತ್ತಾಳೆ, ಪಲ್ಲಕ್ಕಿ ಏರುತ್ತಾಳೆ. ಈ ಸಂದರ್ಭದಲ್ಲೆಲ್ಲ ವಾಸ್ತವ ಜಗತ್ತು ಅವಳ ಕನಸಿನ ಜಗತ್ತಿಗೆ ಸಮಾನಾಂತರವಾಗಿ ಸಾಗುವುದನ್ನು ಕಾಣಬಹುದು. ಹಾಗಾಗಿ ಅವಳ ಕನಸಿನ ಮದುವೆಯ ವಾದ್ಯಪರಿಕರಗಳು, ಮೆರವಣಿಗೆಯ ಮಂದಿ, ಉತ್ಸವದ ವಾತಾವರಣ ವಾಸ್ತವದ್ದಾಗುತ್ತವೆ. ಆದರೆ ಅವು 'ಅವಳ ವಾಸ್ತವ'ವಲ್ಲ ಎಂಬುದಷ್ಟೇ ಸತ್ಯ.

'ಸ್ವಂತದ ನೋವು ಇತರರ ನೋವನ್ನು ನೋಡುವ ದೃಷ್ಟಿಯನ್ನು ನೀಡುತ್ತದೆ' ಎಂಬ ಮಾತಿನಂತೆ ಹಮೀದಳಾಗಿ ಬದಲಾದ ಪೂರೋ ತನ್ನ ಜೀವನದಲ್ಲಿ ತನ್ನ ಸಂಪರ್ಕಕ್ಕೆ ಬರುವ ಹಿಂದೂ ಹೆಣ್ಣುಮಗಳು, ತಾರೋ, ಕಮ್ಮೋ, ಹುಚ್ಚಿ, ಹುಚ್ಚಿಯ ಮಗು, ಲಾಜೋರಂಥ ಜೀವಗಳಿಗೆ ಅಮೃತಚೇತನಳಾಗಿ ಕಾಣಿಸುತ್ತಾಳೆ, ಅವರಿಗಾಗಿ ಹೋರಾಡುತ್ತಾಳೆ. ಇಲ್ಲೆಲ್ಲ ರಶೀದ ಅವಳಿಗೆ ಅದ್ಭುತವಾದ ಸಾಥ್ ನೀಡುತ್ತಾನೆ. ರಶೀದ ಅವಳನ್ನು ಅವಳ ಕುಟುಂಬದಿಂದ ಶಾಶ್ವತವಾಗಿ ಬೇರಾಗುವಂತೆ ಮಾಡಿದವನು. ಕುಟುಂಬದ ಜೊತೆಗಿನ ತನ್ನೆಲ್ಲ ಭಾವನಾತ್ಮಕ ಸಂಬಂಧವನ್ನು ಕೇವಲ ಕನಸಿನಲ್ಲಿ ಮೆಲುಕಾಡುವ ಮಟ್ಟಕ್ಕೆ ಇಳಿಸಿದವನು. ಆದರೂ **ತನ್ನದೇ ಮನೆ, ತನಗೊದಗಿದ ಭೀಕರ ದುಃಖದಿಂದ ತನಗೆ ರಕ್ಷೆ ನೀಡಬಲ್ಲ ಏಕಮಾತ್ರ ತಾಣ ಎಂದು ತಿಳಿದು ನೆಚ್ಚಿ** (ಒತ್ತು ನನ್ನದು) ಮನೆಗೆ ಮರಳಿದ ಕರುಳಕುಡಿಯನ್ನು ಸಮಾಜದ, ಕುಟುಂಬಿಕರ ಭಯಕ್ಕೆ ತೊರೆಯುವ ನಿರ್ಧಾರ ತಳೆದ ತಂದೆ-ತಾಯಿಯರೇ ಅವನಿಗಿಂತ ನಿರ್ದಯರಾಗಿ ಕಾಣಿಸುವುದು ಸಹಜವೇ ಆಗಿದೆ. ನಿಜವಾದ ಬದಲಾವಣೆ ಆಗಬೇಕಾದುದು ಎಲ್ಲಿ, ಯಾರ ನಿಲುವಿನಲ್ಲಿ ಎಂಬುದರತ್ತ ಈ ಸಂದರ್ಭವು ನಮ್ಮನ್ನು ಚಿಂತನೆಗೆ ಹಚ್ಚುತ್ತದೆ.




ನಮ್ಮಲ್ಲಿ ಹೆಣ್ಣಿನ ನಿರಂತರ ನೋವಿಗೆ ಕಾರಣವಾಗಿರುವ, ಸಮಾಜ ಬಯಸುವ ಸಿದ್ಧಮಾದರಿಯ ಹೆಣ್ಣು, ತಾರೋಳ ಮಾತುಗಳಲ್ಲಿ ಅದ್ಭುತವಾಗಿ ಮೂಡಿಬಂದಿದ್ದಾಳೆ. ಸಮಾಜದ ರೂಢಿಗಳು ಅವಳನ್ನು ಎಂತಹ ದುಃಸ್ಥಿತಿಗೆ ತಳ್ಳಿವೆ ಎಂಬುದಕ್ಕೆ ಇದು ಭಾಷ್ಯ ಬರೆದಂತಿದೆ ಎನ್ನುವಂತೆ ಕಾದಂಬರಿಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿತವಾಗಿದೆ. ನೇರವಾಗಿ ಪ್ರತಿಭಟಿಸುವ ಧೈರ್ಯವಿಲ್ಲದಿದ್ದಾಗ ಹೆಣ್ಣಿನ ಮನಸ್ಸು ಬೇರೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುತ್ತದೆ ಎಂಬುದು ವೈಜ್ಞಾನಿಕವಾಗಿ ಸಾಧಿತವಾಗಿದೆ. ಈ ಪ್ರತಿಭಟನೆಯು ಅನಾರೋಗ್ಯದ ರೂಪದಲ್ಲಿ ಆಗಿರಬಹುದು, ಇಲ್ಲವೇ ಮೈಮೇಲೆ ದೇವರು/ದೈವ ಬರುವ ಮೂಲಕ ಆಗಿರಬಹುದು. ನಿದರ್ಶನಕ್ಕೆ, ಮೂರ್ಛೆರೋಗದಿಂದ ಹೈರಾಣಾಗಿರುವ (ಈ ರೋಗ ಅವಳು ಗಂಡನ ಮನೆಯಲ್ಲಿದ್ದಾಗ ಮತ್ತು ಅವಳು ತವರಿನಿಂದ ಗಂಡನ ಮನೆಗೆ ಹೊರಟಾಗಲೇ ಕಾಡುವಂಥದ್ದು ಎಂಬುದನ್ನು ಗಮನಿಸಬೇಕು) ಸದ್ಯ ತವರಿನಲ್ಲಿರುವ ತಾರೋಳನ್ನು ಹಮೀದಾ ಭೇಟಿಯಾಗುತ್ತಾಳೆ. ತಾರೋಳ ತಾಯಿಯ ಉಪಸ್ಥಿತಿಯಲ್ಲಿ ತಾರೋ ಮತ್ತು ಹಮೀದಾಳ ನಡುವೆ ನಡೆಯುವ ಮಾತುಕತೆ ಹೀಗಿದೆ. ಹಮೀದಾ ಹೇಳುತ್ತಾಳೆ –''ತಾರೋ, ನನ್ನಾಣೆ, ನೀನು ಹೇಳಲೇಬೇಕು, ಈ ಖಾಯಿಲೆ ನಿನ್ನ ಜೀವ ತಿನ್ನಲು ಯಾಕೆ ಬಿಟ್ಟಿದ್ದೀಯಾ ?''

ಅದಕ್ಕೆ ತಾರೋ, ''ನಾ ಸತ್ತರೆ ನಷ್ಟವೇನಿಲ್ಲ, ಭೂಮಿಯ ಭಾರ ಕಳೆಯುತ್ತದಷ್ಟೇ'' ಎನ್ನುತ್ತಾಳೆ.

''ನೀನೇನೂ ಅಷ್ಟು ಭಾರವಿಲ್ಲ, ನೀನು ಹೋಗುವುದರಿಂದ ಅಷ್ಟು ವ್ಯತ್ಯಾಸ ಆಗುವುದಿಲ್ಲ. ಆದರೆ ನಿನ್ನ ತಾಯಿ ನಿನ್ನ ಬೆಳೆಸಿದವಳು, ಅವಳಿಗೆ ಹೇಗನ್ನಿಸಬಹುದೆಂದು ಯೋಚಿಸಿದ್ದೀಯಾ ?'' ಎಂಬ ಹಮೀದಾಳ ಮಾತಿಗೆ,

''ನಾನು ಅವಳ ಕುರಿತು ಯೋಚಿಸಿಲ್ಲ'' ಎಂದು ಒರಟಾಗಿ ಅಂದ ತಾರೋ, ''ಅವಳು ಒಂದೆರಡು ಹನಿ ಕಣ್ಣೀರು ಹಾಕಿ ಮರೆತುಬಿಡುತ್ತಾಳೆ'' ಎಂದು ಹತಾಶಳಾಗಿ ಬಡಬಡಿಸುತ್ತಾಳೆ. ''ಅಪ್ಪ ಅಮ್ಮ ಮಗಳನ್ನು ಮದುವೆ ಮಾಡಿ ಕಳುಹಿಸುವಾಗ **ಅವಳ ಕೊರಳಿಗೆ ಉರುಳೊಂದನ್ನು ಹಾಕಿ ಆ ಹಗ್ಗದ ತುದಿಯನ್ನು ತಮಗಿಷ್ಟ ಬಂದ ವ್ಯಕ್ತಿಗೆ ಕೊಡುತ್ತಾರೆ.**'' (ಒತ್ತು ನನ್ನದು)

''ನಿನ್ನ ಗಂಡನ ಮನೆಯ ಬಾವಿ ನೀರು ನಿನಗೆ ಒಗ್ಗಿಲ್ಲ, ಅದೇ ನಿನ್ನ ಆರೋಗ್ಯ ಹಾಳಾಗಲು ಕಾರಣ ಇರಬಹುದು'' ಎಂದು ಹಮೀದಾ ಹೇಳಿದಾಗ ''**ಹೆಂಗಸು ಎಲ್ಲ ಬಗೆಯ ನೀರಿಗೆ ಹೊಂದಿಕೊಳ್ಳಬೇಕಾಗುತ್ತದೆ**'' (ಒತ್ತು

(೩೮ನೇ ಪುಟಕ್ಕೆ)





# ಹೆಚ್ಚುತ್ತಿರುವ ನಗರೀಕರಣ ಪ್ರಜ್ಞೆಯ ಅಪಾಯಗಳು

ನಗರಗಳು ದಿನೇ ದಿನೇ ಬೆಳೆಯುತ್ತಿವೆ. ಬೆಳೆಯುತ್ತಿರುವ ನಗರಗಳಿಗೆ ಭೂಮಿ ಒದಗಿಸುವುದೇ ಕಷ್ಟವಾಗುತ್ತಿದೆ. ಭೂಮಿಯ ಬೆಲೆ ಬಂಗಾರವಾಗಿದೆ. ಆದರೆ ನಿಜ ಬಂಗಾರವನ್ನು ನಾವು ಕಳೆದುಕೊಳ್ಳುತ್ತಿದ್ದೇವೆ. ಭೂಮಿತಾಯಿ ಒಡಲು ಬತ್ತಿ ಹೋಗುತ್ತಿರುವ ಸಂದರ್ಭದಲ್ಲಿ ಭೂಮಿಯ ಸಂಕಟಗಳು ನೂರೆಂಟು. ನೆಲಗಳ್ಳರ ನಡುವೆ ನಲುಗುತ್ತಿರುವ ಭೂತಾಯಿ ನಗರೀಕರಣದ ಭರಾಟೆಯಲ್ಲಿ ನೆಲ ನಿರ್ನಾಮವಾಗುತ್ತಿದೆ.

ಹೆಚ್ಚುತ್ತಿರುವ ನಗರೀಕರಣದಿಂದಾಗಿ ಭೂಮಿಯ ಬೆಲೆ ಹೆಚ್ಚುತ್ತಿರುವುದು ಒಂದೆಡೆಯಾದರೆ ತಮ್ಮ ನೆಲವನ್ನೇ ಕಳೆದುಕೊಳ್ಳುತ್ತಿರುವ ಸಂಕಟ ರೈತರದ್ದು. ಈ ನಾಡಿನ ರೈತಾಪಿ ವರ್ಗದ ಜನ ತಮ್ಮ ಅನ್ನಕ್ಕಾಗಿ ಯಾವುದೇ ಯೋಚನೆಯಿಲ್ಲದೆ ಜೀವನ ಸಾಗಿಸುತ್ತಿದ್ದರು. ಆದರೆ ನಗರಗಳ ವಿಸ್ತರಣದಿಂದಾಗಿ ಕೃಷಿಯೋಗ್ಯ ಭೂಮಿಗಳೆಲ್ಲವೂ ವಾಸದ ಮನೆಗಳಾಗಿ ಪರಿವರ್ತನೆಗೊಂಡಿವೆ. ಎಲ್ಲಾ ಕಡೆ ಸೈಟುಗಳ ಭರಾಟೆ ಹೆಚ್ಚಿದೆ. ಕೇವಲ ವಾಸಕ್ಕೋಸ್ಕರ ಉದ್ದೇಶವನ್ನು ಇಟ್ಟುಕೊಂಡು ನಿರ್ಮಾಣವಾಗುತ್ತಿರುವ ಸೈಟು, ಲೇಔಟುಗಳು ಅಲ್ಲಿನ ನೆಲವನ್ನು ಬಂಜರುಮಾಡಿ ಬದುಕಿನ ಸ್ಥಿತಿಯನ್ನು ದುಸ್ತರಗೊಳಿಸುತ್ತಿವೆ.

ಈ ನಗರೀಕರಣ ಪ್ರಜ್ಞೆಯಿಂದಾಗಿ ಇಂದು ಬದುಕಿನ ಗದ್ದಲ ಹೆಚ್ಚುತ್ತಿದೆ. ''ಸಂತೆಯೊಳಗೊಂದು ಮನೆಯಮಾಡಿ ಶಬ್ದಕ್ಕೆ ಅಂಜಿದೊಡೆ ಎಂತಯ್ಯ'' ಎಂಬುದು ಹಿರಿಕರ ಮಾತು. ಆದರೆ ಈ ಸಂತೆಯ ಶಬ್ದ ಕಿವಿಯ ತಮಟೆಗಳನ್ನು ಮೀರಿಸುವ ಮಟ್ಟಿಗೆ ಬೆಳೆಯುತ್ತಿದೆ. ಗದ್ದಲದೊಳಗಿದ್ದು ಮೂಕರಾಗುವ ನಮ್ಮ ಸ್ಥಿತಿ ದಯನೀಯವಾದುದು. ಮರೆಯಾಗುತ್ತಿರುವ ಪಕ್ಷಿಸಂಕುಲ, ಪ್ರಾಣಿಸಂಕುಲಗಳ ನಡುವೆ ವನಸಂಪತ್ತು ನಾಶ ವಾಗುತ್ತಿದೆ. ಛಿದ್ರೀಕರಣಗೊಳ್ಳುತ್ತಿರುವ ವ್ಯವಸ್ಥೆಗಳ ನಡುವೆ ವಿನಾಶದ ಅಂಚಿನಲ್ಲಿರುವ ಗ್ರಾಮ್ಯಸಂಸ್ಕೃತಿ ಮರೆಯಾಗಿ ನಿಧಾನವಾಗಿ ಧಾವಂತದ, ನಿರ್ಲಜ್ಜೆಯ, ಅವಸರ-ಗಡಿಬಿಡಿಯ ನವನಾಗರಿಕತೆಯನ್ನು ಹುಟ್ಟುಹಾಕುತ್ತಿದ್ದೇವೆ. ಜನರ ಮನಸ್ಸುಗಳಲ್ಲಿ ಕೂಡಿ ಬೆಸೆಯುವ ಬದಲು ಭಿನ್ನತೆ ಹುಟ್ಟುತ್ತಿದೆ.

ನಾವು ಅಪಾರವಾಗಿ ಪ್ರೀತಿಸುವ ಪ್ರಾಣಿಗಳು, ಪಕ್ಷಿಗಳು, ಕಣ್ಣಮುಂದೆಯೇ ನಿರ್ನಾಮವಾಗುತ್ತಿದ್ದು ನಗರಗಳ ಝೂಗಳಲ್ಲಿ ಅವುಗಳನ್ನು ನೋಡುವ ಪರಿಸ್ಥಿತಿ ಎದುರಾಗುತ್ತಿದೆ. ಗ್ರಾಮ್ಯ ಪರಿಸರದ ಕೈದೋಟಗಳು, ತೆಂಗಿನ ತೋಟಗಳು, ಗದ್ದೆ, ಹೊಲಗಳು ನಿರ್ನಾಮಗೊಂಡು ವಿಷವರ್ತುಲದ ಜಗತ್ತು ನಿರ್ಮಾಣವಾಗುತ್ತಿದೆ. ಜನರ ಹಸಿವು ನೀಗುವುದು ಅನ್ನ-ಆಹಾರದಿಂದಲೇ ಹೊರತು ಕಬ್ಬಿಣ, ಮರಳು, ಸಿಮೆಂಟನಿಂದಲ್ಲ. ಆದರೂ ಸಿಮೆಂಟು ಸಂಸ್ಕೃತಿಯೇ ಮೈದಾಳುತ್ತಿರುವ ಇಂದಿನ ಜಗತ್ತಿನ ಕ್ರಿಯೆ ವಿಸ್ಮಯಕಾರಿಯಾದುದು ಹಾಗೂ ವಿನಾಶಕಾರಿಯಾದುದು.

ಪರಂಪರೆಯ ನಾಗರಿಕತೆಗಳು ನಾಶವಾದಂತೆ ನಗರಗಳ ಸ್ಥಿತಿ ಅವನತಿಯ ಹಂತ ತಲುಪಬಹುದೆಂಬ ಅಪಾಯದ ಪ್ರಜ್ಞೆ ನಮ್ಮಲ್ಲೆಲ್ಲಾ ಇರಬೇಕಾದುದು ಜರೂರಾಗಿದೆ. ಹಾಗಂತ ಪ್ರಗತಿಯ ವಿರುದ್ಧವಾಗಿ ದನಿ ಎತ್ತಿದ್ದೇನೆ ಎಂದಲ್ಲ. ಆದರೆ ಜೆಲ್ಲಿ-ಸಿಮೆಂಟುಗಳ ಪ್ರಗತಿಯೇ ಪ್ರಗತಿ ಅಲ್ಲ. ಪ್ರಗತಿಯ ದಿಕ್ಕನ್ನು ನಾವು ಬದಲಿಸಬೇಕಿದೆ. ಪ್ರಗತಿಯನ್ನು ಹೊಸ ದೃಷ್ಟಿಕೋನದಿಂದ ನೋಡಬೇಕಿದೆ. ಪ್ರಗತಿಯ ಹೆಸರಿನಲ್ಲಿ ಪರಿಸರವನ್ನು ನಾಶಮಾಡುವುದು, ಜೀವಸಂಕುಲಗಳಿಗೆ ಆಪತ್ತು ತರುವುದು ಎಂದೂ ತರವಲ್ಲ. ಜೀವಜಗತ್ತು ಉಳಿದಾಗ ಮಾತ್ರ ಜೀವನಕ್ರಿಯೆ ಮುಂದೆ ಮುಂದೆ ಸಾಗಲು ಸಾಧ್ಯ. ಕಾಲಚಕ್ರ ಉರುಳಿದಂತೆ, ಬದಲಾಗಬಹುದಾದ ಸನ್ನಿವೇಶಗಳನ್ನು ಅರಿತು ನಾವು ಎಚ್ಚರಿಕೆಯ ಹೆಜ್ಜೆಯನ್ನು ಇಡಬೇಕಿದೆ. ನಮ್ಮ ಅರಿವಿನ ಪ್ರಜ್ಞೆಯಲ್ಲಿ ವಿಸ್ತಾರವಾಗಿ ಕುಳಿತಿರುವ ನಾಗರಿಕ ಜಗತ್ತು ವಿಸ್ತರಣೆಯ ಹೆಸರಿನಲ್ಲಿ ನಗರಗಳನ್ನು ಬೆಳೆಸುವುದು ನಿಲ್ಲಿಸಬೇಕು. ನಗರಗಳು ಬೆಳೆದಂತೆ ಸಮಸ್ಯೆಗಳು ಹೆಚ್ಚುತ್ತಿರುವುದು ನಮಗೆಲ್ಲಾ ತಿಳಿದೇ ಇದೆ.

ನೀರು, ನೆಲ ವಿಷಪೂರಿತವಾದಂತೆ ಗಾಳಿಯು ಮಲಿನಗೊಳ್ಳುತ್ತಿರುವುದು ಗೊತ್ತಿರುವ ಸಂಗತಿಯಾಗಿದೆ. ನಗರಗಳ ಬೆಳವಣಿಗೆಯಿಂದಾಗಿ ಮತ್ತಷ್ಟು ಕೊಳೆಗೇರಿಗಳು, ಮತ್ತಷ್ಟು ರೋಗರುಜಿನ, ಟ್ರಾಫಿಕ್ ಜಾಮ್, ಮತ್ತಷ್ಟು ನೀರು, ಅನ್ನ-ಆಹಾರಕ್ಕಾಗಿ ಹಾಹಾಕಾರ, ಬೆಳೆಯುವ ಭೂಮಿ ಕಳೆದುಕೊಂಡು ವ್ಯವಸಾಯ ವಂಚಿತನಾದ್ದರಿಂದ.

ಗುಂಡೀಗೆರೆ ವಿಶ್ವನಾಥ

**ಈಗಾಗಲೇ ವಿಜ್ಞಾನಿಗಳು ವರದಿ ಮಾಡಿರುವಂತೆ ನಗರೀಕರಣ ಪ್ರಕ್ರಿಯೆಯಿಂದಾಗಿ ವಾತಾವರಣದ ಉಷ್ಣತೆ ಹೆಚ್ಚಳ, ಓಝೋನ್ ಪದರ ನಾಶ, ಧ್ರುವ ಪ್ರದೇಶಗಳ ಕರಗುವಿಕೆಯಿಂದಾಗಿ ಭವಿಷ್ಯ ವಿಪತ್ತಿನಲ್ಲಿದೆ. ಈ ವಿಪತ್ತಿನ ಅರಿವು ಎಲ್ಲಾ ನಗರವಾಸಿಗಳಿಗೆ, ಎಲ್ಲಾ ವಿದ್ಯಾವಂತರಿಗೆ, ಪ್ರಗತಿಯನ್ನು ಬಯಸುವವರಲ್ಲಿ ಇರಬೇಕಾದುದು ಅತ್ಯಗತ್ಯ. ಇಲ್ಲವಾದರೆ ನಮ್ಮ ಪ್ರಾಚೀನ ನಾಗರಿಕತೆಗಳು ನಾಶವಾದಂತೆ ಈಗಿನ ನಾಗರಿಕತೆಗಳು ಒಂದಲ್ಲ ಒಂದು ದಿನ ವಿನಾಶದ ಅಂಚಿಗೆ ತಲುಪಬಹುದು ಎಂಬ ಎಚ್ಚರ ಎಲ್ಲರಿಗೂ ಇರಬೇಕು.**

ಗಗನಕ್ಕೇರುವ ಬೆಲೆಗಳು, ಗಗನಚುಂಬಿ ಕಟ್ಟಡಗಳು ಅಪಾಯವನ್ನು ಹೊತ್ತು ತರುವುದಲ್ಲದೆ ಬದುಕನ್ನು ಮತ್ತಷ್ಟು ದುಸ್ತರಗೊಳಿಸುತ್ತವೆ.

ವರ್ಷವಿಡೀ ನೆಲದಲ್ಲಿ ದುಡಿದು, ಹಸನಾದ ಫಲ ತೆಗೆದು ಅದರ ಫಲ ಉಣ್ಣಲು ಭೂಮಿಯೇ ಸಿಗದಿರುವುದು, ಕೇವಲ ಕಾರ್ಖಾನೆಗಳಿಂದ ಮತ್ತಷ್ಟು ವಿಷಯುಕ್ತ ಅನಿಲಗಳು, ವಿಷಯುಕ್ತ ಜಲ, ನಮ್ಮ ನದಿಗಳನ್ನು ಕಲುಷಿತಗೊಳಿಸುತ್ತಿವೆ. ಕಾಡುಗಳ ನಾಶದಿಂದ ವಾತಾವರಣದ ಉಷ್ಣತೆ ಮತ್ತಷ್ಟು ಹೆಚ್ಚಿ ಧ್ರುವಪ್ರದೇಶಗಳು ಕರಗಿ ನೀರಾಗಬಹುದು. ಸಮುದ್ರದ ಮಟ್ಟ ಏರಿ ಮತ್ತಷ್ಟು ಸುನಾಮಿಗಳು ಕಡಲತೀರಗಳಿಗೆ ಅಪ್ಪಳಿಸಬಹುದು. ಜನಜೀವನದ ಮೇಲೆ ಪರಿಸರ ಮಾಲಿನ್ಯ ಹಲವು ಅಪಾಯಗಳನ್ನು ತಂದೊಡ್ಡಿ ರೋಗ ರುಜಿನಗಳನ್ನು ಹೆಚ್ಚಿಸಬಹುದು.

ನಾವು ಮಾನವ ಪ್ರಯತ್ನಗಳನ್ನು ನಂಬಬೇಕೆ ಹೊರತು ಯಂತ್ರ ನಾಗರಿಕತೆಯನ್ನಲ್ಲ. ಯಂತ್ರಗಳು ಯಾವತ್ತಾದರೂ ಕೈಕೊಡಬಹುದು. ಅವು ತಂದುಹಾಕುತ್ತಿರುವ ಆತಂಕ, ವಿಷ, ಹೊಗೆ, ಧಾವಂತದ ಬದುಕು ಕೇವಲ ಯಂತ್ರಗಳನ್ನು ಅವಲಂಬಿಸಿದ ಉತ್ಪಾದನೆಯನ್ನೇ ಪ್ರಗತಿಯ ಓರೆನೋಟವಾಗಿ ಇಟ್ಟುಕೊಂಡು ಬದುಕು ಸಾಗಿಸುವುದು ತೀರ ದುರಂತಮಯ ಸಂಗತಿ. ಈ ಸಂಗತಿಗಳ ಅರಿವಿಲ್ಲದೆ ಮಾನವ ಸಂಪನ್ಮೂಲವನ್ನು ನಾವು ಕಡೆಗಣಿಸಿದ್ದೇವೆ. ಮಾನವ ಸಂಸ್ಕೃತಿಯಿಲ್ಲದೆ ಜಗತ್ತು ನಿಲ್ಲಲಾರದು. ಬೆಳೆಯುತ್ತಿರುವ ಮನುಕುಲಕ್ಕೆ ವ್ಯವಸ್ಥಿತ ಉದ್ಯೋಗವನ್ನು ಒದಗಿಸುವುದು ನೆಮ್ಮದಿಯ ದಾರಿ. ಹಾಗೆಂದು ಕಾರ್ಖಾನೆಗಳನ್ನು ತೆರೆದು ಯಂತ್ರಗಳಲ್ಲಿ ಮತ್ತಷ್ಟು ದುಡಿಯಲು ತೊಡಗಿಸುವುದೆಂದಲ್ಲ. ಯಂತ್ರಗಳಿಗಿಂತ ಮನುಷ್ಯಶಕ್ತಿಯ ಆಧಾರದ ಮೇಲೆ ರಾಷ್ಟ್ರನಿರ್ಮಾಣಕ್ಕೆ ಮುಂದಾಗಬೇಕು. ಮನುಷ್ಯಶಕ್ತಿಯನ್ನು, ಮಾನವ ಸಂಪನ್ಮೂಲವನ್ನು, ನಗರ ಕೇಂದ್ರಿತ ವ್ಯವಸ್ಥೆಗಳಿಗೆ ಗುರಿಮಾಡದೆ ಮೂಲಕಸುಬು, ಗುಡಿಕೈಗಾರಿಕೆ, ವ್ಯವಸಾಯ ಆಧಾರಿತ ನಮ್ಮ ಗ್ರಾಮ್ಯ ರಾಷ್ಟ್ರಕಲ್ಪನೆಗಳಿಗೆ ಒತ್ತು ನೀಡಬೇಕು. ಕೇವಲ ನಗರಗಳ ಉದ್ಧಾರದಿಂದಾಗಿ, ಮಹಾನಗರಗಳನ್ನು ನಿರ್ಮಿಸುವುದರಲ್ಲಿ ಸುಖವಿಲ್ಲ. ಇದರ ಬದಲಿಗೆ ಗಾಂಧೀಜಿಯವರ ಕನಸಿನಂತೆ ಪ್ರತಿಹಳ್ಳಿಯೂ ಉದ್ಧಾರವಾಗಬೇಕು. ಹಳ್ಳಿಗಳು ಉದ್ಧಾರವಾದಂತೆ ನಗರಗಳಿಗೆ ಜನ ವಲಸೆ ಬರುವುದು ತಪ್ಪುತ್ತದೆ. ತಮ್ಮ ಹಳ್ಳಿಗಳಲ್ಲಿ ಯೋಗ್ಯ ಉದ್ಯೋಗ ದೊರಕಿ ತಮ್ಮ ಹಸನು ಬಾಳನ್ನು ಕಂಡುಕೊಳ್ಳಬಹುದು.

ಈಗ ಇರುವ ನಮ್ಮ ನಗರಗಳ ಯೋಜನೆ ವ್ಯವಸ್ಥಿತವಾಗಿಲ್ಲ. ಪೂರ್ವ ನಿರ್ಧಾರಿತವಾಗಿಲ್ಲ. ಬದಲಿಗೆ ದಿಢೀರ್ ಪ್ರಗತಿಯ ನೆಲದಲ್ಲಿ ಅಸ್ತವ್ಯಸ್ತಗೊಂಡಂಥವು. ಅವ್ಯವಸ್ಥೆಗಳ ನಡುವೆ ಕಂದರಗಳನ್ನು ನಿರ್ಮಿಸಿಕೊಂಡಂಥವು. ಇವೆಲ್ಲ ತಾತ್ಕಾಲಿಕವಷ್ಟೆ. ಇವುಗಳಲ್ಲಿ ದೂರದೃಷ್ಟಿ, ವೈಶಾಲ್ಯ ಜೀವನದ ಕಲ್ಪನೆಗಳಿಲ್ಲ. ಇಕ್ಕಟ್ಟಾದ ಕ್ಲಿಷ್ಟ ಪರಿಸ್ಥಿತಿಗಳನ್ನು ತಂದುಕೊಂಡು ವಾಸ್ತವತೆಯ ಗೊಂದಲದೊಳಗೆ ಬದುಕುವಂತಹ ಪರಿಸ್ಥಿತಿಯನ್ನು ತಂದುಹಾಕಿಕೊಂಡಿರುವಂತಹವು. ಈ ನಗರೀಕರಣ ಪ್ರಕ್ರಿಯೆಯ ಮತ್ತೊಂದಷ್ಟು ಅಸಮಾನತೆಯನ್ನು, ಬದುಕಿನ ಕುಬ್ಜತೆಯನ್ನು, ನಮ್ಮ ಬದುಕಿನ ಕಲ್ಪನೆಗಳ ವಿಸ್ತಾರವನ್ನು ಕುಗ್ಗಿಸಿರುವಂಥದ್ದು.

ಈಗಾಗಲೇ ವಿಜ್ಞಾನಿಗಳು ವರದಿ ಮಾಡಿರುವಂತೆ ನಗರೀಕರಣ ಪ್ರಕ್ರಿಯೆಯಿಂದಾಗಿ ವಾತಾವರಣದ ಉಷ್ಣತೆ ಹೆಚ್ಚಳ, ಓಝೋನ್ ಪದರ ನಾಶ, ಧ್ರುವ ಪ್ರದೇಶಗಳ ಕರಗುವಿಕೆಯಿಂದಾಗಿ ಭವಿಷ್ಯ ವಿಪತ್ತಿನಲ್ಲಿದೆ. ಈ ವಿಪತ್ತಿನ ಅರಿವು ಎಲ್ಲಾ ನಗರವಾಸಿಗಳಿಗೆ, ಎಲ್ಲಾ ವಿದ್ಯಾವಂತರಿಗೆ, ಪ್ರಗತಿಯನ್ನು ಬಯಸುವವರಲ್ಲಿ ಇರಬೇಕಾದುದು ಅತ್ಯಗತ್ಯ. ಇಲ್ಲವಾದರೆ ನಮ್ಮ ಪ್ರಾಚೀನ ನಾಗರಿಕತೆಗಳು ನಾಶವಾದಂತೆ ಈಗಿನ ನಾಗರಿಕತೆಗಳು ಒಂದಲ್ಲ ಒಂದು ದಿನ ವಿನಾಶದ ಅಂಚಿಗೆ ತಲುಪಬಹುದು ಎಂಬ ಎಚ್ಚರ ಎಲ್ಲರಿಗೂ ಇರಬೇಕು.

**ಗುಂಡೀಗೆರೆ ವಿಶ್ವನಾಥ**
ಶಿಕ್ಷಕರು, ಸರಕಾರಿ ಹಿರಿಯ ಪ್ರಾಥಮಿಕ ಶಾಲೆ
ನಾಗೇಗೌಡನಪಾಳ್ಯ, ಕೆಂಗೇರಿ ವೃತ್ತ
ಬೆಂಗಳೂರು ದಕ್ಷಿಣ ವಲಯ - ೧

---

*ಅಮೃತಾ ಪ್ರೀತಂ...(೪೬ನೇ ಪುಟದಿಂದ)*

ನನ್ನದು) ಎಂದು ತಾರೋ ಉತ್ಕಂಠಿತಳಾಗಿ ಹೇಳುತ್ತಾಳೆ.

''ತಾರೋ, ನಾನು ನಿನ್ನ ಸ್ನೇಹಿತೆಯಲ್ಲ, ನನಗೇಕೆ ನೀನು ಹೇಳಲ್ಲ?''

''ನಾನು ಏನು ಹೇಳಲಿ ನಿನಗೆ? ಹುಡುಗಿ ಮದುವೆಯಾದ ಮೇಲೆ ದೇವರು ಅವಳ ನಾಲಗೆಯನ್ನು ಕಿತ್ತುಕೊಂಡುಬಿಡುತ್ತಾನೆ. ಹಾಗಾಗಿ ಅವಳು ದೂರು ಹೇಳುವಂತಿಲ್ಲ''...

ತಾರೋಳ ಪರಿಸ್ಥಿತಿಯ ಬಗ್ಗೆ ತನ್ನಲ್ಲಿ ವಿಚಾರಿಸಿದಾಗ ತಾರೋಳ ತಾಯಿ ಹೇಳುವ ಮಾತು –

''ನಾವು ಮಗಳನ್ನು ಕೊಟ್ಟ ಮೇಲೆ ನಮ್ಮ ಜವಾಬ್ದಾರಿ ಮುಗಿಯಿತು. ನಾವು ಮಾತಾಡುವಂತಿಲ್ಲ. ಅವಳ ಗಂಡ ಅವನಿಗೆ ಬೇಕಾದಂತೆ ಮಾಡ್ತಾನೆ. ಅದು ಗಂಡಸಿನ ಹಕ್ಕು'' ಎಂದು ತಾರೋಳ ತಾಯಿ ವಿವರಿಸುತ್ತಾಳೆ.

ಮುಂದೆ ತಾರೋ ಹೇಳುತ್ತಾಳೆ –

**''ನನ್ನ ಬಾಯಿ ಮಾತ್ರ ಹೊಲಿಯಲ್ಪಟ್ಟಿದೆ. ನನ್ನ ಕಾಲುಗಳಿಗೆ ಮಾತ್ರ ಸಂಕೋಲೆ ತೊಡಿಸಿದ್ದಾರೆ... ದೇವರ ಸಂಕೋಲೆ ನನ್ನ ಕಾಲಿಗೆ ಮಾತ್ರ ಇರುವುದು.''** (ಪಿಂಜರ್; ೩೫-೩೬)

ಸಂಪ್ರದಾಯದ ಕಪಿಮುಷ್ಟಿಯಲ್ಲಿ ಬಂಧಿತರಾದ ಪೂರೋಳ ತಾಯಿ, ತಾರೋಳ ತಾಯಿಯಂಥವರು ತಮ್ಮ ಮಕ್ಕಳ ದುಃಸ್ಥಿತಿಯನ್ನು ಕನಿಷ್ಠ ಪಕ್ಷ ಕೇಳುವ ಪ್ರಯತ್ನವನ್ನೂ ಮಾಡುವುದಿಲ್ಲ. ಇದು ದುರಂತದ ವಿಚಾರ ಮತ್ತು ಇಂತಹ ಸಂದರ್ಭಗಳೇ ಹೆಣ್ಣುಮಕ್ಕಳನ್ನು ಸಾಯಿಸುತ್ತವೆ, ಹೆಣ್ಣು ಶಿಶುವಿನ ಹತ್ಯೆಗೆ ಕಾರಣವಾಗಿವೆ, ಹೆಣ್ಣನ್ನು ನಿಕೃಷ್ಟ ಸ್ಥಿತಿಗೆ ನೂಕಿವೆ.

ರಶೀದನ ಜೊತೆಗಿನ ಬದುಕಿನಲ್ಲಿ ರಾಜಿಯಾಗುತ್ತ ಅದನ್ನು ಸಹ್ಯವಾಗಿಸುತ್ತ ಸಾಗುವ ಹಮೀದಾ ತನ್ನ ಸೋಲಿನಲ್ಲೂ ಗೆಲುವನ್ನು ಕಾಣುತ್ತ ಹೋಗುತ್ತಾಳೆ. ಹಾಗಾಗಿ ರಶೀದನನ್ನು ಅಪಚಾರಕ್ಕಿಳಿಸಿದ ಕೌಟುಂಬಿಕವೂ, ಮತೀಯವೂ ಆದ ನೆಪವು ಲಾಜೋಳ ಸಂದರ್ಭದಲ್ಲಾಗಲೀ, ಹಿಂದೂ ಹುಡುಗಿಯನ್ನು ರಕ್ಷಿಸುವ ಸಂದರ್ಭದಲ್ಲಾಗಲೀ, ಹುಚ್ಚಿಯ ಧರ್ಮ ತಿಳಿದ ಬಳಿಕ ಮಗುವಿನ ಕುರಿತು ನಡೆದುಕೊಳ್ಳುವ ರೀತಿಯಲ್ಲಾಗಲೀ ಅವನಿಗೆ ಗೌಣವಾಗಿಬಿಡುತ್ತದೆ. ಇದಕ್ಕೆ ಕಾರಣ ಅವನನ್ನು ಕಾಡುವ ಪೂರೋಳ ಅಪಹರಣ ಪ್ರಕರಣ. ಆ ಮಟ್ಟಿಗೆ ಹಮೀದಾ ಅದೃಷ್ಟವಂತೆ. ಪೂರೋ ರಶೀದನ ಕುದುರೆಯ ಮೇಲೆ ಬಲಾತ್ಕಾರದಿಂದ ಏರಿ ಹೋಗಬೇಕಾದಾಗ ಪರಿತಪಿಸುವ ಸಂದರ್ಭ ಮತ್ತು ಅದನ್ನೇರಿ ಹೋಗುವುದಕ್ಕಾಗಿಯೇ ಪರಿತಪಿಸುವ ಲಾಜೋಳ ಸಂದರ್ಭಗಳು ವಿಭಿನ್ನ ನೆಲೆಗಳಲ್ಲಿ ನಿಲ್ಲುತ್ತವೆ. ಸರಳ ಹೃದಯಿಯಾದ ಕಾರಣಕ್ಕೆ ರಶೀದ ತಾನಾಗಿಯೇ ಬದಲಾಗುತ್ತಾನೆ. ಒಂದರ್ಥದಲ್ಲಿ ಸೋಲುತ್ತಲೇ ಪೂರೋಳನ್ನು ಗೆಲ್ಲುತ್ತಾನೆ. ಹಾಗಿದ್ದರೂ, ಹೆಣ್ಣು ಅನುಸರಿಸುತ್ತಲೇ ಹೋಗುವ, ಹೋಗಬೇಕಾದ ಅನಿವಾರ್ಯ ಹೊಂದಾಣಿಕೆಗಳು ಕಾದಂಬರಿಯ ಓದಿನುದ್ದಕ್ಕೂ ನಮ್ಮನ್ನು ಕಾಡುತ್ತವೆ. ಭಾವುಕತೆಯ ಉತ್ತುಂಗದಲ್ಲಿ ಪೂರೋ ತನ್ನ ತವರಿನ ಕುಟುಂಬವನ್ನು ಸೇರಿಕೊಳ್ಳಲು ತನಗೆ ದೊರೆತ ಕೊನೆಯ ಅವಕಾಶವನ್ನು ಬಳಸಿಕೊಳ್ಳಬೇಕೆನ್ನಿಸಿದರೂ ವಾಸ್ತವ ನೆಲೆಯಲ್ಲಿ ಅವಳು ತನ್ನ ಗಂಡ, ಮಕ್ಕಳ ಸುತ್ತ ಕಟ್ಟಿಕೊಂಡ ವಾತ್ಸಲ್ಯದ ಬಂಧದ ಜೊತೆಗೇ ತನ್ನೊಳಗೇ ತಣಿಯದ ಬೇಗುದಿಯನ್ನು ಅಡಗಿಸಿಕೊಂಡಿರುವ ಹೊರನೋಟದ ನಿರ್ಲಿಪ್ತತೆ ಅವಳನ್ನು ಹಾಗೆ ಮಾಡದಂತೆ ತಡೆಯುವುದು ಸಹಜವೂ ಆಗಿದೆ. ಭಾರತ-ಪಾಕಿಸ್ತಾನ-ಅಫಘಾನಿಸ್ತಾನಗಳೆಂಬ, ಹಿಂದೂ-ಮುಸ್ಲಿಂ ಎಂಬ, ಬಡವ-ಬಲ್ಲಿದ ಎಂಬ ಎಲ್ಲ ಗಡಿರೇಖೆಗಳನ್ನು ಮೀರಿದ ಮಾನವತಾವಾದದ ಸಂದೇಶವು ಕಾದಂಬರಿಯದಾಗಿದೆ. ಅಂತೆಯೇ ಮುಂದಿನ ಬದಲಾದ ಸಾಮಾಜಿಕ ಸಂದರ್ಭಕ್ಕೆ ಸಾಕ್ಷಿಗಳಾಗಿ ಈ ಕಾದಂಬರಿಯ ರಾಮಚಂದ್, ಪೂರೋಳ ತಮ್ಮ ಇಂಥವರು ಭವಿಷ್ಯದ ಕಿರಣಗಳಾಗಿ ಕಂಡುಬರುತ್ತಾರೆ. ಆದುದರಿಂದಲೇ ಹೆಣ್ಣಿಗೆ ಗಂಡ, ಮಕ್ಕಳು ಅಂತಿಮ ಎಂಬಂತೆ ರಶೀದನಲ್ಲಿಗೆ ಮರಳುವ ಹಮೀದಾಳ ಮೂಲಕ ಒಂದೇ ಬಾರಿಗೆ ಸಂಪ್ರದಾಯದ ಸಂಪೂರ್ಣ ಬದಲಾವಣೆ ಸಾಧ್ಯವೂ ಇಲ್ಲ, ಸಾಧುವೂ ಅಲ್ಲ ಎಂಬ ನಿಲುವನ್ನು ಕಾದಂಬರಿ ಪ್ರಕಟಿಸುತ್ತದೆ.

**ಡಾ|| ಶೈಲಾ ಯು.**
ಪ್ರಾಜೆಕ್ಟ್ ಅಸೋಸಿಯೇಟ್
ಯು.ಜಿ.ಸಿ. ಪ್ರಧಾನ ಸಂಶೋಧನಾ ಯೋಜನೆ,
ಕನ್ನಡ ಅಧ್ಯಯನ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ
ಮಂಗಳಗಂಗೋತ್ರಿ - ೫೭೪೧೯೯




● ಕೆ. ಶ್ರೀಧರ್ ಭಟ್

# ಉಡುಪಿ ಜಿಲ್ಲೆಯ ಕೆಲವು ಅಲಕ್ಷಿತ ಐತಿಹಾಸಿಕ ವಿಚಾರಗಳು

**ಈ** ಕ್ಷಣದ ಹಿಂದಿನದೆಲ್ಲವೂ ಇತಿಹಾಸವೇ. ಅವೆಲ್ಲವನ್ನು ದಾಖಲಿಸಲು ಸಾಧ್ಯವೇ ? ಅಗತ್ಯವೇ ? ಇಲ್ಲಿ ಆಯ್ಕೆಯ ಪ್ರಶ್ನೆ ಬರುತ್ತದೆ. ಆಯ್ಕೆ ಆಗದಿರುವುದೆಲ್ಲವನ್ನೂ ಅಲಕ್ಷಿತವೆಂದು ಪರಿಗಣಿಸಬಹುದೆ ?

ಇತಿಹಾಸಕಾರರು ಜ್ಞಾನ ಪ್ರಪಂಚದ ಪೂರ್ಣಪ್ರಜ್ಞ ರಾಗಿರಲು ಸಾಧ್ಯವಿಲ್ಲ. ಇವರ ಕ್ಷೇತ್ರ ಕಾರ್ಯಕ್ಕೂ ಮಿತಿ ಇದೆ. ಇವರ ಗ್ರಹಿಕಾ ಸಾಮರ್ಥ್ಯವನ್ನು ಮೀರಿಯೂ ಅಗತ್ಯದ ಐತಿಹಾಸಿಕ ವಿಚಾರಗಳು ಇವರ ಬರವಣಿಗೆಯ ಪರಿಧಿಯ ಹೊರಗುಳಿಯಬಹುದು. ಆಯಾಕಾಲದ ಬೌದ್ಧಿಕ ಪ್ರಪಂಚದ ಒತ್ತಡ ಇವರ ದೃಷ್ಟಿಕೋನದ ಮೇಲೆ ಪ್ರಭಾವ ಬೀರಬಹುದು. ಬೌದ್ಧಿಕ ಪ್ರಪಂಚದ ಸಂಗ್ರಹಿತ ಜ್ಞಾನಕ್ಕೂ ಮಿತಿ ಇದೆ.

ತನ್ನ ಕಕ್ಷಿದಾರನ ಪರ ವಾದಿಸಲು ವಿಷಯ ಸಂಗ್ರಹಿಸುವ ವಕೀಲನಂತೆ ಇತಿಹಾಸಕಾರನಿರಬಾರದು. ದ್ವೇಷ-ಪಕ್ಷಪಾತ ದಿಂದ ಕೂಡಿದ ಅಲಕ್ಷ್ಯವು ಅಪಾಯಕಾರಿ. ಸಭ್ಯ-ಸೌಹಾರ್ದಯುತ ಸಮಾಜದ ಗುರಿ ಇರಿಸಿಕೊಂಡು ಇತಿಹಾಸದ ವಿಶ್ಲೇಷಣೆ ಸಾಗಬೇಕು. ಮುಂದಿನ ಸಂಶೋಧಕರನ್ನು ಗಮನದಲ್ಲಿಟ್ಟುಕೊಂಡು ಕೆಲವು ವಿಚಾರಗಳನ್ನು ತಿಳಿಸಲಿಚ್ಛಿಸುತ್ತೇನೆ.

### 'ತುಳುನಾಡ'ನ್ನು ಜಿಲ್ಲೆಯಾಗಿ ಅಲಕ್ಷಿಸಲಾಗಿದೆ

ಕರ್ನಾಟಕವು ಸಾಂಸ್ಕೃತಿಕವಾಗಿ ಭಾರತದ ಅಂಗ. ಅದೇ ರೀತಿಯಾಗಿ ಕರ್ನಾಟಕದೊಳಗೆ ತುಳುನಾಡು, ಕಾಸರಗೋಡು ಸಹಿತ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯನ್ನು ಬಿಟ್ಟು ಕೇವಲ ಉಡುಪಿ ಜಿಲ್ಲೆಯ ಇತಿಹಾಸವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಪಂಚ ದ್ರಾವಿಡ ಭಾಷೆಗಳಲ್ಲಿ ತುಳುವೇ ಅತ್ಯಂತ ಪ್ರಾಚೀನ ಭಾಷೆ ಎಂಬುದರ ಬಗ್ಗೆ ಕೆಲವು ವಿದ್ವಾಂಸರಿಗೆ ಅನುಮಾನವಿದೆ. ಕನ್ನಡಿಗರಿಗೆ ಪ್ರೀತಿ-ವಿಶ್ವಾಸದಲ್ಲಿ ತುಳುವರು ಸ್ವಾಭಿಮಾನದಿಂದಿದ್ದಾರೆ. ಅದೇ ರೀತಿ ತುಳುನಾಡಿನಲ್ಲಿ ಕುಂದಕನ್ನಡಿಗರ ಸಹಿತ, ನಾವೆಲ್ಲ ತುಳುವೇತರರಿದ್ದೇವೆ.

ಐತಿಹಾಸಿಕವಾಗಿ ನಾವು, ಎಂದರೆ ಉಡುಪಿ ಜಿಲ್ಲೆಯವರು, ಕರ್ನಾಟಕದ ಯಾವುದೇ ಗಡಿ ಜಿಲ್ಲೆಗಳಿಗಿಂತ ಹೆಚ್ಚು ದೇಶ-ವಿದೇಶಗಳ ಸಾಂಸ್ಕೃತಿಕ ಸಂಬಂಧ ಹೊಂದಿದ್ದೇವೆ. ಆದುದರಿಂದಾಗಿಯೇ ವಿವಿಧ ಭಾಷೆಗಳ ನಾವು ಭಾಷಾಂಧತೆಯನ್ನು ಬೆಂಬಲಿಸುವುದಿಲ್ಲ. ಹಾಲು-ಸಕ್ಕರೆ-ಪಾಯಸದಂತಹ ಸಂಸ್ಕೃತಿ ರಚಿಸಿಕೊಳ್ಳುವುದರಲ್ಲಿ ನಾವು ಸಫಲರಾಗಿದ್ದೇವೆ. ಇತ್ತೀಚೆಗೆ ನಡೆಯುತ್ತಿರುವ ಕೋಮು ಗಲಭೆಗಳ ಕಳಂಕಗಳನ್ನು ಬಿಟ್ಟಲ್ಲಿ ಸೌಹಾರ್ದ-ಸಮಾಜಕ್ಕೆ ಹುಳಿ ಹಿಂಡುವ ಯಾವುದೇ ಚಳವಳಿಗಳನ್ನು ನಡೆಸದ ದೇಶಪ್ರೇಮಿಗಳು ನಾವು. ಇಂತಹ ಒಂದು ಸಾಂಸ್ಕೃತಿಕ ಪರಂಪರೆಯನ್ನು ಇಡೀ ದೇಶ ಗಮನಿಸಲಿ.

### ಪ್ರಾಗಿತಿಹಾಸದ ಸಂಶೋಧನೆಗಳಲ್ಲಿರುವ ಅವಕಾಶಗಳು

ಡಾ|| ಪಿ. ಗುರುರಾಜ ಭಟ್ಟರು ತುಳುನಾಡಿನ ಇತಿಹಾಸವನ್ನು ಬೃಹತ್ ಶಿಲಾಯುಗದ ತನಕ ಕೊಂಡೊಯ್ದಿದ್ದರು. ಇತ್ತೀಚೆಗೆ ನಾನೂ ಸೇರಿದಂತೆ ಡಾ|| ಬಿ. ವಸಂತ ಶೆಟ್ಟಿ, ಡಾ|| ಶಿವತಾರಕ್, ಡಾ|| ಪಿ. ಎನ್. ನರಸಿಂಹಮೂರ್ತಿ, ಶ್ರೀ ರಾಘವೇಂದ್ರ ಶೆಣೈ ಹಾಗೂ ಪ್ರೊ|| ಟಿ. ಮುರುಗೇಶ್ ಅವರು ಹಲವಾರು ನವಶಿಲಾ ಯುಗದ ಸಾಧನಗಳನ್ನು ಪತ್ತೆಹಚ್ಚುವಲ್ಲಿ ಸಫಲರಾಗಿದ್ದೇವೆ. ಡಾ|| ಪುಂಡಿಕ್ಕಾಯವರು ಹೇಳುವಂತೆ ಈ ಬಿಡಿ ಬಿಡಿ ಸಾಧನಗಳು ಹೆಚ್ಚಿನದೇನನ್ನೂ ತಿಳಿಸುವುದಿಲ್ಲ. ಇನ್ನೂ ಈ ಕ್ಷೇತ್ರದಲ್ಲಿ ವ್ಯಾಪಕ ಸಂಶೋಧನೆಗಳಾಗಬೇಕಾಗಿದೆ.

ದುರಂತವೆಂದರೆ ವ್ಯಾಪಕವಾಗಿ ನಡೆಯುತ್ತಿರುವ ಪ್ರಕೃತಿ ನಾಶ, ಬೆಳೆಯುತ್ತಿರುವ ಕೈಗಾರಿಕೀಕರಣ ಮತ್ತು ಮನೆ ನಿವೇಶನಗಳಿಂದಾಗಿ ಈಗಾಗಲೇ ಪತ್ತೆ ಹಚ್ಚಲಾಗಿರುವ ಬೃಹತ್ ಶಿಲಾಯುಗದ ಗೋರಿಗಳು ನಿಶ್ಶಬ್ದವಾಗಿ ಮುಚ್ಚಿಹಾಕಲ್ಪಡುತ್ತಿವೆ. ನಾವು ಕ್ಷೇತ್ರಕಾರ್ಯಕ್ಕೆ ಹೋದಾಗ ಇತರ ಸಾಮಗ್ರಿಗಳು ದೊರಕಿಲ್ಲ. ನಮಗೆ ಮಾಹಿತಿ ದೊರಕುವ ಮೊದಲೇ ಸ್ಥಳೀಯರು ಕೈವಾಡ ನಡೆಸುತ್ತಿದ್ದಾರೆಯೆಂಬ ಸಂಶಯ ನಮ್ಮದು. ಈ ಕ್ಷೇತ್ರದಲ್ಲಿ ವಿಶೇಷ ಅಧ್ಯಯನ ನಡೆಸಬಯಸುತ್ತಿರುವ ಪ್ರೊ|| ಟಿ. ಮುರುಗೇಶರಿಗೆ ಇದು ದೊಡ್ಡ ತೊಡಕಾಗಿದೆ.

ಕುದುರೆಮುಖ-ಸುಬ್ರಹ್ಮಣ್ಯದ ಪರಿಸರದಿಂದ ಕೊಲ್ಲೂರು - ಕೊಡಚಾದ್ರಿಯ ಸದಾ ಹಸಿರಾಗಿರುವ ಕಾಡೊಳಗಿರಬಹುದಾದ ಗುಹೆಗಳ ಬಗ್ಗೆ ಮಾಹಿತಿಗಳನ್ನು ಸಂಗ್ರಹಿಸಲಾಗಿಲ್ಲ. ಬಲ್ಲಾಡಿ-ಬೆಂಡು ಗುಡ್ಡೆಯ ಮೇಲಿನ ಗುಹೆ, ಕಾರ್ಕಳದ ಪರ್ಪಲೆ, ಮಣಿಪಾಲದ ಬಳಿ ಮೂರು ಮುರಕಲ್ಲಿನ ಗುಹೆಗಳಲ್ಲಿ ಸಣ್ಣಮಟ್ಟದ ಉತ್ಖನನ ನಡೆಸಿದರೆ ಇಲ್ಲಿನ ಶಿಲಾಯುಗದ ಜನರ ಜೀವನದ ಬಗ್ಗೆ ಹೊಸ ಬೆಳಕು ಕಾಣಲು ಸಾಧ್ಯ.

ಗಾವಳಿ ಮತ್ತು ಬಸರೂರಿನಲ್ಲಿರುವ ಬೃಹತ್ ಶಿಲಾಯುಗದ ಗೀರು ಚಿತ್ರಗಳಂತೆ ಬೇರೆ ಕಡೆಗಳಲ್ಲಿರಬಹುದಾದ ಚಿತ್ರಗಳಿಗಾಗಿ ಹುಡುಕಾಟ ಸಾಗಬೇಕಾಗಿದೆ. ಬಸರೂರಿನ ಗೀರುಚಿತ್ರಗಳು ತೀರಾ ಅಸುರಕ್ಷಿತವಾಗಿವೆ. ಅದರ ಮೇಲೆ ಪಡ್ಡೆ ಹುಡುಗರು ಇಂಗ್ಲಿಷ್ ಅಕ್ಷರಗಳನ್ನು ಮೂಡಿಸಿದ್ದರಾದರೂ, ಅದು ಆಗ ಕೆಲವು ಪ್ರಾಚೀನ ಬ್ರಾಹ್ಮೀ ಲಿಪಿಯಾಗಿರಬಹುದೆಂದು ಪ್ರೊ|| ಟಿ. ಮುರುಗೇಶರು ಸಂದೇಹಪಡುತ್ತಾರೆ.

ಶಿವಪುರದ ಬಳಿಯ ಕಜನೆಯಲ್ಲಿ ಬಂಡೆಗಳ ಮೇಲಿದ್ದ ಗೀರುಚಿತ್ರಗಳು ಜಲ್ಲಿ ತಯಾರಿಸುವ ಕ್ರಷರ್ ಉದ್ಯಮದಿಂದ ನಾಶವಾಗಿದೆ ಎಂದು ಸ್ಥಳೀಯರು ನೆನಪಿಸುತ್ತಿದ್ದಾರೆ. ಆದರೂ ಬಳಿಯಲ್ಲಿ ಒಂದು 'ಯೋನಿಯ' ತರಹದ ಆಕೃತಿಯೊಂದು ನಮಗೆ ದೊರಕಿದೆ. ಇತಿಹಾಸ ಮತ್ತು ಪ್ರಾಗಿತಿಹಾಸ ಕಾಲದ ಸಂಶೋಧನೆಗೆ ಭೂಗರ್ಭ ಶಾಸ್ತ್ರಜ್ಞರು, ಸಸ್ಯ ಶಾಸ್ತ್ರಜ್ಞರು, ಜೀವಶಾಸ್ತ್ರಜ್ಞರು, ಸ್ಥಳನಾಮ ಸಂಶೋಧಕರುಗಳ ಸಂಪರ್ಕ ಮತ್ತು ಸಂಘಟಿತ ಕ್ಷೇತ್ರ ಕಾರ್ಯದಿಂದ ಹೆಚ್ಚು

ಕರಾರುವಾಕ್ಕಾದ ಮಾಹಿತಿಗಳನ್ನು ಪಡೆಯಬೇಕಾಗಿದೆ.

ನಮ್ಮ ಕರಾವಳಿಯಲ್ಲಿ ಆಗಿದ್ದ ಭೂಚಲನೆಗಳು, ಪ್ರಾಕೃತಿಕ ವಿಕೋಪಗಳು, ಬದಲಾವಣೆಗಳು, ನದಿಗಳು ಪ್ರವಹಿಸಿದ ಮತ್ತು ಬದಲಿಸಿದ ದಿಕ್ಕುಗಳು ಮತ್ತು ಕಾಲಗಳ ಮಾಹಿತಿಗಳು ದೊರಕಿದಲ್ಲಿ ಅಂದಿನ ಕಾಲದ ಜನರು ಅನುಭವಿಸಿದ ಸಂಕಷ್ಟಗಳು ಮತ್ತು ಕಂಡುಕೊಂಡ ಪರಿಹಾರಗಳನ್ನು ಊಹಿಸಲು ಸಾಧ್ಯ.

**ಅಧ್ಯಯನಕ್ಕೆ ಕಾದು ಕುಳಿತಿರುವ ಕ್ಷೇತ್ರಗಳು**

ದಕ್ಷಿಣ ಭಾರತದಲ್ಲಿ ಗ್ರೀಕ್ ಮತ್ತು ರೋಮನ್ ನಾಣ್ಯಗಳು ಸಿಕ್ಕಿವೆ. ಕೇರಳ ಕರಾವಳಿಯಲ್ಲಿನ ಇತ್ತೀಚೆಗಿನ ಉತ್ಖನನ ನಮ್ಮ ಕರಾವಳಿಯು ಅರಬೀ ಸಮುದ್ರದಾಚೆಯ ಸಂಪರ್ಕ ಸಾಧಿಸಿದ್ದನ್ನು ಖಚಿತಪಡಿಸುತ್ತವೆ. ಕ್ರಿ.ಪೂ. ದಿಂದಲೂ ನಮ್ಮ ವಾಯುಗುಣದಲ್ಲಿ ಬೆಳೆಯುತ್ತಿದ್ದ ಬೆಳೆಗಳ್ಯಾವುವು ? ಕಾಲಕ್ರಮೇಣ ಪ್ರವೇಶಿಸಿದ ಬೆಳೆಗಳ್ಯಾವುವು ? ಕೃಷಿ ಮತ್ತು ಕುಶಲ ಕೆಲಸಗಾರರ ಸಾಧನಗಳು ಮತ್ತು ತಂತ್ರಜ್ಞಾನದಲ್ಲಿ ಆದ ವಿಕಾಸಗಳು ನಮಗೆ ತಿಳಿದಿಲ್ಲ. ಅಂದಿನ ರಫ್ತು-ಆಮದುಗಳ ಬಗೆಗೂ ಹೆಚ್ಚಿಗೆ ಮಾಹಿತಿ ಇಲ್ಲ. ಆಫ್ರಿಕಾ, ಅರೇಬಿಯದ ಕರಾವಳಿಗಳಲ್ಲಿ ಇತ್ತೀಚೆಗಿನ ಇತಿಹಾಸ ಸಂಶೋಧನೆಯ ಬಗೆಗೂ ನಮಗೆ ತಿಳಿದಿಲ್ಲ. ಅವುಗಳ ಕಡೆಗೆ ಸಂಶೋಧಕರು ಗಮನ ಹರಿಸಬೇಕಾಗಿದೆ.

ಕೆಲವು ಪಾಡ್ದನಗಳಲ್ಲಿ ಹಿಂದೆ ಹಡಗುಗಳು ಮುಳುಗಿದ ಸೂಚನೆಗಳು ಸಿಗುತ್ತವೆ ಎಂದು ವಿದ್ವಾಂಸರು ತಿಳಿಸುತ್ತಾರೆ. ಕ್ರಿ.ಶ. ೨ನೇ ಶತಮಾನದ ಟಾಲಮಿಯ ಬರಹಗಳಲ್ಲೂ ಇಂತಹ ಸೂಚನೆಗಳಿವೆ. ಆದುದರಿಂದ ಸಾಗರ ಸಂಶೋಧನೆಯಲ್ಲಿ ಮುಳುಗಿದ ಹಡಗುಗಳನ್ನು ಪತ್ತೆ ಹಚ್ಚಿದರೆ ವಿಪುಲವಾದ ವಿಚಾರಗಳು ದೊರಕಬಹುದು.

**ಸ್ಥಳನಾಮ ಸಂಶೋಧನೆಯಲ್ಲಿ ಸೂಚನೆಗಳು**

ಶಾಸನಗಳಿಗಿಂತ ಹೆಚ್ಚು ನಂಬಿಕಾರ್ಹವಾದ ಸೂಚನೆಗಳನ್ನು ನೀಡಬಹುದಾದ 'ಸ್ಥಳನಾಮ ಸಂಶೋಧನೆ'ಯನ್ನು ಇತಿಹಾಸದ ಪುನರ್‌ರಚನೆಗೆ ಬಳಸಿಕೊಳ್ಳಬಹುದು. ಜಾತಿ ಬುಡಕಟ್ಟು ಜನಾಂಗಗಳಿಗಿರುವ ವಿವಿಧ ಹೆಸರುಗಳು, ನಾಮ-ಉಪನಾಮಗಳು, ಇವುಗಳ ನಡುವಿರುವ ಸಂಬಂಧಗಳನ್ನು ಸ್ಥಾಪಿಸಲು ಸಾಧ್ಯವಾದರೆ, ಜನಾಂಗಗಳ ವಲಸೆ ಮತ್ತು ಜೀವನ ವೃತ್ತಿಗಳು ಜನಾಂಗಗಳ ಮಿಶ್ರಣ ಮತ್ತು ವಿಭಜನೆ ಮೇಲೆ ಹೊಸ ಬೆಳಕನ್ನು ಬೀರಬಹುದು.

ಪ್ರಕೃತಿಯನ್ನೇ ಅವಲಂಬಿಸಿದ್ದ ಶಿಲಾಯುಗದ ಮಾನವನು ತಾನು ಓಡಾಡಿಕೊಂಡಿದ್ದ ಪ್ರದೇಶದಾದ್ಯಂತ ತನಗೆ ಆಹಾರ ಮತ್ತು ಸುರಕ್ಷತೆ ನೀಡುವ ವಿವಿಧ ರೀತಿಯ ಪರಿಚಿತವಾದ ಭೂಸ್ವರೂಪಗಳಿಗೆ ಹೆಸರುಗಳನ್ನು ನೀಡಲು ಅಂದೇ ಪ್ರಾರಂಭಿಸಿದ್ದನು. ಇತಿಹಾಸ ಕಾಲದಲ್ಲೂ ಜೀವನ ಕ್ರಮಗಳು ಬದಲಾವಣೆ ಹೊಂದಿ ಹೊಸ ಸ್ಥಳನಾಮಗಳು ಬಂದಿದ್ದರೆ, ಹಳೆಯ ಹೆಸರು ಒಂದಲ್ಲ ಒಂದು ರೂಪದಲ್ಲಿ ಉಳಿದಿರುವುದು ಸಾಧ್ಯ. ಇದರಿಂದ ಮಾನವ ಜೀವನದ ವಿಕಾಸವನ್ನು ಕಾಣಬಹುದು.

ಸ್ಥಳನಾಮ ಸಂಶೋಧನೆಯಲ್ಲಿ ವ್ಯಾಪಕ ಕ್ಷೇತ್ರ ಕಾರ್ಯ ನಡೆಸಿದ ಡಾ॥ ಅರ್ಕೆ ಮಣಿಪಾಲರ ಕೃತಿಗಳನ್ನು ಇತಿಹಾಸ ಸಂಶೋಧಕರು ಉಪಯೋಗಿಸಿಕೊಂಡಂತಿಲ್ಲ. ಡಾ॥ ಅರ್ಕೆಯವರು ಕೂಡ ಪ್ರಾಗಿತಿಹಾಸ ಕಾಲ ಮತ್ತು ಇತಿಹಾಸದ ಘಟನೆಗಳಿಗೆ ಹೆಚ್ಚು ಗಮನ ಕೊಟ್ಟಿಲ್ಲದಿರುವುದರಿಂದ ಅವರ ನಿಷ್ಪತ್ತಿಯಲ್ಲಿ ಕೆಲವು ಕೊರತೆಗಳು ಕಂಡುಬರಬಹುದು.

ಉದಾಹರಣೆಗೆ, ಬಣ್ಣಂಪಳ್ಳಿ>ಬೊಣ್ಣೆಪಳ್ಳಿ ಆಗಿದ್ದಿರಲೂ ಬಹುದು. ನೆರೆಯ ಪ್ರದೇಶವಾದ ಜೋಗಿಬೆಟ್ಟಿನಲ್ಲಿ ಬೂದಿಯಿಂದ ಕೂಡಿದ ವಿಶಾಲವಾದ ಸ್ಥಳವೊಂದು ನನಗೆ ಕಂಡುಬಂದಿದೆ. ಈ ಬೂದಿಯನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಿದರೆ ಅದು ನವ ಶಿಲಾಯುಗದ ಬೂದಿಗುಡ್ಡವಾಗಿದ್ದಿತೇ ಇಲ್ಲವೇ ಎಂದು ಖಚಿತಪಡಿಸಬಹುದು. ಇದೇ ಜೋಗಿಬೆಟ್ಟಿಲ್ಲಿ ನನಗೆ ೩ ನವಶಿಲಾಯುಗದ ಕೊಡಲಿಗಳು ಸಿಕ್ಕಿವೆ. ಇದು ನವಶಿಲಾಯುಗದ ಜನರ ನಿವಾಸದ ಖಚಿತತೆಗೆ ತುಂಬಾ ಸಹಾಯಕವಾಗಬಲ್ಲದು.

ಕಲ್‌ಇಲ್, ಮಂಚತ್ತಕಲ್, ಕಲ್‌ಮಂಚ(ಜ), ಬೆ(ಬೊ)ಣ್ಣೆಕುದ್ರು, ಅರೆಕಲ್ ಇತ್ಯಾದಿ ಕೆಲವು ಉದಾಹರಣೆಗಳು. ಕಮ್ಮರ್ ಸಾಲೆ > ಕಮಲಶಿಲೆಯಾದಂತೆ, ಕಬ್ಬಿಣ ಯುಗದ ಕರ್ಬ(ನ್)ತುಳು ಸಾಲೆ ಕಬ್ಬಿನಾಲೆಯಾಗಿರಬಹುದಲ್ಲ? "ಕುದುರೆಮುಖ" ಇಲ್ಲಿಗೆ ಅಂದಿನ ಮಾನವನಿಗೆ ಬಹಳ ದೂರವೇನೂ ಆಗಿರಲಿಲ್ಲ. ಮಣೋಳಿ ಗುಜ್ಜೆ, ಮುಂಚಿದಪಾಡಿಗಳು, ತರಕಾರಿಬೆಳೆ, ವ್ಯಾಪಾರ ಮತ್ತು ಆಹಾರ ಕ್ರಮದ ಬಗ್ಗೆ ಸೂಚನೆ ತಿಳಿಸಬಹುದು.




ದೂರವಾಣಿ ಪುಸ್ತಕವನ್ನು ಸ್ಥಳನಾಮ ಸಂಶೋಧಕರು ಅತ್ಯುತ್ತಮ ಸಿದ್ಧ ಆಕರವಾಗಿ ಉಪಯೋಗಿಸಬಹುದು. ಜಲಮಾರ್ಗವೇ ಅತೀ ಅನುಕೂಲ ವ್ಯಾಪಾರಿ ಮಾರ್ಗವಾಗಿದ್ದುದರಿಂದ ನದಿಗಳ ಇಕ್ಕೆಲಗಳಲ್ಲಿ ಅಂದಿನ ಅಜ್ಞಾತ (ಇಂದಿಗೆ) ಹಳ್ಳಿ-ನಗರಗಳ ಬಂದರುಗಳನ್ನು ಗುರುತಿಸಲು ಪ್ರಯತ್ನಿಸಬಹುದು. ಅದೇ ರೀತಿ ನದಿಗಳ ಹೆಸರುಗಳಿಂದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗುರುತಿಸಬಹುದು.

**ಜನಾಂಗಗಳ ಮಿಶ್ರಣಗಳು**

ಇತ್ತೀಚಿನವರೆಗೆ ಗ್ರೀಕ್ ಪ್ರಹಸನದಲ್ಲಿನ 'ಅಸ್ಪಷ್ಟ ಮಾತುಗಳು', ಟಾಲಮಿಯ ಬರಹಗಳಲ್ಲಿನ 'ಓಲಖ್ಯೋರಾ'ದ ಉಲ್ಲೇಖ, ಅಶೋಕನ ಶಾಸನದಲ್ಲಿನ 'ಸತೀಯಪುತ್ರ' ಇವೆಲ್ಲವೂ ತುಳುನಾಡಿನ ಇತಿಹಾಸಕ್ಕೆ ಸಂಬಂಧಿಸಿದ ಉಲ್ಲೇಖಗಳೆಂದು ತಿಳಿಯಲಾಗಿತ್ತು. ಈಗ ವಿದ್ವಾಂಸರು ಅವುಗಳನ್ನು ತರ್ಕಬದ್ಧವಾಗಿ ಅಲ್ಲಗಳೆದಿದ್ದಾರೆ. ಸಂಗಂ ಸಾಹಿತ್ಯದಲ್ಲಿ ಉಲ್ಲೇಖವಾಗಿರುವ 'ಕೋಶರ್' ಜನಾಂಗದ ದಾಳಿಯಿಂದ 'ತುಳುನಾಟ್'ನ ಪರಿಚಯವಾಗುತ್ತದೆ. ಅಂದಿನ ಆದಿಯೇ ತುಳುವರ ದೇವರ ಕಲ್ಪನೆ, ಆಚಾರ ವಿಚಾರಗಳು ಜೀವನ ಕ್ರಮ ಹೇಗಿದ್ದವು ? 'ಕೋಶರ್' ಇಂದಿನ ಕೂಸರೆಯೇ ?

ಒಂದು ಪ್ರದೇಶದ ಆರ್ಥಿಕಾಭಿವೃದ್ಧಿಗೆ ವಿವಿಧ ಕೌಶಲ್ಯಗಳ ಜನಾಂಗಗಳು ವಲಸೆ ಬರುವುದು ಸ್ವಾಗತಾರ್ಹವೆ. ಆಶ್ರಯ ಮತ್ತು ಉದ್ಯೋಗಾರ್ಥವಾಗಿ ಬರುವವರನ್ನು ರಾಜರುಗಳು ಆಹ್ವಾನಿಸಿ ಆಶ್ರಯ ನೀಡುತ್ತಿದ್ದರು. ನಮ್ಮ ತುಳುನಾಡಿಗೆ ಯಾವ ಯಾವ ಜನಾಂಗಗಳು ಏಕೆ ಬಂದರು ? ಹೇಗೆ ಬಂದರು ? ಹೇಗೆ ಸ್ಥಳೀಯರೊಂದಿಗೆ ಮಿಶ್ರಗೊಂಡರು ? ಮಿಶ್ರಗೊಂಡ ನಂತರ ಸೃಷ್ಟಿಯಾದ ದೇವರು-ಧರ್ಮ-ಸಂಸ್ಕೃತಿಗಳ ಲಕ್ಷಣಗಳೇನಾಗಿತ್ತು? ಇಂತಹ ವಿಚಾರಗಳ ಕಡೆಗೂ ನಮ್ಮ ಸಂಶೋಧನೆಗಳು ಹರಿಯಬೇಕು.

ತುಳುನಾಡಿನೊಳಗೆ ಬಂದ ವೀರಶೈವವನ್ನುಳಿದ ಬೌದ್ಧ, ಜೈನ, ಶೈವ, ವೈಷ್ಣವ, ನಾಥ ಮತ್ತು ಕಾಳಾಮುಖ ಎಲ್ಲ ಪಂಥಗಳೂ ಉತ್ತರ ಭಾರತದಿಂದ ಬಂದವು. ಜಾತ್ಯತೀತತೆ ಮತ್ತು ಸೌಹಾರ್ದತೆ ನಮ್ಮ ಇಂದಿನ ಆಶಯಗಳು. ಆದರೆ ಇವು ಇತಿಹಾಸದಲ್ಲಿ "ಪೂರ್ಣ ಪ್ರಮಾಣದಲ್ಲಿತ್ತು" ಎಂದು ಹೇಳುವುದು ನಮ್ಮ ಆತ್ಮವಂಚನೆಯಾಗುವುದು. ರಾಜವಂಶಗಳ ಸ್ಥಾಪನೆ ಮತ್ತು ಅವನತಿಗೂ ಈ ಜಾತಿ-ಮತ ಪಂಥೀಯರ ನಡುವೆ ಇದ್ದ ರಾಜಕೀಯ ಪೈಪೋಟಿಗಳಿಗೂ ಸಂಬಂಧವಿದೆ. ಇಂತಹವುಗಳ ಬಗ್ಗೆ ಸಂಶೋಧನೆ ಮಾಡುವವರು ಯಾವೊಂದು ದ್ವೇಷ - ಪ್ರತೀಕಾರ ಭಾವವಿಲ್ಲದವರಾಗಿರಬೇಕು, ದೇಶಪ್ರೇಮಿಗಳಾಗಿರಬೇಕು.

ಮೂಲತಃ ವ್ಯಾಪಾರಿಗಳ ಧರ್ಮವಾಗಿದ್ದ ಜೈನ ಧರ್ಮ ಇಲ್ಲಿ ಕೃಷಿಕರನ್ನು ಆಕರ್ಷಿಸಿದ್ದು ಹೇಗೆ ? ಬೌದ್ಧ ಧರ್ಮ ಎಷ್ಟರಮಟ್ಟಿಗೆ ಅಸ್ತಿತ್ವದಲ್ಲಿತ್ತು? ಅದರ ಅವಶೇಷಗಳಾವುವೂ ಉಳಿಯದಂತೆ ನಿರ್ಮಾಣವಾದ ಪರಿಸ್ಥಿತಿಗಳೇನು ?

ವೈದಿಕ ಧರ್ಮಗಳು ಆಗಮಿಸಿದ ನಂತರ ಸೃಷ್ಟಿಯಾದ ಪುಣ್ಯಕ್ಷೇತ್ರಗಳಲ್ಲಿ ಬ್ರಾಹ್ಮಣರನ್ನು ಕರೆತಂದು, ಅವರು ತಮ್ಮ ಮುಂದಿನ ತಲೆಮಾರಿನವರನ್ನು ಸೃಷ್ಟಿಸಲು ಇಲ್ಲಿಯ ಸ್ತ್ರೀಯರನ್ನು ವಿವಾಹವಾದ ಸಂಗತಿಗಳನ್ನು ಸ್ಥಳ ಪುರಾಣಗಳು ಪರೋಕ್ಷವಾಗಿ ತಿಳಿಸುತ್ತವೆ. ವಾಮನಾವತಾರದ ಕತೆ ಮತ್ತು ಪರಶುರಾಮನ ಕತೆ ವೈದಿಕ ಧರ್ಮದ ಆಗಮನದ ಸಂಕೇತಗಳೆ ?

ಹೊಯಿಸಳ ಮತ್ತು ವಿಜಯನಗರದ ಅಧೀನವಾದ ತುಳುನಾಡಿನಲ್ಲಿ ಸ್ಥಾಪಿಸಲ್ಪಟ್ಟ ಕಾರ್ಕಳದ ಬೈರರಸರಾಗಲೀ ಹೊಸಂಗಡಿಯ ಹೊನ್ನೇಯ ಕಂಬಳಿಯವರಾಗಲೀ ಇತರ ಪಾಳೇಗಾರ ಕುಟುಂಬಗಳಾಗಲೀ ಮೂಲತಃ ತುಳುನಾಡಿನ ಹೊರಗಿನಿಂದ ಬಂದವರಾಗಿದ್ದರು. ಇಲ್ಲಿಯೇ ರಾಜ್ಯಭಾರ ಮಾಡುತ್ತ ಸ್ಥಳೀಯರೊಂದಿಗೆ ಏರ್ಪಟ್ಟ ಸಂಪರ್ಕದಿಂದ ನಂತರದ ಸಂತತಿಯವರು ತುಳುವರಾಗಿ ಪರಿವರ್ತಿತರಾದರು. ಇದೇ ರೀತಿ ಆಳೂಪರೂ ಕೂಡ ಸ್ಥಳೀಯ ರಾಜಮನೆತನದವರಲ್ಲ ಎಂಬ ಅನುಮಾನ ನನ್ನದು.

ಜನಾಂಗೀಯ ಉದಾಹರಣೆ ಎಂದರೆ : ಮೂಲತಃ ತಮಿಳರಾಗಿದ್ದ 'ಚೆಟ್ಟಿಯಾರರು' ತುಳುವರಾಗಿ 'ಸೆಟ್ಟಿಗಾರ' ರೆನಿಸಿಕೊಂಡರೆಂದು ಡಾ॥ ಯು. ಸೂರ್ಯನಾಥ ಕಾಮತ್ ತಿಳಿಸುತ್ತಾರೆ. ಪ್ರಾಯಶಃ ಮರಾಠರ ಸೈನ್ಯದೊಂದಿಗೆ ಆಗಮಿಸಿ, ಇಲ್ಲಿ ನೆಲೆನಿಂತ ಮರಾಠಿಯವರು ಬಹುತೇಕ ತುಳು ಮಾತೃಭಾಷೆಯವರಾಗಿ ಪರಿವರ್ತಿತರಾಗಿದ್ದಾರೆ. ವಿವಿಧ ವೃತ್ತಿಯ ತುಳುವರು ಮೂಲತಃ ತುಳುವರಾಗಿದ್ದರೆ ?

ಮೂಲತಃ ತೌಳವ ಸಂಸ್ಕೃತಿ ಜಾತಿ ವ್ಯವಸ್ಥೆಯದಾಗಿರಲಿಲ್ಲ; ಬುಡಕಟ್ಟಿನದಾಗಿತ್ತು. ವೈದಿಕಧರ್ಮದಿಂದಲೇ ಜಾತಿ ಸೃಷ್ಟಿಯಾಯಿತು ಎನ್ನಲು ಸಾಧ್ಯವಿಲ್ಲ. ಜಮೀನುದಾರಿ ಜನಾಂಗದವರಾಗಿರುವ ಜೈನರೂ ಕೂಡ ಜಾತಿವ್ಯವಸ್ಥೆಯನ್ನು ಪ್ರತಿಪಾದಿಸುತ್ತಾರೆ. ವಿವಿಧ ವೃತ್ತಿಗಳ ಜಾತಿ ಸೃಷ್ಟಿ ಮತ್ತು ಆರ್ಥಿಕ ಅಭಿವೃದ್ಧಿಯ ಹಂತಗಳಲ್ಲಿನ ಸಮಸ್ಯೆಗಳ ಬಗ್ಗೆ ಅಧ್ಯಯನ ನಡೆಸಬೇಕಾಗಿದೆ.

ಬಾರಕೂರು, ಬಸರೂರುಗಳು ಒಮ್ಮೆ ತುಳುನಾಡಿನ ರಾಜಧಾನಿಗಳಾಗಿದ್ದು ಗೋಕರ್ಣದವರೆಗೂ ತುಳುಭಾಷೆ ಪ್ರಚಲಿತದಲ್ಲಿತ್ತು. ಕುಂದಕನ್ನಡಿಗರ ಸಾಮಾಜಿಕ, ಸಾಂಸ್ಕೃತಿಕ ಲಕ್ಷಣಗಳು ತುಳು ಮಾತೃಭಾಷಿಕರೊಂದಿಗೆ ಹೆಚ್ಚು ಹೊಂದಿ ಕೊಳ್ಳುತ್ತವೆ. ಆದುದರಿಂದ ಕುಂದಕನ್ನಡಿಗರು ತುಳು ಮಾತೃಭಾಷಿಕರಾಗಿದ್ದರೆ ? ಕುಂದಕನ್ನಡಿಗರ ಈ ಸುಂದರ ಭಾಷೆ ಯಾವ ಕಾಲದಲ್ಲಿ, ಎಂತಹ ಪರಿಸ್ಥಿತಿಯಲ್ಲಿ ನಿರ್ಮಾಣವಾಯಿತು ? ಕಲ್ಯಾಣಪುರದ ಹೊಳೆ ಈ ಭಾಷೆಗಳ ನಡುವೆ ಏಕೆ ಗಡಿಯಾಗಿ ಪರಿಣಮಿಸಿತು ?

'ಭೂತಾಳ ಪಾಂಡ್ಯನ ಕತೆ' ಏನೇ ಹೇಳಲಿ, ಅಳಿಯಕಟ್ಟು ರಾಜಕೀಯ ಒತ್ತಡಗಳಿಂದಾದುದೆ? ಈ ಪ್ರಶ್ನೆಗಳ ಕಡೆಗೆ ನಾವು ಗಮನ ಹರಿಸಿಲ್ಲ.

**ಸ್ಥಳ ಪುರಾಣಗಳು, ಪಾಡ್ದನಗಳು ಮತ್ತು ದಂತ ಕತೆಗಳು**

ಇವುಗಳು ನೇರವಾಗಿ ಇತಿಹಾಸವಲ್ಲ. ಐತಿಹಾಸಿಕ ಅವಿಸ್ಮರಣೀಯ ಘಟನೆಗಳ ರೂಪಾಂತರಗಳು. ಅಂದಿನ ಮೇಲ್ವರ್ಗದ ಜನಸಮುದಾಯದ ಭಾವನೆಗಳನ್ನು ಸ್ಥಳ ಪುರಾಣಗಳಲ್ಲೂ, ಅಂದು ಅವಗಣನೆಗೆ ತುತ್ತಾದ ಜನಾಂಗಗಳ ಪ್ರತಿಕ್ರಿಯೆಗಳನ್ನು ಪಾಡ್ದನಗಳಲ್ಲೂ ಕಾಣ ಬಹುದು. ದೇವಾಲಯಗಳೊಳಗೆ ಮತ್ತು ದೈವಾಲಯಗಳು ವ್ಯಾಪಾರಿ ಸ್ಪರ್ಧೆಗಿಳಿದಾಗ ಜೀರ್ಣೋದ್ಧಾರಕ್ಕೆ ಆಹ್ವಾನಿತ ಅಷ್ಟಮಂಗಲ ಪ್ರಶ್ನೆಗಳು ನಕಲಿ ಇತಿಹಾಸವನ್ನು ಸೃಷ್ಟಿಸಿವೆ. ಇವು ಸಂಶೋಧಕರಿಗೆ ಹಾದಿ ತಪ್ಪಿಸುವ ಸಾಧ್ಯತೆಗಳಿವೆ.

ಪಾಳೇಗಾರಿ ಯುಗದಲ್ಲಿ ದೈವಸ್ಥಾನಗಳ ಮೇಲೆ ದೇವಸ್ಥಾನಗಳು ಮೇಲಧಿಕಾರ ಹೊಂದಿದ್ದಂತೆ ಭಾಸ ವಾಗುತ್ತದೆ. ಕ್ರಮೇಣ ದೇವಸ್ಥಾನಗಳಾಗಿ ಪರಿವರ್ತನೆ ಆಗಿದ್ದಲ್ಲಿ ಆಶ್ಚರ್ಯವಿಲ್ಲ. ಕೆಲವು ಕಡೆಗಳಲ್ಲಿ ದೇವಾಲಯ ಗಳ ಹೆಸರು ಮತ್ತು ಗರ್ಭಗುಡಿಯೊಳಗಿನ ಮೂರ್ತಿಗಳಿಗೆ ಪರಸ್ಪರ ಸಂಬಂಧವಿಲ್ಲ ಎಂದೆನಿಸಿದರೂ ಸ್ಥಳ ಪುರಾಣಕತೆಯ ಕವಚ ಮತ್ತು ಅಲಂಕಾರಗಳಿಂದ ಅವು ಬೆಳಕು ಕಾಣುತ್ತಿಲ್ಲ. ಕೆಲವು ಪ್ರಸಿದ್ಧ ಕ್ಷೇತ್ರಗಳ ಮೂರ್ತಿಗಳ ಸತ್ಯ ತಿಳಿದುಬಂದಲ್ಲಿ ಭಾವುಕ ಜನರ ಭಾವನೆಗಳಿಗೆ ಧಕ್ಕೆ ಬಂದೀತೆಂದು ಇತಿಹಾಸಕಾರರು ಅಲಕ್ಷ್ಯ ತಾಳಿದ್ದಾರೆ.

ಅಂಬಲ್ಪಾಡಿಯ ದೇವಾಲಯದಿಂದ ಪ್ರಕಾಶಿಸಲ್ಪಟ್ಟ 'ದ.ಕ. ದೇವಾಲಯಗಳು' ಒಂದು ಶ್ಲಾಘನೀಯ ಕಾರ್ಯ. ಅದೇ ರೀತಿ ಬಿಡಿ ಶಿಲ್ಪಗಳ ಬಗ್ಗೆ ಪುಸ್ತಕಗಳು ಪ್ರಕಟಗೊಂಡಲ್ಲಿ ಇನ್ನೂ ಹೊಸ ಹೊಸ ಮಾಹಿತಿಗಳನ್ನು ಬೆಳಕಿಗೆ ತರಬಹುದಾಗಿದೆ.

**ಶಾಸನಗಳ ಸಂಶೋಧನೆಯಲ್ಲಿ**

ಯೂರೋಪು ಮತ್ತು ನಮ್ಮ ನಾಡಿನ ಸಂಶೋಧಕರು ಈಗಾಗಲೇ ದಾಖಲಿಸಿದ ಎಲ್ಲ ಶಾಸನಗಳನ್ನು ಮರು ಪತ್ತೆ ಹಚ್ಚಿ, ನವ ತಂತ್ರಜ್ಞಾನದ ಸಹಾಯದಿಂದ ದಾಖಲೀಕರಣ ಗೊಳಿಸಲು ತೊಡಗಬೇಕು. ಈ ಕ್ಷೇತ್ರ ಕಾರ್ಯದಲ್ಲಿ ಇದುವರೆಗೂ ಪತ್ತೆಹಚ್ಚಲಾಗದಿದ್ದ ಶಾಸನಗಳು ದೊರಕು ವವು. ಉದಾಹರಣೆಗೆ, ಪೆರ್ಡೂರಿನ ೬ ಶಾಸನಗಳು, ಗರಡಿಮಜಲಿನ ಬಳಿ ಕೊಜಕುಳಿ, ಬಲ್ಲಾಡಿ ಬಳಿ ಬೆಂಡುಗುಡ್ಡೆಯ ಮೇಲೆ ತಲಾ ಒಂದೊಂದು ಶಾಸನಗಳು ಶಾಸನ ತಜ್ಞರ ಭೇಟಿಯ ನಿರೀಕ್ಷೆಯಲ್ಲಿ ಕಾತರಿಸುತ್ತಿವೆ.

**ಹಾಡಿಗಳಲ್ಲಿ ದೇವಾಲಯಗಳ ಅವಶೇಷಗಳು ಮತ್ತಿತರ ಕುರುಹುಗಳು**

ಮುದ್ರಾಡಿ ಬಳಿಯ ಬಲ್ಲಾಡಿ-ಜೋಗಿಬೆಟ್ಟಿನ ಹಾಡಿಯಲ್ಲಿ ಒಂದು ವಿಶಾಲ ಆವರಣಗಳ ಅವಶೇಷಗಳು ಒಂದು ಚಿಕ್ಕ ಪಿರಮಿಡ್ಡಿನಂತೆ ಕಾಣುತ್ತದೆ. ಅದೊಂದು ದೇವಸ್ಥಾನದ ವಾಸ್ತುಶಿಲ್ಪ ಅವಶೇಷ. ಅಲ್ಲಿಯೇ ಬೆಂಡುಗುಡ್ಡೆಯಲ್ಲಿ ಒಂದು ಸಮಾಧಿ. ದೇವರಪಾಡಿಯಲ್ಲಿ ಅವಶೇಷಗಳ ಕುರುಹುಗಳು ಇವೆ. ಅಲ್ಲಿನ ಪಿಲಿಪಂಜರ ಎನ್ನುವ ಕುತೂಹಲಕಾರಿ ರಚನೆಗಳು ಮತ್ತು ಒಂದು ಗುಹೆಯೂ ಅಲ್ಲಿವೆ. ಇವುಗಳ ಸಂಶೋಧನಾ ಭೇಟಿಗೆ ಸಂಶೋಧಕರ ದಂಡೇ ಬೇಕಾದೀತು. ಇಲ್ಲಿ ಸಂಶೋಧನಾ ಕಾರ್ಯ ಜರುಗಿದರೆ ಶಿಲಾಯುಗದಿಂದ ಒಡಿದು ನಾಥಪಂಥಗಳ ಕಾಲದವರೆಗಿನ ಹಲವಾರು ವಿಚಾರಗಳು ದೊರಕಬಹುದೆಂದು ನನ್ನ ಊಹೆ.

ನಮ್ಮ ಜಿಲ್ಲೆಗೆ ಕೆಳದಿಯವರ ಕಾಲದಲ್ಲಿ ಪ್ರವೇಶಿಸಿದ ವೀರಶೈವ ಧರ್ಮದ ಜೋಗಿಮಠಗಳು ಪಿಎಚ್.ಡಿ. ಪ್ರಬಂಧಕ್ಕೆ ಬೇಕಾಗುವಷ್ಟು ಮಾಹಿತಿಗಳನ್ನು ನೀಡಬಲ್ಲವು. ಹೆಬ್ರಿಯಲ್ಲಿ ಹೊಳೆಯ ನಡುವಿನ ಬಂಡೆಗಳ ಮೇಲೆ ಕೆತ್ತಲ್ಪಟ್ಟಿರುವ ಶಿವಲಿಂಗಗಳು ಹಾಗೂ ಬಸವನ ಮೂರ್ತಿಗಳು ಅಂತಹ ಕೆಲವು ಕುರುಹುಗಳು. ಹೆಬ್ರಿಯ ಪೇಟೆಯ ಒಂದು ಅಂಗಡಿಯೊಳಗೆ ರಹಸ್ಯವಾಗಿ ಪೂಜಿಸಲ್ಪಡುತ್ತಿರುವ ಸುಮಾರು ೧೦ ಅಡಿಗಳಿಗೂ ಮಿಕ್ಕಿದ ಎತ್ತರದ ಒಂದು ವೀರಗಲ್ಲನ್ನು ಇತಿಹಾಸಕಾರರು ವರ್ಣಿಸಿಲ್ಲ. ಸೋಮೇಶ್ವರದಲ್ಲೂ ವೀರಗಲ್ಲುಗಳಿವೆ.

ಶಿವಪುರದ ಕಾಜಿಮಲೆಯ ಮೇಲೆ ಕಲ್ಲುಗಳನ್ನು ಪೇರಿಸಿ ಮೆಟ್ಟಿಲು ಪಿರಮಿಡಿಕಲ್ ಆಕಾರಕ್ಕೆ ತಂದಿರುವ ರಚನೆಯ ಸ್ವರೂಪವನ್ನು ನೋಡಿದರೆ ಅದು ಯಾವ ಕಾಲದ್ದೆಂದು ಗುರುತಿಸಲು ಪರಿಣತರೇ ಬೇಕು.

ಪೆರ್ಡೂರಿನ ಅಲಂಗಾರು ಬೀಡಿನ ಕಂಬ್ಳದ ಕೆರೆಯ ಬಳಿಯಲ್ಲಿನ ಒಂದು ಅರೆಬರೆ ರಚಿತವಾದ ಮಾಸ್ತಿಕಲ್ಲು ಮತ್ತು ವೀರಗಲ್ಲುಗಳನ್ನು ಈಗ ಮಂಗಳೂರಿನ ಸೀಮಂತಿನಿ ಬಾಯಿ ಸಂಗ್ರಹಾಲಯದಲ್ಲಿ ಇರಿಸಲಾಗಿದೆ. ಇದುವರೆಗೂ ಇದರ ಬಗ್ಗೆ ಸಂಶೋಧನಾ ಲೇಖನ ಬಂದಿಲ್ಲ. ಇದೇ ಬೀಡಿನಲ್ಲಿ ಕಂಬ್ಳದಕೆರೆಯ ಮೇಲಿನ ಒಂದು ವಿಶಾಲವಾದ ವಾಸ್ತುಶಿಲ್ಪದ ಪಂಚಾಂಗದ ರಚನೆಯು ಸುಟ್ಟ ಇಟ್ಟಿಗೆಗಳಿಂದ ರಚಿಸಲ್ಪಟ್ಟುದಾಗಿದೆ. ಇದು ಬನವಾಸಿಯ ಅವಶೇಷಗಳನ್ನು ನೆನಪಿಸುತ್ತದೆ.

> **ಐತಿಹಾಸಿಕವಾಗಿ ನಾವು, ಎಂದರೆ ಉಡುಪಿ ಜಿಲ್ಲೆಯವರು, ಕರ್ನಾಟಕದ ಯಾವುದೇ ಗಡಿ ಜಿಲ್ಲೆಗಳಿಗಿಂತ ಹೆಚ್ಚು ದೇಶ-ವಿದೇಶ ಗಳ ಸಾಂಸ್ಕೃತಿಕ ಸಂಬಂಧ ಹೊಂದಿದ್ದೇವೆ. ಆದುದರಿಂದಾಗಿಯೇ ವಿವಿಧ ಭಾಷೆಗಳ ನಾವು ಭಾಷಾಂಧತೆಯನ್ನು ಬೆಂಬಲಿಸುವುದಿಲ್ಲ. ಹಾಲು-ಸಕ್ಕರೆ-ಪಾಯಸದಂತಹ ಸಂಸ್ಕೃತಿ ರಚಿಸಿ ಕೊಳ್ಳುವುದರಲ್ಲಿ ನಾವು ಸಫಲರಾಗಿದ್ದೇವೆ. ಇತ್ತೀಚೆಗೆ ನಡೆಯುತ್ತಿರುವ ಕೋಮುಗಲಭೆಗಳ ಕಳಂಕಗಳನ್ನು ಬಿಟ್ಟಲ್ಲಿ ಸೌಹಾರ್ದ-ಸಮಾಜಕ್ಕೆ ಹುಳಿ ಹಿಂಡುವ ಯಾವುದೇ ಚಳವಳಿಗಳನ್ನು ನಡೆಸದ ದೇಶಪ್ರೇಮಿಗಳು ನಾವು. ಇಂತಹ ಒಂದು ಸಾಂಸ್ಕೃತಿಕ ಪರಂಪರೆಯನ್ನು ಇಡೀ ದೇಶ ಗಮನಿಸಲಿ.**

ಅದೇ ಗ್ರಾಮದ ಮಡಿಸಾಲು ಹೊಳೆಯ ಅಂಚಿನಲ್ಲಿ 'ಮಠದಮೂಲೆ' ಎಂದು ಕರೆಯಲಾಗುವ ಅಜ್ಞಾತ ಸ್ಥಳದಲ್ಲಿ ದೇವಾಲಯದ ಅವಶೇಷವೂ ಒಂದು ಗೋಚರಕ್ಕೆ ಬಂದಿದೆ. ಪರ್ಕಳದ ಅಲಂಬಿಹಾಡಿಯಲ್ಲಿ, ದೇವಿನಗರದ ಬಳಿ, ಹಿರೇಬೆಟ್ಟಿನ ಬಾಳ್ಗಟ್ಟದಲ್ಲೂ ಅಲಕ್ಷಿತ ದೇವಾಲಯಗಳ ಅವಶೇಷಗಳಿವೆ.

**ಪ್ರಾಚೀನ ಕೋಟೆಗಳು ಮತ್ತು ಮನೆ ನಿವೇಶನಗಳ ಸಂಶೋಧನೆ**

ಜಲಸಾರಿಗೆಯೇ ಸರಕು ಸಾಗಾಣಿಕೆಗೆ ಅತ್ಯಂತ ಅನುಕೂಲವಾಗಿದ್ದ ಕಾಲದಲ್ಲಿ ನದೀ ತೀರಗಳಲ್ಲೇ ಹಳ್ಳಿಗಳು ಸ್ಥಾಪಿಸಲ್ಪಟ್ಟವು. 'ಬಜೆ' ಎನ್ನುವ ಸ್ಥಳನಾಮದ ಸೂಚನೆಯಂತೆ ಪೆರ್ಡೂರಿನ ಬಳಿಯ ಬಜೆಯಲ್ಲಿ ಬಂದರಿನ ಕುರುಹುಗಳಿವೆ. ನೆರೆನೀರಿನಿಂದ ಕೆಡವಲ್ಪಟ್ಟರೂ ಅಲ್ಪ ಸ್ವಲ್ಪ ನಿವಾಸಗಳ ಅವಶೇಷಗಳು ಈಗಲೂ ಇವೆ. ಅನತಿ ದೂರದಲ್ಲಿ ಕೈರ್ ಎನ್ನುವ ಸ್ಥಳದಲ್ಲಿ ಹಲವು ಆಳೂಪ ನಾಣ್ಯಗಳು ನಮಗೆ ದೊರಕಿವೆ. ನಮ್ಮ ಜಿಲ್ಲೆಯ ನದಿಗಳ ಇಕ್ಕೆಲಗಳಲ್ಲಿ ಅನ್ವೇಷಣೆ ನಡೆಸಿದರೆ ಇಂತಹ ಹಲವು ಅಜ್ಞಾತ ಹಳ್ಳಿ-ಪಟ್ಟಣಗಳ ಅವಶೇಷಗಳು ದೊರಕಬಹುದು.

ಹೊಯಿಸಳ-ವಿಜಯನಗರ ಕಾಲಗಳಿಂದಲೂ ಬೀಡು ಗಳು, ಗುತ್ತುಗಳು ಅರಮನೆ ಚಾವಡಿಗಳು ಪಾಳೆಯ ಪಟ್ಟಿನ ಜನಜೀವನದಲ್ಲಿ ಪ್ರಮುಖ ಪಾತ್ರ ವಹಿಸಿದ್ದುವು. ಅಲ್ಲಿಯೇ ಕೋಟೆಗಳನ್ನು ಕಟ್ಟಲಾಗಿತ್ತು. ಇಂದು ಆ ಕುಟುಂಬಗಳ ಹಳೆಯ ಮನೆಗಳನ್ನು ಒಡೆದುಹಾಕಿ ಆಧುನಿಕ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದಾರೆ. ಅವು ಇತಿಹಾಸದ ಕತ್ತಲ ಗರ್ಭ ದೊಳಗೆ ಮರೆಯಾಗಲಿವೆ.

ಬಾರಕೂರಿನ ಕೋಟೆಯ ಉತ್ಖನನ ಅರ್ಧಕ್ಕೆ ನಿಂತು ಹೋಗಿದೆ. ಉದ್ಯಾವರ ಮತ್ತು ನಂದಿಕೂರಿನ ಬಳಿ ನನ್ನಿಕಲ್ಲು ಕೋಟೆಗಳು ಸ್ಥಳೀಯರ ಅಲಕ್ಷ್ಯಕ್ಕೆ ತುತ್ತಾಗಿ ನಾಶವಾಗುತ್ತಿವೆ. ಹಾರಾಡಿ, ಕಲ್ಯಾಣಪುರ ಮತ್ತು ಕೊಡಂಕೂರು ಕೋಟೆ ಯೊಳಗೇ ವಾಸಿಸುತ್ತಿರುವವರಿಗೆ ತಾವು ಕೋಟೆಯೊಳಗೆ ಇದ್ದೇವೆ ಎಂದು ಗೊತ್ತೇ ಇಲ್ಲ. ಉಡುಪಿ ಸರ್ವಿಸ್ ಬಸ್ ಸ್ಟಾಂಡ್ ಮತ್ತು ಕುಂದಾಪುರ ಹಳೆಯ ಬಸ್‌ಸ್ಟಾಂಡ್‌ಗಳು ಕೋಟೆಗಳಾಗಿತ್ತೆಂದು ಬೆರಳೆಣಿಕೆಯವರಿಗೆ ಮಾತ್ರ ತಿಳಿದಿದೆ.

**ಉಪಸಂಹಾರ**

ಪುರಾತತ್ತ್ವ ಇಲಾಖೆಯ ಕಾರ್ಯಗಳ ಜೊತೆಗೆ ಸ್ಥಳೀಯ ಸಂಶೋಧನಾ ಕೇಂದ್ರಗಳು ತಮ್ಮ ಕೇಂದ್ರಗಳಲ್ಲಿ ಮತ್ತು ಮಠ ಗಳಲ್ಲಿ ಈಗಾಗಲೇ ಸಂಗ್ರಹಿತವಾದ ತಾಳೆಗರಿ ಗ್ರಂಥಗಳ ಗಣಕೀಕರಣ ಮಾಡಬೇಕಾಗಿದೆ. ಈ ದಿಶೆಯಲ್ಲಿ ಸಂಶೋಧಕ ರನ್ನು ಸಿದ್ಧಪಡಿಸಿ ಅಧ್ಯಯನ ಸಾಗಬೇಕು. ಖಾಸಗಿ ವ್ಯಕ್ತಿಗಳಲ್ಲಿ ಇರಬಹುದಾದ ಹಳೆಯ ಮಾದರಿ ವಸ್ತುಗಳನ್ನು ಕೊಂಡು ಕೊಂಡು ಸಂಗ್ರಹಾಲಯಗಳನ್ನು ಸ್ಥಾಪಿಸಬೇಕು. ಇತಿಹಾಸ ಕಾರರಿಂದ ದೇಶ-ವಿದೇಶಗಳಲ್ಲಿರುವ ಸಂಗ್ರಹಾಲಯ ಗಳಲ್ಲಿನ ಕಡತಗಳ ಅಧ್ಯಯನ ನಡೆದು ದಾಖಲಾಗಬೇಕು.

ಇದರಿಂದ ನಮ್ಮ ಉಡುಪಿ ಜಿಲ್ಲೆ ಮಾತ್ರವಲ್ಲ ಭಾರತದ ಭವ್ಯ ಪರಂಪರೆಗೆ ನಮ್ಮ ತಲೆಮಾರು ಕೂಡ ತನ್ನ ಕಾಣಿಕೆಯನ್ನು ನೀಡಬಹುದಾಗಿದೆ.

ಕೆ. ಶ್ರೀಧರ್ ಭಟ್

**ಅಂ**ತರರಾಷ್ಟ್ರೀಯ ಆಹಾರ ಧಾನ್ಯ ಮಾರುಕಟ್ಟೆಯಲ್ಲಿ ಗೋಧಿಯ ಬೆಲೆ ಒಂದು ಮೆಟ್ರಿಕ್ ಟನ್‌ಗೆ ಕಳೆದ ವರ್ಷಕ್ಕಿಂತ ೧೭೯ ಅಮೆರಿಕನ್ ಡಾಲರ್‌ನಷ್ಟು ಹೆಚ್ಚಳವನ್ನು ದಾಖಲಿಸಿದೆ. ೨೦೦೭ನೇ ಇಸವಿಯಲ್ಲಿ ಒಂದು ಮೆಟ್ರಿಕ್ ಟನ್ ಗೋಧಿಯ ಬೆಲೆ ೩೬೯ ಅಮೆರಿಕನ್ ಡಾಲರ್‌ವರೆಗೆ ಏರಿತ್ತು. ಜಾಗತಿಕ ಮಾರುಕಟ್ಟೆಯಲ್ಲಿ ಅಕ್ಕಿಯ ಪರಿಸ್ಥಿತಿ ವಿಭಿನ್ನವಾಗಿರಲಿಲ್ಲ. ೨೦೦೭ನೇ ಇಸವಿಯಲ್ಲಿ ಒಂದು ಮೆಟ್ರಿಕ್ ಟನ್ ಅಕ್ಕಿಯ ಬೆಲೆ ೫೬ ಅಮೆರಿಕನ್ ಡಾಲರ್‌ನಷ್ಟು ಹೆಚ್ಚಿತ್ತು. ಜಾಗತಿಕ ಮಾರುಕಟ್ಟೆಯಲ್ಲಿ ಗೋಚರಿಸುತ್ತಿರುವ ಗೋಧಿ ಮತ್ತು ಅಕ್ಕಿಯ ಬೆಲೆಯೇರಿಕೆಯ ಸೂಚ್ಯಂಕ ಭಾರತದ ಆಂತರಿಕ ಮಾರುಕಟ್ಟೆಯಲ್ಲಿ ಆಹಾರ ಧಾನ್ಯಗಳ ಬೆಲೆಯ ಮೇಲೆ ತೀವ್ರ ಒತ್ತಡವನ್ನು ಹೇರಿದೆ. ತತ್ಪರಿಣಾಮವಾಗಿ, ನಮ್ಮ ದೇಶದಲ್ಲಿ ಇತ್ತೀಚೆಗೆ ಆಹಾರಧಾನ್ಯಗಳ ಬೆಲೆ ನಿರಂತರವಾಗಿ ಏರುತ್ತಿದೆ. ಹಣದುಬ್ಬರದ ಪ್ರಮಾಣ ಇಂದು ಶೇಕಡ ೭.೧೪ರ ಮಟ್ಟವನ್ನು ತಲುಪಿ ಜನ ಸಾಮಾನ್ಯರ ಜೀವನವನ್ನು ಆತಂಕಕ್ಕೀಡುಮಾಡಿದೆ.

ಆದರೆ, ನಮ್ಮ ಕೃಷಿ ಸಚಿವಾಲಯ ಆಹಾರ ಧಾನ್ಯಗಳ ಆಮದು ವ್ಯವಹಾರದ ಸೂಚನೆಯನ್ನು ನೀಡಿದೆ. ೨೦೦೭ನೇ ಇಸವಿ ಆಗಸ್ಟ್ ತಿಂಗಳಲ್ಲಿ ನಮ್ಮ ಕೇಂದ್ರ ಸರ್ಕಾರ ಒಂದು ಟನ್ ಗೋಧಿಗೆ ೩೬೯.೪೫ ಅಮೆರಿಕನ್ ಡಾಲರ್‌ನಂತೆ ೭,೯೫,೦೦೦ ಮೆಟ್ರಿಕ್ ಟನ್ ಗೋಧಿಯನ್ನು ಆಮದು ಮಾಡಿಕೊಂಡಿದೆ. ಆ ಆಮದು ವ್ಯವಹಾರದಿಂದ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಗೋಧಿಯ ಬೆಲೆ ಮತ್ತಷ್ಟು ಏರುವ ಸಾಧ್ಯತೆಗಳಿವೆ. ಭಾರತ ಈ ಬಿಕ್ಕಟ್ಟಿನ ಪರಿಸ್ಥಿತಿಯನ್ನು ಸಮರ್ಥವಾಗಿ ಎದುರಿಸಬೇಕಾಗಿದೆ. ಕೇಂದ್ರ ಸರ್ಕಾರ ಕೆಲವು ಪರಿಣಾಮಕಾರಿ ಕ್ರಮಗಳನ್ನು ಜಾರಿಗೊಳಿಸಬೇಕಾಗಿದೆ.

೧. ಗೋಧಿ ಬೆಳೆಯನ್ನು ಬಿಹಾರ ಮತ್ತು ಉತ್ತರ ಪ್ರದೇಶದ ಪೂರ್ವ ಭಾಗಗಳಿಗೆ ವಿಸ್ತರಿಸಬೇಕು.

೨. ಸೂಕ್ತವಾದ ರಾಷ್ಟ್ರೀಯ ಧಾನ್ಯ ನೀತಿಯನ್ನು ರೂಪಿಸಬೇಕು. ಆಹಾರ ಧಾನ್ಯ ಉತ್ಪಾದನೆಯಲ್ಲಿ ತೊಡಗಿಸಿರುವ ಜಮೀನಿನ ಪ್ರಮಾಣವನ್ನು ಏರಿಸಬೇಕು. ಚೀನಾ ದೇಶದಲ್ಲಿ ಆಹಾರಧಾನ್ಯ ಉತ್ಪಾದನೆಯಲ್ಲಿ ತೊಡಗಿಸಿರುವ ಜಮೀನಿನ ಪ್ರಮಾಣ ಶೇಕಡ ೬೯ಕ್ಕಿಂತ ಕಡಿಮೆಯಾಗದಂತೆ ಸರ್ಕಾರ ನಿಗಾ ವಹಿಸುತ್ತದೆ.

# ಆಹಾರ ಧಾನ್ಯ ಬಿಕ್ಕಟ್ಟು ನಿರ್ವಹಣೆ ಕೆಲವು ಸೂತ್ರಗಳು



ಭವಿಷ್ಯತ್ತಿನಲ್ಲಿ ಗೋಧಿ ಮತ್ತು ಅಕ್ಕಿಯ ಸರಬರಾಜು ಕುಂಠಿತಗೊಂಡು ಮಾರುಕಟ್ಟೆಯಲ್ಲಿ ಬೆಲೆಯ ಮೇಲೆ ಮತ್ತಷ್ಟು ಒತ್ತಡ ಹೇರುವ ಸೂಚನೆಗಳಿವೆ. ಜಾಗತಿಕ ಮಟ್ಟದಲ್ಲಿ ಆಹಾರ ಧಾನ್ಯಗಳ ಬೇಡಿಕೆ ಮತ್ತು ಸರಬರಾಜು ಪ್ರಮಾಣದಲ್ಲಿ ವ್ಯತ್ಯಯವಾಗಿ ತೀವ್ರವಾದ ಬಿಕ್ಕಟ್ಟು ಸೃಷ್ಟಿಯಾಗಲಿದೆಯೆಂಬ ವದಂತಿ ದಟ್ಟವಾಗಿ ಹಬ್ಬುತ್ತಿದೆ.

ಭಾರತದಲ್ಲಿ ಆಹಾರಧಾನ್ಯ ಉತ್ಪಾದನೆಯ ಪ್ರಮಾಣ ತೃಪ್ತಿಕರವಾಗಿಲ್ಲ. ಗೋಧಿ ಮತ್ತು ಅಕ್ಕಿಯ ಉತ್ಪಾದನೆಯು ಗಣನೀಯವಾಗಿ ಕುಗ್ಗಿದೆ. ಭಾರತೀಯ ಕೃಷಿಕ್ಷೇತ್ರದ ಪ್ರಸಕ್ತ ಪರಿಸ್ಥಿತಿಗೆ ಹಲವು ಪ್ರಮುಖ ಕಾರಣಗಳಿವೆ. ಹಲವು ದಶಕಗಳಿಂದ ಪಂಜಾಬ್, ಹರಿಯಾಣ ಮತ್ತು ಉತ್ತರ ಪ್ರದೇಶದ ಪಶ್ಚಿಮ ಭಾಗಗಳಲ್ಲಿ ಏಕರೂಪದ ಕೃಷಿ ಧೋರಣೆಯನ್ನನುಸರಿಸಿ ಗೋಧಿ ಉತ್ಪಾದನೆಯ ಮೇಲೆ ಕೇಂದ್ರೀಕರಿಸಲಾಗಿದೆ. ಕೃಷಿ ಜಮೀನಿನ ಗುಣಮಟ್ಟ ಕುಸಿದು, ಮಣ್ಣಿನ ಲವಣಾಂಶ ಏರಿಕೆಯಾಗಿ ನೀರಾವರಿ ಮೂಲಗಳು ಬತ್ತಿವೆ.

ವಿವೇಚನಾರಹಿತ ರಾಸಾಯನಿಕ ಗೊಬ್ಬರ ಮತ್ತು ಕ್ರಿಮಿನಾಶಕಗಳ ಬಳಕೆ ಹಾಗೂ ವಿದೇಶೀ ತಳಿಗಳ ಹಾವಳಿ ಇಂದು ನಮ್ಮ ಕೃಷಿ ಕ್ಷೇತ್ರವನ್ನು ಅಪಾಯದ ಅಂಚಿಗೆ ದೂಡಿವೆ. ಹಸಿರು ಕ್ರಾಂತಿ ಕೃಷಿ ತಂತ್ರಜ್ಞಾನ ಪ್ರಾರಂಭದಲ್ಲಿ ಕೃಷಿ ಉತ್ಪಾದನೆಯನ್ನು ದ್ವಿಗುಣಗೊಳಿಸಿದರೂ, ಕ್ರಮೇಣ ದೇಶೀಯ ಕೃಷಿ ಪದ್ಧತಿಗಳ ಪ್ರಾಮುಖ್ಯತೆಯನ್ನು ಕಡೆಗಣಿಸಿದೆ. ವಾಸ್ತವ ಸಂಗತಿಯೇನೆಂದರೆ, ೧೯೭೬ರಲ್ಲಿ ಓರ್ವ ವ್ಯಕ್ತಿಗೆ ೪೭೫ ಗ್ರಾಂನಷ್ಟು ಬೇಳೆಕಾಳು ಲಭ್ಯವಾಗುತ್ತಿತ್ತು. ಆದರೆ ಇಂದು ಅದರ ಪ್ರಮಾಣ ೪೦೦ ಗ್ರಾಂಗೆ ಇಳಿದಿದೆ. ೧೯೫೧ನೇ ಇಸವಿಯಲ್ಲಿ ಓರ್ವ ವ್ಯಕ್ತಿಗೆ ಪ್ರೋಟೀನ್ ಅಂಶ ೬೧ ಗ್ರಾಂನಷ್ಟು ಲಭ್ಯವಿತ್ತು. ೧೯೭೬ರಲ್ಲಿ ಪ್ರೋಟೀನ್ ಲಭ್ಯತೆ ೩೩ ಗ್ರಾಂಗೆ ಇಳಿಯಿತು. ಸುದೀರ್ಘಕಾಲ ನಮ್ಮ ಕೃಷಿ ಪಂಡಿತರು ಆಹಾರ ಧಾನ್ಯಗಳು ಮಾರುಕಟ್ಟೆಯಲ್ಲಿ ಹೇರಳವಾಗಿ ಲಭ್ಯವಿದೆಯೆಂದೂ ಆದರೆ ಜನರಲ್ಲಿ ಕೊಳ್ಳುವ ಆರ್ಥಿಕ ಸಬಲತೆಯ ಕೊರತೆಯಿದೆಯೆಂದೂ ಪ್ರತಿಪಾದಿಸಿದರು.

೩. ಕೃಷಿ ಉತ್ಪನ್ನಗಳ ಬೆಲೆಯನ್ನು ಸರ್ಕಾರ ಕಾಲ ಕಾಲಕ್ಕೆ ನಿಯಂತ್ರಿಸಬೇಕು ಮತ್ತು ರೈತರಿಗೆ ಅವರ ಶ್ರಮಕ್ಕೆ ತಕ್ಕ ಪ್ರತಿಫಲ ದೊರೆಯುವಂತೆ ಕ್ರಮ ಜಾರಿಗೊಳಿಸಬೇಕು.

೪. ನಮ್ಮ ಕೃಷಿಯೋಗ್ಯ ಜಮೀನಿನ ನಿರ್ವಹಣೆಯನ್ನು ಸಮರ್ಥವಾಗಿ ಮಾಡಬೇಕು. ಮಣ್ಣಿನ ಫಲವತ್ತತೆಯನ್ನು ರಕ್ಷಿಸಬೇಕು. ಹವಾಮಾನ ವೈಪರೀತ್ಯಗಳಿಗನುಗುಣವಾಗಿ ಬೆಳೆ ವಿಧಾನಗಳನ್ನು ಅನುಸರಿಸಬೇಕು.

೫. ರಾಸಾಯನಿಕ ಗೊಬ್ಬರಕ್ಕೆ ನೀಡುತ್ತಿರುವ ಸರ್ಕಾರದ ಸಹಾಯಧನ ರೈತರಿಗೆ ಅನುಕೂಲವಾಗುವಂತಿರಬೇಕು.

೬. ಕೃಷಿ ಯೋಗ್ಯ ಜಮೀನನ್ನು ವಿಶೇಷ ಆರ್ಥಿಕ ವಲಯ ಸ್ಥಾಪನೆಗೆ ಪರಭಾರೆ ಮಾಡುವುದನ್ನು ನಿಲ್ಲಿಸಬೇಕು.

೭. ಗೋಧಿ ಬೆಳೆಯನ್ನು ದಕ್ಷಿಣ ಭಾರತದಲ್ಲೂ ವಿಸ್ತರಿಸಬಹುದಾಗಿ ಕೃಷಿ ತಜ್ಞರು ಅಭಿಪ್ರಾಯಪಟ್ಟಿದ್ದಾರೆ. ಈ ಸಾಧ್ಯತೆಯನ್ನು ಪರಿಶೀಲಿಸಬೇಕು.

೮. ನಮ್ಮ ದೇಶದ ವೈಶಿಷ್ಟ್ಯವೆಂದರೆ ಜಮೀನಿನ ವೈವಿಧ್ಯತೆ ಮತ್ತು ವಿಭಿನ್ನ ಹವಾಮಾನ ಪರಿಸ್ಥಿತಿ. ಈ ಹಿನ್ನೆಲೆಯಲ್ಲಿ ಜಮೀನಿನ ಬಳಕೆ ಕೂಡ ಸಮರ್ಥ ರೀತಿಯಲ್ಲಿ ನಿರ್ವಹಿಸಬೇಕಾಗಿದೆ. ಆಹಾರ ಧಾನ್ಯ ಬಿಕ್ಕಟ್ಟಿನ ನಿರ್ವಹಣೆಗೆ ಸರ್ಕಾರ ಆದ್ಯತೆಯನ್ನು ನೀಡಬೇಕಾಗಿದೆ.

(ಸಾಧಾರ)

ಶಂಕರನಾರಾಯಣ
೫೪/೧೧೪, ಕೆನರಾ ಬ್ಯಾಂಕ್ ಕಾಲೋನಿ, ಚಿಕ್ಕಲ್ಲಸಂದ್ರ, ಬೆಂಗಳೂರು - ೫೬೦೦೬೧

# ಖಾದಿ ಯಾರಿಗೆ ಬೇಕು?

## ಸಂಕುಲಜೀವ

**ಖಾ**ದಿ ಯಾಕೆ ಧರಿಸಬೇಕು ? ಖಾದಿ ಇಂದಿಗೂ ಪ್ರಸ್ತುತವೇ, ನೀನು ಯಾಕೆ ಯಾವಾಗಲೂ ಖಾದಿ ಧರಿಸುತ್ತೀ, ಇವೇ ಮುಂತಾದ ಪ್ರಶ್ನೆಗಳನ್ನು ನನಗೆ ಅನೇಕರು ಮತ್ತೆ ಮತ್ತೆ ಕೇಳುತ್ತಾರೆ. ಇತ್ತೀಚೆಗೆ ಹುಬ್ಬಳ್ಳಿಯಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಸಂಸ್ಥೆಯ ಒಂದು ಕಾರ್ಯಕ್ರಮದಲ್ಲಿ ಇದೇ ವಿಷಯದ ಕುರಿತಂತೆ ಮಾತನಾಡುವ ಅವಕಾಶ ನನಗೆ ದೊರಕಿತು. ಅಂದು ನಾನು ಆಡಿದ ಮಾತುಗಳ ಲಿಖಿತ ರೂಪವೇ ಈ ಲೇಖನ.

ಶ್ರೀಸಾಮಾನ್ಯರು ಮಹಾ ಜಾಣರು. ಪ್ರಭುತ್ವ ಅದೆಷ್ಟೇ ಶಕ್ತಿಶಾಲಿಯಾಗಿದ್ದರೂ ಅದರ ವಿರುದ್ಧ ಏನು ಹೇಳಬೇಕೋ ಅದನ್ನು ಶ್ರೀಸಾಮಾನ್ಯರ ನಾಲಿಗೆ ಯಾವ ಮುಚ್ಚುಮರೆಯೂ ಇಲ್ಲದೆ ಹೇಳಿಬಿಡುತ್ತದೆ. ಸ್ವಾತಂತ್ರ್ಯೋತ್ತರದ ಭಾರತದಲ್ಲಿ ರಾಜಕಾರಣಿಗಳು ಪೊಲೀಸರು ಹಾಗೂ ಮಠಮಾನ್ಯಗಳು ಮಾಡಿದ ರಾಡಿಯನ್ನು ಶ್ರೀಸಾಮಾನ್ಯರು ಖಾದಿ, ಖಾಕಿ ಮತ್ತು ಕಾವಿಗಳ ರಾಡಿ ಎಂದು ಒಂದೇ ಮಾತಿನಲ್ಲಿ ಮಾರ್ಮಿಕವಾಗಿ ಹೇಳಿಬಿಟ್ಟರು. ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಖಾದಿಗೆ ಇದ್ದ ಗೌರವ ಆದರಗಳು ಸ್ವಾತಂತ್ರ್ಯಾನಂತರದ ನಾಲ್ಕೈದು ದಶಕಗಳಲ್ಲಿ ಸಂಪೂರ್ಣವಾಗಿ ಮಾಯವಾದವು. ಆದುದರಿಂದಲೇ ಖಾದಿ ಇಂದಿಗೂ ಪ್ರಸ್ತುತವೇ ಎಂಬ ಪ್ರಶ್ನೆ ಉದ್ಭವಿಸುವಂತಾಗಿದೆ.

ನಾನು ರಾಜಕಾರಣಿಯಲ್ಲ; ವೃತ್ತಿಯಿಂದ ನಾನೊಬ್ಬ ಡಾಕ್ಟರ್ – ಸ್ತ್ರೀ ಆರೋಗ್ಯ ತಜ್ಞ. ಅಪರೂಪಕ್ಕೊಮ್ಮೆ ಹತ್ತಿ ನೂಲಿನ ಟೀ ಶರ್ಟ್ ಬಿಟ್ಟರೆ ಕಳೆದ ಸುಮಾರು ೨೫ ವರ್ಷಗಳಿಂದಲೂ ನಾನು ಯಾವಾಗಲೂ ಖಾದಿ ಧರಿಸುತ್ತ ಬಂದಿದ್ದೇನೆ. ಸಾಮಾನ್ಯವಾಗಿ ನಮ್ಮ ಸಮಾಜದಲ್ಲಿ ಡಾಕ್ಟರುಗಳು ಉಳಿದ ಅನೇಕರಿಗಿಂತ ಹೆಚ್ಚಿನ ಮಟ್ಟದಲ್ಲಿ ಪಾಶ್ಚಿಮಾತ್ಯ ಶೈಲಿಯನ್ನು ರೂಢಿಸಿಕೊಂಡವರು. ಹೀಗಾಗಿ ಈ ತಲೆಮಾರಿನ ಒಬ್ಬ ಡಾಕ್ಟರ್ ಆಗಿದ್ದುಕೊಂಡು ನಾನು ಯಾವಾಗಲೂ ಖಾದಿ ಧರಿಸುವದು ಹಲವರಿಗೆ ವಿಚಿತ್ರವಾಗಿ ಕಾಣುತ್ತದೆ. ಆದುದರಿಂದಲೇ ಈ ಪ್ರಶ್ನೆ – ನೀನೇಕೆ ಯಾವಾಗಲೂ ಖಾದಿ ಧರಿಸುತ್ತೀ ?

ಈ ಪ್ರಶ್ನೆಯ ಹೊಟ್ಟೆಯೊಳಗೆ ನಮ್ಮ ಜನಮಾನಸದ ಭಗ್ನಗೊಂಡ ಆಶಯಗಳ ನೋವು, ಹುಸಿಯಾದ ನಿರೀಕ್ಷೆಗಳ ಹತಾಶೆ, ಒಂದು ಸಮುದಾಯದ ನೈತಿಕ ಅಧಃಪತನದ ದುಃಖ, ಅಸಹಾಯಕತೆ ಹಾಗೂ ಬರಲಿರುವ ನಾಳೆಗಳ ಕುರಿತಾದ ಮಸುಕು ಮಸುಕು ಕನಸುಗಳು ಎಲ್ಲವೂ ಅಡಗಿವೆ. ಆದ್ದರಿಂದ ಬೆಂಗಳೂರಿನ ಮುಂಜಾನೆಯ ಒಂಭತ್ತು ಗಂಟೆಯ ವಾಹನ ಸವಾರರಂತೆ ಅವಸರ ಮಾಡದೆ ಹೆಬ್ಬಳ್ಳಿಯ ಐವತ್ತರ ಮಹಿಳೆ ಕಾಳಮ್ಮನ ಹಾಗೆ ನಿಧಾನವಾಗಿ ಉತ್ತರ ಹುಡುಕುತ್ತ ಹೋಗುವದು ಒಳಿತು.

ಖಾದಿ ಒಂದು ಬಹುಮುಖೀ ವಸ್ತ್ರ. ಪರಿಸರ, ಆರ್ಥಿಕ, ಸಾಮಾಜಿಕ, ಚಾರಿತ್ರಿಕ, ಆರೋಗ್ಯದ, ಆಧ್ಯಾತ್ಮಿಕ, ವೈಯಕ್ತಿಕ ಹೀಗೆ ಖಾದಿಗೆ ಅದರದ್ದೇ ಆದ – ಬೇರೆ ಯಾವ ಬಟ್ಟೆಗೂ ಇಲ್ಲದ – ಅನೇಕ ವಿಶಿಷ್ಟ ಆಯಾಮಗಳಿವೆ.

ಖಾದಿಯ ಚಾರಿತ್ರಿಕ ಆಯಾಮ ಎಲ್ಲರಿಗೂ ಗೊತ್ತಿದ್ದದ್ದೆ; ಅದರ ಬಗ್ಗೆ ಹೆಚ್ಚಿನ ವಿವರಣೆ ಅವಶ್ಯವಿಲ್ಲ ಎಂದು ಕೆಲವರಿಗೆ ಅನಿಸಬಹುದು. ಆದರೆ ಖೇದಕರವಾದರೂ ಸತ್ಯದ ಸಂಗತಿಯೇನೆಂದರೆ ಇಂದಿನ ಯುವಜನರಿಗೆ ನಮ್ಮ ದೇಶದ ಸ್ವಾತಂತ್ರ್ಯ ಹೋರಾಟ, ಅದರ ತಾತ್ವಿಕ ನೆಲೆಗಟ್ಟು, ಅದಕ್ಕಾಗಿ ಅಂದಿನ ತಲೆಮಾರಿನವರು ಪಟ್ಟ ಪಾಡು, ಮಾಡಿದ ತ್ಯಾಗ ಇವುಗಳ ಸರಿಯಾದ ಕಲ್ಪನೆಯಿಲ್ಲ. ನಮ್ಮದು ಜಗತ್ತಿನ ಇತಿಹಾಸದಲ್ಲಿಯೆ ಒಂದು ಅಪೂರ್ವವಾದ ಸ್ವಾತಂತ್ರ್ಯ ಹೋರಾಟ. ಹಾಗೂ ಅದರ ಸಿದ್ಧಾಂತಸಾರವೆಲ್ಲವನ್ನೂ ಗರ್ಭೀಕರಿಸಿಕೊಂಡು ನಮ್ಮ

ಖಾದಿಯ ಚಾರಿತ್ರಿಕ ಆಯಾಮ ಎಲ್ಲರಿಗೂ ಗೊತ್ತಿದ್ದದ್ದೆ; ಅದರ ಬಗ್ಗೆ ಹೆಚ್ಚಿನ ವಿವರಣೆ ಅವಶ್ಯವಿಲ್ಲ ಎಂದು ಕೆಲವರಿಗೆ ಅನಿಸಬಹುದು. ಆದರೆ ಖೇದಕರವಾದರೂ ಸತ್ಯದ ಸಂಗತಿಯೇನೆಂದರೆ ಇಂದಿನ ಯುವಜನರಿಗೆ ನಮ್ಮ ದೇಶದ ಸ್ವಾತಂತ್ರ್ಯ ಹೋರಾಟ, ಅದರ ತಾತ್ವಿಕ ನೆಲೆಗಟ್ಟು, ಅದಕ್ಕಾಗಿ ಅಂದಿನ ತಲೆಮಾರಿನವರು ಪಟ್ಟ ಪಾಡು, ಮಾಡಿದ ತ್ಯಾಗ ಇವುಗಳ ಸರಿಯಾದ ಕಲ್ಪನೆಯಿಲ್ಲ. ನಮ್ಮದು ಜಗತ್ತಿನ ಇತಿಹಾಸದಲ್ಲಿಯೆ ಒಂದು ಅಪೂರ್ವವಾದ ಸ್ವಾತಂತ್ರ್ಯ ಹೋರಾಟ. ಹಾಗೂ ಅದರ ಸಿದ್ಧಾಂತಸಾರವೆಲ್ಲವನ್ನೂ ಗರ್ಭೀಕರಿಸಿಕೊಂಡು ನಮ್ಮ ಹಿರಿಯರ ಕೆಚ್ಚನ್ನು ತಾಳ್ಮೆ ತ್ಯಾಗಗಳ ಸಂಕೇತವಾಗಿ ಇಡೀ ಸ್ವಾತಂತ್ರ್ಯ ಚಳುವಳಿಗೆ ಲಾಂಛನವಾಗಿ ರೂಪುಗೊಂಡಿದ್ದು ಖಾದಿ ಬಟ್ಟೆ. ನಾವು ನಮ್ಮ ಚರಿತ್ರೆಯನ್ನು ನೆನಪಿಟ್ಟುಕೊಳ್ಳಬೇಕು. ಇತಿಹಾಸವನ್ನು ಮರೆತವರು ಅದನ್ನು ಮತ್ತೆ ಅನುಭವಿಸುವ ದೌರ್ಭಾಗ್ಯಕ್ಕೊಳಗಾಗಬೇಕಾಗುತ್ತದೆ ಅನ್ನುವ ಮಾತೊಂದಿದೆ. ಜಾಗತೀಕರಣದ ಇಂದಿನ ಸಂಕ್ರಮಣ ಸ್ಥಿತಿಯಲ್ಲಿ ಇದು ನಮಗೆ ಇನ್ನೂ ಹೆಚ್ಚು ಮಹತ್ವದ್ದಾಗುತ್ತದೆ.



ಹಿರಿಯರ ಕೆಚ್ಚನ್ನು ತಾಳ್ಮೆ ತ್ಯಾಗಗಳ ಸಂಕೇತವಾಗಿ ಇಡೀ ಸ್ವಾತಂತ್ರ್ಯ ಚಳುವಳಿಗೆ ಲಾಂಛನವಾಗಿ ರೂಪುಗೊಂಡಿದ್ದು ಖಾದಿ ಬಟ್ಟೆ. ನಾವು ನಮ್ಮ ಚರಿತ್ರೆಯನ್ನು ನೆನಪಿಟ್ಟುಕೊಳ್ಳಬೇಕು. ಇತಿಹಾಸವನ್ನು ಮರೆತವರು ಅದನ್ನು ಮತ್ತೆ ಅನುಭವಿಸುವ ದೌರ್ಭಾಗ್ಯಕ್ಕೊಳಗಾಗ ಬೇಕಾಗುತ್ತದೆ ಅನ್ನುವ ಮಾತೊಂದಿದೆ. ಜಾಗತೀಕರಣದ ಇಂದಿನ ಸಂಕ್ರಮಣ ಸ್ಥಿತಿಯಲ್ಲಿ ಇದು ನಮಗೆ ಇನ್ನೂ ಹೆಚ್ಚು ಮಹತ್ವದ್ದಾಗುತ್ತದೆ. ಜಾಗತೀಕರಣದ ಅನಿವಾರ್ಯತೆ, ಅದರ ಒಳಿತು – ಲಾಭಗಳನ್ನು ಒಪ್ಪಿಕೊಳ್ಳುತ್ತಲೇ ಅದರ ಕೆಡುಕು ಅನಿಷ್ಟಗಳ ಬಗೆಗೂ ನಮಗೆ ಸ್ಪಷ್ಟವಾದ ಅರಿವಿರಬೇಕು. ನಮ್ಮ ಸಾರ್ವಭೌಮತೆ, ನಮ್ಮ ಸ್ವಾಯತ್ತತೆ, ನಮ್ಮ ಅಸ್ಮಿತೆಗಳನ್ನು ಉಳಿಸಿಕೊಂಡು ಇಂದಿನ ಜಗತ್-ವಿನ್ಯಾಸದಲ್ಲಿ ಬಾಳಬೇಕೆಂದಾದರೆ ನಮಗೆ ನಮ್ಮ ಪರಂಪರೆಯ, ಚರಿತ್ರೆಯ ಗಟ್ಟಿಯಾದ ಪರಿಜ್ಞಾನ ಇರಬೇಕು. ಖಾದಿ ನಮ್ಮ ಚರಿತ್ರೆಯ ಸ್ಮರಣಿಕೆಯೂ ಹೌದು, ನಮ್ಮ ಅಸ್ಮಿತೆಯ ಲಾಂಛನವೂ ಹೌದು.

ಇನ್ನು ಖಾದಿಯ ಆರೋಗ್ಯದ ಆಯಾಮ. ನಮ್ಮ ಚರ್ಮದ ಆರೋಗ್ಯವನ್ನು ಕಾಪಾಡುವಲ್ಲಿ ನಾವು ಧರಿಸುವ ಬಟ್ಟೆಗಳ ಪಾತ್ರ ಬಹಳ ಮಹತ್ವದ್ದು. ಪಾಲಿಯೆಸ್ಟರ್ ಬಟ್ಟೆಗಳ ನೂಲು ಬಹಳ ಜಿನುಗಾಗಿರುತ್ತದೆ. ಹಾಗಾಗಿ ಅದರ ಹಾಸುಹೊಕ್ಕುಗಳ, ಅಂದರೆ ಅಡ್ಡ ಉದ್ದ ಎಳೆಗಳ ನಡುವಿನ ತೂತುಗಳು ಬಹಳ ಚಿಕ್ಕದಾಗಿರುತ್ತವೆ. ಇದರಿಂದಾಗಿ ಪಾಲಿಯೆಸ್ಟರ್ ಧರಿಸಿದಾಗ ನಮ್ಮ ಶರೀರದ ಶಾಖ ಬೇಗನೆ ಆರುವದಿಲ್ಲ; ಬೆವರು ಒಣಗುವದಿಲ್ಲ. ಆದಕಾರಣ ಸೆಖೆ ಹೆಚ್ಚಾಗುತ್ತದೆ. ಚರ್ಮದ ಮೇಲಿನ ತೇವಾಂಶ ಹೆಚ್ಚು ಕಾಲ ಹಾಗೆಯೇ ಉಳಿಯುವದರಿಂದ ಬ್ಯಾಕ್ಟೀರಿಯಾ ಮತ್ತು ಫಂಗಸ್ ಮುಂತಾದ ಸೂಕ್ಷ್ಮಜೀವಿಗಳು ಬೆಳೆಯಲು ಅನುಕೂಲವಾಗಿ ಚರ್ಮದ ಸೋಂಕು ರೋಗಗಳು ಹೆಚ್ಚಲು ಕಾರಣವಾಗುತ್ತದೆ.

ಅಲ್ಲದೆ ಪಾಲಿಯೆಸ್ಟರ್‌ನಂತಹ ಕೃತಕ ನೂಲಿನ ಬಟ್ಟೆಯಿಂದ ಅನೇಕರಿಗೆ ಚರ್ಮದ ಅಲರ್ಜಿಯಾಗುತ್ತದೆ. ಇದಕ್ಕೆ ಹೋಲಿಸಿದಾಗ ಖಾದಿಯು ಹತ್ತಿಯ ಅಂದರೆ ನೈಸರ್ಗಿಕ ನೂಲಿನ ಬಟ್ಟೆ. ಅದರ ನೂಲು ದಪ್ಪ. ಜವಳಿ ಶಾಸ್ತ್ರದವರು ಹೇಳುವ ಪ್ರಕಾರ ಖಾದಿ ಚೆನ್ನಾಗಿ ಉಸಿರಾಡುತ್ತದೆ! ಅಂದರೆ ಖಾದಿ ನೂಲುಗಳ ನಡುವಿನ ತೂತುಗಳು ಸ್ವಲ್ಪ ಹೆಚ್ಚು ದೊಡ್ಡದಾಗಿರುವದರಿಂದ ಅದರ ಮೂಲಕ ಗಾಳಿಯಾಡಲು ಹೆಚ್ಚು ಅನುಕೂಲ. ಹೀಗಾಗಿ ಖಾದಿ ಧರಿಸಿದಾಗ ಸೆಖೆ ಆಗುವದಿಲ್ಲ. ಶರೀರದ ಶಾಖ ಬೇಗನೆ ಆರಿ ಬೆವರು ಆವಿಯಾಗಿ ಯಾವಾಗಲೂ ಹಿತಕರವಾದ ಅನುಭವವಿರುತ್ತದೆ. ಹೀಗಾಗಿ ಖಾದಿ ಬಟ್ಟೆಯಿಂದ ಅಲರ್ಜಿ ಅಥವಾ ಚರ್ಮ ರೋಗಗಳು ಉಂಟಾಗುವದಿಲ್ಲ. ಖಾದಿ ಬೇಸಿಗೆಯಲ್ಲಿ ನಮ್ಮನ್ನು ತಂಪಾಗಿ ಇಡುತ್ತದೆ ಹಾಗೂ ಚಳಿಗಾಲದಲ್ಲಿ ಬೆಚ್ಚಗಿಡುತ್ತದೆ. ಈ ಎಲ್ಲ ಅಂಶಗಳನ್ನು ಗಮನಿಸಿಯೇ ಕೆಲವು ವರ್ಷಗಳ ಹಿಂದೆ ಹೊಸ ದಿಲ್ಲಿಯಲ್ಲಿ ನಡೆದ ಅಂತರರಾಷ್ಟ್ರೀಯ ಚರ್ಮ ತಜ್ಞರ ಸಮ್ಮೇಳನದಲ್ಲಿ ಅಧ್ಯಕ್ಷೀಯ ಭಾಷಣ ಮಾಡುತ್ತಾ ನುರಿತ ಚರ್ಮತಜ್ಞರೊಬ್ಬರು ಹೇಳಿದ ಮಾತು: ಭಾರತ ದೇಶಕ್ಕೆ ಅದರ ಭೌಗೋಳಿಕ ಮತ್ತು ಹವಾಮಾನ ವಿದ್ಯಮಾನಗಳನ್ನೆಲ್ಲ ಗಮನಿಸಿ ತೀರ್ಮಾನಿಸುವದಾದರೆ ಖಾದಿಯೇ ಅತ್ಯಂತ ಸಮರ್ಪಕ ಬಟ್ಟೆ.

ಇಲ್ಲಿ ಇನ್ನೂ ಒಂದು ಮಾತು ನಮೂದಿಸಿದರೆ ತಪ್ಪಾಗಲಿಕ್ಕಿಲ್ಲ. ನಮ್ಮ ಹಿರಿಯ ತಲೆಮಾರಿನವರು ಖಾದಿ/ಹತ್ತಿಯ ಧೋತರ ಉಡುತ್ತಿದ್ದರು ಅಥವಾ ದೊಗಲೆಯಾದ ಒಳಚಡ್ಡಿ ಮತ್ತು ಪಾಯಿಜಾಮಾ ಧರಿಸುತ್ತಿದ್ದರು. ಪಾಲಿಯೆಸ್ಟರ್ ಅಥವಾ ಬಿಗಿ ಜೀನ್ಸ್ ಧರಿಸುವ ಈಗಿನ ಯುವಕರಿಗೆ ಇದೆಲ್ಲ ಹಾಸ್ಯಾಸ್ಪದವಾಗಿ ಕಾಣುತ್ತದೆ. ಆದರೆ, ವಿಚಿತ್ರವೆಂದರೆ ಕಳೆದ ಕೆಲವು



ದಶಕಗಳ ಅವಧಿಯಲ್ಲಿ ಬಿಗಿ ಒಳ ಉಡುಪು ಮತ್ತು ಬಿಗಿ ಪ್ಯಾಂಟು ಧರಿಸುವದು ಹಾಗೂ ಇನ್ನಿತರ ಕಾರಣಗಳಿಂದಾಗಿ ಯುವಕರಲ್ಲಿ ವೀರ್ಯಾಣುಗಳ ಸಂಖ್ಯೆ ಹಾಗೂ ಗುಣಮಟ್ಟ ಎರಡೂ ಕಡಿಮೆಯಾಗಿ ಪುರುಷರಲ್ಲಿ ಸಂತಾನಹೀನತೆ ಹೆಚ್ಚುತ್ತಿದೆ. ಖಾದಿಯ ಇನ್ನೊಂದು ಆಯಾಮ ಅದರ ಆರ್ಥಿಕತೆಯದ್ದು. ಖಾದಿಗೆ ಅದರದ್ದೇ ಆದ ದಶಕಗಳಷ್ಟು ಹಳೆಯ ಆದರೆ ಇಂದಿಗೂ ಬಹಳ ಸಮರ್ಪಕವಾದ ಒಂದು ಆರ್ಥಿಕ ಚೌಕಟ್ಟು ಇದೆಯೆಂಬುದು ಬಹಳ ಜನರಿಗೆ ಗೊತ್ತಿಲ್ಲ. ಪಾಲಿಯೆಸ್ಟರ್ ಬಟ್ಟೆಯ ಉತ್ಪಾದನೆಯಲ್ಲಿ ಹೂಡಲಾಗುವ ಬಂಡವಾಳ, ಪ್ರಚಾರಕ್ಕಾಗಿ ಮಾಡಲಾಗುವ ಖರ್ಚು, ಬಟ್ಟೆ ಉತ್ಪಾದನೆಯಾಗಿ ಮಾರಾಟವಾದ ಬಳಿಕ ಅದರ ಒಟ್ಟೂ ಆರ್ಥಿಕತೆಯಲ್ಲಿ ಕಾರ್ಮಿಕರಿಗೆ ದೊರಕುವ ಪಾಲು ಎಷ್ಟು, ಬಂಡವಾಳ ಹೂಡಿದವರಿಗೆ ಸಿಗುವ ಲಾಭವೆಷ್ಟು ಇತ್ಯಾದಿಗಳ ಬಗ್ಗೆ ನಮಗೆ ನಿಖರವಾದ ಮಾಹಿತಿ ದೊರಕುವದಿಲ್ಲ. ಆದರೆ ಖಾದಿಯಲ್ಲಿ ಹೀಗಿಲ್ಲ. ಖಾದಿ ಕ್ಷೇತ್ರದಲ್ಲಿ ತೊಡಗಿರುವ ಪ್ರತಿಯೊಂದು ರೂಪಾಯಿಗೂ ಪೈಸೆ ಪೈಸೆ ನಿಖರವಾದ ಹಾಗೂ ಸಂಪೂರ್ಣವಾಗಿ ಪಾರದರ್ಶಕವಾದ ಲೆಕ್ಕವಿದೆ. ಇಲ್ಲಿ ಬಂಡವಾಳ ಹೂಡಿದವರಿಗೆ ಹೆಚ್ಚು ಲಾಭಾಂಶ, ಕಾರ್ಮಿಕರಿಗೆ ಕಡಿಮೆ ವೇತನ ಮತ್ತು ಅವರ ಶೋಷಣೆ ಎಂಬುದು ಇಲ್ಲವೇ ಇಲ್ಲ. ಒಂದು ರೂಪಾಯಿಯಲ್ಲಿ ಮೊದಲ ಪೈಸೆಯಿಂದ ಕೊನೆಯ ಪೈಸೆಯವರೆಗೂ ಯಾವದೂ ಯಾರಿಗೆ ಎಷ್ಟು, ಯಾಕೆ ಹೋಗುತ್ತದೆ ಎಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಬಡ, ಅನಕ್ಷರಸ್ಥ ಕೆಲಸಗಾರರ ಕಲ್ಯಾಣವೂ ಖಚಿತವಾಗಿ ಸಂರಕ್ಷಿಸಲ್ಪಡುತ್ತದೆ. ಖಾದಿಯ ಈ ಸುಭದ್ರ ಆರ್ಥಿಕ ಚೌಕಟ್ಟು ಹಾಗೂ ಅದರೊಳಗೆ ಸುನಿಶ್ಚಿತವಾದ ಕಾರ್ಮಿಕರ ಸಂರಕ್ಷಣೆ, ಇದು ಎಲ್ಲ ಸಮಾಜವಾದಿಗಳೂ ಸಂತೋಷಪಡಬೇಕಾದ ಸಂಗತಿಯೇ ಸರಿ. ಇದಕ್ಕೆ ಹೊಂದಿಕೊಂಡೇ ಇರುವದು ಖಾದಿಯ ಸಾಮಾಜಿಕ ಆಯಾಮ. ಇಂದಿಗೂ ನಮ್ಮ ಹಳ್ಳಿಗಳಲ್ಲಿ ಬಹುಸಂಖ್ಯಾತ ಜನರ ಶಿಕ್ಷಣಮಟ್ಟ ಹಾಗೂ ಆರ್ಥಿಕ ಸುಭದ್ರತೆ ಕಡಿಮೆಯೇ. ಅದರಲ್ಲೂ ಮಹಿಳೆಯರ ಪರಿಸ್ಥಿತಿ ಇನ್ನೂ ದಯನೀಯವಾಗಿದೆ. ಇಂಥ ಬಡ ಅನಕ್ಷರಸ್ಥ ಗ್ರಾಮೀಣ ಮಹಿಳೆಯರ ಪಾಲಿಗಂತೂ ಖಾದಿ ನಿಜಕ್ಕೂ ಆಪ್ತಬಂಧುವೇ ಸರಿ. ಹಳ್ಳಿಯ ಖಾದಿ ಕೇಂದ್ರದಲ್ಲಿ ಬಡ ಮಹಿಳೆಯರು ದಿನದ ಕೆಲವು ತಾಸು ದುಡಿದು ಸ್ವಲ್ಪ ರೊಕ್ಕಗಳಿಸಿದರೆ ಅದು ಅವರ ಕುಟುಂಬಕ್ಕೆ ಕೃಷಿ ಅಥವಾ ಇತರೆ ಮೂಲದ ಆದಾಯಕ್ಕೆ ಸೇರ್ಪಡೆಯಾಗಿ ಬಹಳ ದೊಡ್ಡ ಸಹಾಯವಾಗುತ್ತದೆ. ವಿಶೇಷವೆಂದರೆ, ಇಂದು ಐಟಿ ಮುಂತಾದ ಅತ್ಯಾಧುನಿಕ ಉದ್ಯೋಗ ಕ್ಷೇತ್ರಗಳಲ್ಲಿ ಯಾವದು 'ಅನುಕೂಲ ಸಮಯ ಸೌಲಭ್ಯ' (ಫ್ಲೆಕ್ಸಿಟೈಮ್) ಎಂಬ ರೂಪದಲ್ಲಿ ಕೆಲಸಗಾರರಿಗೆ ವರದಾನವಾಗಿ ಬಂದಿದೆಯೋ ಅದು ಖಾದಿ ಕ್ಷೇತ್ರದಲ್ಲಿ ಬಡ ಮಹಿಳೆಯರಿಗೆ ಮೊದಲಿನಿಂದಲೂ ಲಭ್ಯವಿದೆ. ಖಾದಿ ಕೇಂದ್ರದಲ್ಲಿ ಮುಂಜಾನೆ ಎಂಟರಿಂದ ಸಂಜೆ ನಾಲ್ಕರವರೆಗೆ ಸತತವಾಗಿ ಒಂದೇ ಕಡೆ ದುಡಿಯಬೇಕು ಎನ್ನುವ ಕಡ್ಡಾಯ ಇಲ್ಲ. ಬೆಳಿಗ್ಗೆ ತನ್ನ ಮನೆ, ಅಡಿಗೆ, ಮಕ್ಕಳು, ಮುಂತಾದ ಕೆಲಸ ಮಾಡಿಕೊಂಡು ನಂತರ ಮೂರ್ನಾಲ್ಕು ತಾಸು ಖಾದಿ ಕೇಂದ್ರಕ್ಕೆ ಹೋಗಿ ಕೆಲಸ ಮಾಡಿ ಮತ್ತೆ ಮನೆಗೆ ಬಂದು ಒಂದಿಷ್ಟು ಕೆಲಸ ಮುಗಿಸಿಕೊಂಡು ಮಧ್ಯಾಹ್ನ ಮತ್ತೆ ಖಾದಿ ಕೇಂದ್ರಕ್ಕೆ ಹೋಗಿ... ಹೀಗೆ ಮನೆ-ಸಂಸಾರ ಹಾಗೂ ಹೊರಗಿನ ದುಡಿಮೆ ಇವೆರಡರ ನಡುವೆ ಒಂದು ಚಂದವಾದ ಹೊಂದಾಣಿಕೆ ಮಾಡಿಕೊಂಡು ಹೋಗುವ ಸಾವಿರಾರು ಮಹಿಳೆಯರು ಇಂದು ಹಳ್ಳಿಗಳಲ್ಲಿ ಇರುವ ಖಾದಿ ಗ್ರಾಮೋದ್ಯೋಗದಲ್ಲಿ ದುಡಿಯುತ್ತಿದ್ದಾರೆ. ನಾಳೆ ನಾಡಿದ್ದು ಮನೆಯಲ್ಲಿ ಹಬ್ಬ ಅಥವಾ ಮುಂದಿನ ವಾರ ಹೊಲದಲ್ಲಿ ಹೆಚ್ಚಿನ ಕೆಲಸ ಇಂತಹ ಸಂದರ್ಭಗಳಲ್ಲಿ ಮಹಿಳೆ ಮೂರ್ನಾಲ್ಕು ದಿವಸ ಹೆಚ್ಚು ವೇಳೆ ಖಾದಿ ಕೇಂದ್ರಕ್ಕೆ ಹೋಗಿ ಕೆಲಸ ಮಾಡಿ, ಮುಂದಿನ ದಿನಗಳ ಗೈರುಹಾಜರಿಯನ್ನು ತುಂಬಿಕೊಂಡುಬಿಡುತ್ತಾಳೆ. ಗರ್ಭಿಣಿ ಮಹಿಳೆಯರೂ ಕೂಡ ಈ ರೀತಿ ಅಷ್ಟಿಷ್ಟು ಕೆಲಸ ಮಾಡಿ ಕುಟುಂಬದ ಆದಾಯಕ್ಕೆ ಕೈಕೂಡಿಸುತ್ತಾರೆ. ಖಾದಿ ಕೇಂದ್ರದಲ್ಲಿ ಜಾತಿ, ಮತ, ಅಂತಸ್ತು, ಅಕ್ಷರಜ್ಞಾನದ ಭೇದಭಾವ ಯಾವುದೂ ಇರುವದಿಲ್ಲ. ಹಳ್ಳಿಯ ಸಾಮಾಜಿಕ ವಾಸ್ತವದ ಅರಿವಿರುವವರಿಗೆ ಇದು ಎಂತಹ ಒಳ್ಳೆಯ ಪರ್ಯಾಯ ಎಂಬುದು ಅರ್ಥವಾಗುತ್ತದೆ.

ಇಂದು ನಮ್ಮ ದೇಶದಲ್ಲಿ ಒಟ್ಟಾರೆಯಾಗಿ ಬೃಹತ್ ಜವಳಿ ಉದ್ಯಮವು ೧೫ ಲಕ್ಷ ಜನರಿಗೆ ಉದ್ಯೋಗ ನೀಡಿದೆಯಾದರೆ, ಖಾದಿ ಗ್ರಾಮೋದ್ಯೋಗವೊಂದೇ ಸುಮಾರು ೧೦ ಲಕ್ಷ ಜನರಿಗೆ ಉದ್ಯೋಗ ನೀಡಿದೆ. ಅಲ್ಲದೆ ಖಾದಿ ಗ್ರಾಮೋದ್ಯೋಗದ ಉದ್ಯೋಗಗಳು ಹಳ್ಳಿಹಳ್ಳಿಗಳಲ್ಲಿಯೇ ದೊರಕುತ್ತವೆಯಾದ್ದರಿಂದ ಹಳ್ಳಿಗರು ಹೊಟ್ಟೆಪಾಡಿಗಾಗಿ ನಗರಗಳಿಗೆ ವಲಸೆ ಬರುವದು, ದೊಡ್ಡ ದೊಡ್ಡ ಕಾರ್ಖಾನೆಗಳ ಅತೀವ ಏಕತಾನತೆಯ ಹಾಗೂ ಯಾಂತ್ರೀಕೃತ ಮತ್ತು ಮಲಿನಗೊಂಡ ವಾತಾವರಣದಲ್ಲಿ (ಚಾರ್ಲಿ ಚಾಪ್ಲಿನ್‌ನ ಮಾಡರ್ನ್ ಟೈಮ್ಸ್ ಚಲನಚಿತ್ರ ನೆನಪಾಗುತ್ತದೆಯೇ?) ಕೆಲಸ ಮಾಡಿ ಜೀವನದಲ್ಲಿ ಬೇಸರಗೊಳ್ಳುವದು ಕಡಿಮೆಯಾಗುತ್ತದೆ.

ನಾವು ಹೊಸ ಶತಮಾನದಲ್ಲಿ ಕಾಲಿರಿಸುತ್ತಿದ್ದಂತೆಯೇ ಸ್ಥಳೀಯವಲ್ಲ, ಪ್ರಾದೇಶಿಕವಲ್ಲ, ಜಾಗತಿಕಮಟ್ಟದ ಸಮಸ್ಯೆಯೊಂದು ನಮ್ಮೆದುರು ಬಂದು ನಿಂತಿದೆ. ಅದುವೇ ಭೂಗೋಳದ ತಾಪಮಾನದ ಹೆಚ್ಚಳ. ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿನ ಪರಿಸರ ಸಮಸ್ಯೆಗಳೆಲ್ಲ ಸೇರಿ ಈಗ ಈ ಭೂಮಿ ಕಾಯುವಿಕೆಯ ಬೃಹತ್ ರಾಕ್ಷಸನ ರೂಪ ತಾಳಿದೆ. ಇದು, ಭೂಮಿಯ ಮೇಲಿನ ಪ್ರತಿಯೊಬ್ಬರಿಗೂ ಸಂಬಂಧಿಸಿದ ಸಮಸ್ಯೆ ಹಾಗೂ ಇದು ಮನುಷ್ಯರ ಚಟುವಟಿಕೆಗಳಿಂದಾಗಿ ಮನುಷ್ಯರ ಜೀವನಶೈಲಿಯಿಂದಾಗಿ ಅದರಲ್ಲೂ ಹೆಚ್ಚು ಪರಿಸರನಾಶಕ ಉದ್ದಿಮೆಗಳಿಂದಾಗಿ ಘಟಿಸಿದೆ ಎಂದು ವಿಜ್ಞಾನಿಗಳು ಹೇಳುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ನಮ್ಮ ಅನ್ನ ಆಶ್ರಯಗಳ ಜೊತೆ ಪ್ರತಿಯೊಬ್ಬರ ಪ್ರಾಥಮಿಕ ಅವಶ್ಯಕತೆಗಳಲ್ಲಿ ಒಂದಾದ ವಸ್ತ್ರದ ಕುರಿತಾಗಿಯೂ ನಾವು ಯೋಚಿಸಬೇಕು. ನಮಗೆಲ್ಲ ವಸ್ತ್ರವನ್ನು ಪೂರೈಸುವ ಜವಳಿ ಕ್ಷೇತ್ರದ ಅಗಾಧ ವ್ಯಾಪ್ತಿ, ಅದರಿಂದ ಉಂಟಾಗುವ ಪರಿಸರ ನಾಶ ಹಾಗೂ ಅದಕ್ಕೆ ಉತ್ತಮ ಪರ್ಯಾಯಗಳೇನು ಎಂಬುದರ ಕುರಿತು ಗಂಭೀರವಾಗಿ ಯೋಚಿಸಿದಾಗ ನಮಗೆ ಖಾದಿಯ ಹಿರಿಮೆ ಗೊತ್ತಾಗುತ್ತದೆ.

ನಮ್ಮ ಇಂದಿನ ಪರಿಸರ ಮಾಲಿನ್ಯದಲ್ಲಿ ಬೃಹತ್ ಉದ್ಯಮಗಳ ಹಾಗೂ ಕಾರ್ಖಾನೆಗಳ ಪಾಲು ಬಹಳ ದೊಡ್ಡದು ಎಂಬುದು ಸುಸ್ಪಷ್ಟ. ಇವುಗಳ ಪೈಕಿ ಕೇಂದ್ರೀಕೃತಗೊಂಡ, ದಟ್ಟೈಸಿದ ಜವಳಿ ಉದ್ಯಮ-ಕಾರ್ಖಾನೆಗಳಿಂದಾಗಿ ಆಗುತ್ತಿರುವ ಜಲ ಮತ್ತು ವಾಯುಮಾಲಿನ್ಯದ ಪರಿಣಾಮ, ಹರಿಹರದ ತುಂಗಭದ್ರೆಯ ಅಳಲನ್ನು ಕೇಳುವ ಕಿವಿಯಿಂದ ಎಲ್ಲರಿಗೂ ಅರ್ಥವಾಗುತ್ತದೆ.



ಇವುಗಳಿಗೆ ಹೋಲಿಸಿದಾಗ ಖಾದಿಯ ಉತ್ಪಾದನೆ ನಡೆಯುವದು ಸಂಪೂರ್ಣವಾಗಿ ಅಕೇಂದ್ರಿತ ರೀತಿಯಲ್ಲಿ, ಎಂದರೆ ಸಣ್ಣ ಸಣ್ಣ ಹಳ್ಳಿ ಊರುಗಳಲ್ಲಿ, ಸರಳ ತಂತ್ರಜ್ಞಾನದಲ್ಲಿ, ಒಂದು ನಿಜವಾದ ಗ್ರಾಮೋದ್ಯೋಗವಾಗಿ. ಹೀಗಾಗಿ ಖಾದಿಯ ಉತ್ಪಾದನೆಯಲ್ಲಿ ಪರಿಸರಮಾಲಿನ್ಯ ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ. ಆದರೆ ಈ ಹಂತದಲ್ಲಿ ಇನ್ನೊಂದು ಮಹತ್ವದ ಮಾತನ್ನು ನಾವು ಗಮನಿಸಬೇಕು. ಇಂದು ನಮ್ಮ ದೇಶದಲ್ಲಿ ತಂಬಾಕಿನ ನಂತರ ಅತಿ ಹೆಚ್ಚು ಪ್ರಮಾಣದಲ್ಲಿ ಕೀಟನಾಶಕ ಬಳಸಲ್ಪಡುವುದು ಹತ್ತಿಯ ಬೆಳೆಯಲ್ಲಿ. ಅಂದರೆ ಹತ್ತಿಯ ಬೆಳೆಯಲ್ಲಿ ಇನ್ನೊಂದು ರೀತಿಯಲ್ಲಿ ಅಗಾಧವಾಗಿ ಪರಿಸರ ಮಾಲಿನ್ಯ ಉಂಟಾಗುತ್ತದೆ ಹಾಗೂ ಖಾದಿ ತಯಾರಾಗುವದು ಹತ್ತಿಯಿಂದಲೇ! ಅಂದ ಬಳಿಕ ಖಾದಿ ಉತ್ಪಾದನೆಯಲ್ಲೂ ಪರಿಸರಮಾಲಿನ್ಯ ಇದ್ದಂತಾಯಿತಲ್ಲ! ಹೌದು, ಆದರೆ ಈಗ ನಿಧಾನವಾಗಿ ಸಾವಯವ ಕೃಷಿ ಮತ್ತೆ ಜನಪ್ರಿಯವಾಗುತ್ತಿದೆ. ಪರಿಸರ ಸಂರಕ್ಷಣೆಯ ಮಹತ್ವವನ್ನು ಅರಿತುಕೊಂಡ ರೈತರು ಹೆಚ್ಚು ಹೆಚ್ಚಾಗಿ ಸಾವಯವ ಹತ್ತಿಯನ್ನು ಬೆಳೆದಿದ್ದೇ ಆದರೆ ಇಂದು ಖಾದಿಯಲ್ಲಿ ಇರುವ ಈ ಒಂದು ದೋಷವನ್ನು ಕೂಡ ತೆಗೆದುಹಾಕಲು ಶಕ್ಯವಾಗುತ್ತದೆ.

ನಾನು ಖಾದಿ ಧರಿಸುವದನ್ನು ನೋಡಿ ಅನೇಕ ಸ್ನೇಹಿತರು ಮತ್ತು ಇತರರು ಇದೆಲ್ಲ ತೋರಿಕೆಗೆ ಮಾತ್ರ ; ಕೇವಲ ನಾಟಕ; ಇದು ನಾಳೆ ರಾಜಕಾರಣಿಯಾಗಲು ತಯಾರಿ ಎಂದೆಲ್ಲ ಚೇಷ್ಟೆ ಮಾಡುತ್ತಾರೆ, ಟೀಕಿಸುತ್ತಾರೆ. ಆದರೆ ಮೌನವಾಗಿ ನನ್ನ ಪಾಡಿಗೆ ನಾನು, ಜನರ ಟೀಕೆಯನ್ನು ಲೆಕ್ಕಿಸದೆ ನನಗೆ ಸರಿಯೆನಿಸಿದ ರೀತಿಯಲ್ಲಿ ಬಾಳುವ ಧೈರ್ಯ ಸ್ಥೈರ್ಯ ಇಂದು ನನಗೆ ಬಂದಿದೆ ಎಂದಾದರೆ ಅದರ ಹಿಂದೆ ಖಾದಿಯದು ದೊಡ್ಡ ಪಾಲಿದೆ! ಯಾವದೋ ಒಂದು ಕಾಲಘಟ್ಟದಲ್ಲಿ ನನಗೆ ಸರಳತೆಯಲ್ಲಿಯೇ ನಿಜವಾದ ಮತ್ತು ದೀರ್ಘಕಾಲೀನ ಆನಂದವಿದೆ ಎಂಬುದು ಅರಿವಾಗತೊಡಗಿತು. ಆಗ ನಾನು ಸಹಜವಾಗಿಯೇ ಖಾದಿಯತ್ತ ವಾಲಿದೆ. ಯಾಕೆಂದರೆ ಇತರ ಬಟ್ಟೆಗಳಲ್ಲಿ ಇರುವ ಬಣ್ಣ ವಿನ್ಯಾಸಗಳ ವೈವಿಧ್ಯ, ಆಕರ್ಷಕತೆ, ನುಣುಪು ಖಾದಿಯಲ್ಲಿ ಇಲ್ಲ. ಖಾದಿಯನ್ನೇ ತೊಡಬೇಕು ಎಂಬ ನಿಯಮ ಮಾಡಿದ ನಂತರ ಬಟ್ಟೆಗಳ ಬಗೆಗಿನ ಅನವಶ್ಯಕ ಆಕರ್ಷಣೆ, ಪ್ರಲೋಭನೆ, ಖರ್ಚು ಎಲ್ಲವೂ ಕಡಿಮೆಯಾಯಿತು. ಇದರಿಂದ ನನ್ನ ಒಟ್ಟೂ ವ್ಯಕ್ತಿತ್ವವನ್ನು, ವಿಚಾರಸರಣಿಯನ್ನು ಹಾಗೂ ಜೀವನಶೈಲಿಯನ್ನು ಸರಳಗೊಳಿಸಿಕೊಳ್ಳಲು ಹಾಗೂ ಆ ಮೂಲಕ ಸದಾಕಾಲ ಆನಂದದಿಂದಿರಲು ನನಗೆ ಶಕ್ಯವಾಗುತ್ತಿದೆ. ಇಲ್ಲಿ ಇನ್ನೂ ಒಂದು ಸಂಗತಿಯನ್ನು ಹೇಳಬೇಕು. ನನಗೆ ಮನುಷ್ಯರೂಪದ, ಬೇಡಿದರೆ ವರ ಕೊಡುವ, ಶಂಖ ಚಕ್ರ ಗದಾಧಾರಿಯಾದ ಅಥವಾ ಮತ್ತಾವುದೇ ವೇಶದ ದೇವರಲ್ಲಿ ನಂಬಿಕೆಯಿಲ್ಲ, ದೇವರಿಲ್ಲ ಅಂದ ಬಳಿಕ ದೇವಾಧಾರಿತ ಅಧ್ಯಾತ್ಮದಲ್ಲೂ ನಂಬಿಕೆಯಿಲ್ಲ. ಆದರೆ ನಮ್ಮ ಈ ಬದುಕಿಗೆ ಬೇರಾಗಿರುವ ಹಾಗೂ ಈ ಬದುಕಿನ ಹೂವಾಗಿರುವ ಪ್ರಜ್ಞೆ ಮತ್ತು ಕರುಣೆಯ ಅಧ್ಯಾತ್ಮದಲ್ಲಿ ನನಗೆ ಅಚಲವಾದ ನಂಬಿಕೆಯಿದೆ. ಮೇಲಾಗಿ ಈ ಅಧ್ಯಾತ್ಮವನ್ನು ನಿತ್ಯಜೀವನದಲ್ಲಿ ಬಾಳುವ ಆಶಯ ನನ್ನದು. ಹಾಗಾಗಿ ನಾನು ಒಂದು ನೂರು ರೂಪಾಯಿಯ ಖಾದಿ ಖರೀದಿಸಿದಾಗ ನಾನು ನನಗಾಗಿ ಒಂದು ಒಳ್ಳೆಯ ಕೆಲಸ ಮಾಡಿದೆನೆಂಬ ಸಮಾಧಾನ ಸಂತೃಪ್ತಿಯೂ ನನಗಿರುತ್ತದೆ: ಅಲ್ಲದೆ ಆ ಒಂದು ನೂರು ರೂಪಾಯಿಯ ಖರೀದಿಯಿಂದಾಗಿ ನನ್ನ ಜೊತೆಯೇ ಈ ಬಾಳನೌಕೆಯಲ್ಲಿ ಪಯಣಿಸುತ್ತಿರುವ ಯಾವದೂ ಹಳ್ಳಿಯ ಒಬ್ಬ ಬಡವ್ಯಕ್ತಿಗೆ ಹೊಟ್ಟೆ ತುಂಬಿಕೊಳ್ಳಲು ಒಂದು ಅಕ್ಕಿ ಕಾಳಿನಷ್ಟು ಸಹಾಯವಾದರೆ ಅದಕ್ಕಿಂತಲೂ ಹೆಚ್ಚಿನ ಸಂತೋಷ ಸಮಾಧಾನ, ಅದಕ್ಕಿಂತಲೂ ಉತ್ತಮವಾದ ಅಧ್ಯಾತ್ಮ ಯಾವುದಿದೆ ?

ಈವರೆಗೂ ಹೇಳಿದ್ದೆಲ್ಲ ಸರಿಯೇ. ಆದರೆ ಪಾಲಿಯೆಸ್ಟರ್‌ಗಿಂತ ಖಾದಿ ಬಟ್ಟೆ ತುಟ್ಟಿ – ಆದುದರಿಂದ ಹೆಚ್ಚು ಜನರು ಪಾಲಿಯೆಸ್ಟರ್ ಖರೀದಿಸುವದೇ ಸರಿಯೆನಿಸುತ್ತದೆ ಎನ್ನುವ ವಾದ ಮುಂದಿಡುವವರಿದ್ದಾರೆ. ಮೇಲ್ನೋಟಕ್ಕೆ ಇದು ಸರಿಯೆನಿಸುತ್ತದೆ. ಆದರೆ ಇಂದು ವಿಜ್ಞಾನಿಗಳು ವಸ್ತುಗಳ ಉತ್ಪಾದನೆಯ ಸಂದರ್ಭದಲ್ಲಿ ಅದರ ಪರಿಸರ ಪರಿಣಾಮ ವಿಶ್ಲೇಷಣೆ (ಎನ್‌ವಿರಾನ್‌ಮೆಂಟ್ ಇಂಪ್ಯಾಕ್ಟ್ ಅನ್ಯಾಲಿಸಿಸ್) ಎಂಬುದನ್ನು ಮಾಡುತ್ತಾರೆ. ಖಾದಿಯ ಪ-ಪ-ವಿ ಗಮನಿಸಿದಾಗ ಸತ್ಯವೇನು ಎಂಬುದು ನಮಗೆ ತಿಳಿಯುತ್ತದೆ. ಖಾದಿಗೆ ಹೋಲಿಸಿದರೆ ಪಾಲಿಯೆಸ್ಟರ್ ಅಥವಾ ಸಿಂಥೆಟಿಕ್ ಬಟ್ಟೆಯ ಉತ್ಪಾದನೆಯಲ್ಲಿ ಆಗುವ ಜಲ ಮತ್ತು ವಾಯು ಮಾಲಿನ್ಯದ ಸಮಸ್ಯೆ, ಇವುಗಳ ಪರಿಹಾರಕ್ಕಾಗಿ ನಾವು ಮಾಡುವ ಖರ್ಚು, ಪರಿಸರ ಮಾಲಿನ್ಯದಿಂದಾಗಿ ಉಂಟಾಗುವ ಆರೋಗ್ಯದ ಸಮಸ್ಯೆಗಳು ಹಾಗೂ ಅವುಗಳ ಪರಿಹಾರಕ್ಕಾಗಿ ನಾವು ಮಾಡುವ ಖರ್ಚು, ಕಾರ್ಖಾನೆಗಳ ಮತ್ತು ಜನವಸತಿಯ ಸಮಸ್ಯೆಗಳು ಹಾಗೂ ಅವುಗಳ ಪರಿಹಾರಕ್ಕಾಗಿ ನಾವು ಮಾಡುವ ಖರ್ಚು – ಇವೆಲ್ಲವನ್ನು ಲೆಕ್ಕ ಹಾಕಿದಾಗ ಖಾದಿ ಅರಿವೆಗಳ ಬಳಕೆಯಲ್ಲಿಯೇ ಜನರಿಗೆ ಹಾಗೂ ಸಮಾಜಕ್ಕೆ ಹೆಚ್ಚು ರೊಕ್ಕ ಉಳಿತಾಯವಾಗುತ್ತದೆ ಎಂಬುದು ಸ್ಪಷ್ಟ. ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಲೇಬೇಕು. ಬಹಳಷ್ಟು ಜನರ ಮಾತು ಹೀಗಿರುತ್ತದೆ: ''ನೀ ಹೇಳೂದೆಲ್ಲ ಅಗದಿ ಖರೆ, ಆದರ... ಆದರ ಏನು ? ಆದರ ನಾ ಖಾದಿ ಹಾಕಕ್ಕೊಳ್ಳಿಕ್ ಹತ್ತಿದರ ಉಳಿದವರು ಏನಂತಾರ ಅನ್ನೂದೆ ಸಮಸ್ಯೆ. ಇಷ್ಟು ವರ್ಷ ಆತು, ನಾನು ಆಫೀಸಿಗೆ, ಕಾಲೇಜಿಗೆ ಈ ಪಾಲಿಯೆಸ್ಟರ್ ಅರಿವಿ - ಈ ಪ್ಯಾಂಟು ಶರ್ಟು ಹಾಕ್ಕೊಂಡ್ ಹೋಗೂದು ಒಂದು ಪದ್ಧತಿ ಆಗಿಬಿಟ್ಟದ. ಹೊರಗ ಬ್ಯಾರೆ ಯಾವದೇ ಕಾರ್ಯಕ್ರಮಕ್ಕಾದರ ಸರಿ, ಖಾದಿ ನಡೀತದ. ಆದರ ಕೆಲಸಕ್ಕ ಹೋಗುವಾಗ ಮಾತ್ರ ಯಾಕೊ...'' ನೀವು ಈ ಗುಂಪಿಗೆ ಸೇರಿದವರಲ್ಲ ಎಂಬುದು ನನ್ನ ಆಶಯ. ಆದರೆ ಒಂದು ವೇಳೆ ನೀವೂ ಇದೇ 'ಆದರ... ಯಾಕೋ...' ಗುಂಪಿಗೆ ಸೇರಿದವರಾದರೆ ಇಗೋ ನಾನು ಸ್ವಲ್ಪ ಕಟುವಾಗಿಯೆ ಪ್ರತಿಕ್ರಿಯೆಸುತ್ತೇನೆ. ಈ ವಾದದಲ್ಲಿ ಒಂದಿಷ್ಟು ಭ್ರಮೆ ಹಾಗೂ ಅದಕ್ಕಿಂತಲೂ ಸ್ವಲ್ಪ ಹೆಚ್ಚು ಅಧೈರ್ಯ-ಅಂಜಿಕೆ ಸೇರಿಕೊಂಡಿದೆ. ಮೊದಲನೆಯದಾಗಿ ಕೆಲಸಕ್ಕೆ ಹೋಗುವಾಗ ನಾನು ಹೀಗೆ ಕಾಣಬೇಕು, ಕಾಣುತ್ತೇನೆ ಅನ್ನುವ ಚಿತ್ರವೊಂದು ನಿಮ್ಮ ತಲೆಯಲ್ಲಿದೆ. ಅದು ನೀವೇ ನಿಮ್ಮ ಜೀವನದ ಯಾವದೋ ಕಾಲಘಟ್ಟದಲ್ಲಿ ಮಾಡಿಕೊಂಡಿದ್ದೇ ಹೊರತು ಯಾವ ಸರ್ವಾಧಿಕಾರಿಯೂ ನಿಮ್ಮ ಮೇಲೆ ಹೇರಿದ್ದಲ್ಲ. ಅಥವಾ ಇನ್ನೂ ಹೆಚ್ಚು ನಿಖರವಾಗಿ ಹೇಳಬೇಕೆಂದರೆ ಈ ಚಿತ್ರವು, ಈ ನಿಮ್ಮ ಪಾಲಿಯೆಸ್ಟರ್ ಪ್ಯಾಂಟು ಶರ್ಟು ಪದ್ಧತಿಯು ನೀವು ಪ್ರಶ್ನಿಸದೆ ಒಪ್ಪಿಕೊಂಡಿರುವ ಹಾಗೂ ಕೇವಲ ಅದೊಂದೇ ಸರಿಯಾದುದು ಎಂದು ತಿಳಿದಿರುವ ಈ ಪಾಶ್ಚಿಮಾತ್ಯ ವೇಷಭೂಷಣದ ಪರಿಕಲ್ಪನೆಯಿದೆಯಲ್ಲ ಅದರಿಂದ ಹುಟ್ಟಿಕೊಂಡಿರುವುದು. ಆದರೆ ಸಮಸ್ಯೆಯಿರುವುದು ನಿಜವಾಗಿಯೂ ಇಲ್ಲಿ ಅಲ್ಲ. ನೀವು ಬಾಲ್ಯವನ್ನು ಹಾಗೂ ಅದರ ಜೊತೆ ಗಿಡ್ಡ ಚಡ್ಡಿಯನ್ನು ಹಿಂದೆ ಬಿಟ್ಟು ದೊಡ್ಡವರಾಗುತ್ತಿದ್ದಾಗ ನಿಮಗೇ ಗೊತ್ತಿಲ್ಲದೆಯೇ ಪ್ಯಾಂಟಿನೊಳಗೆ ಸೇರಿಕೊಂಡಿರಿ; ಅದೂ ಪಾಲಿಯೆಸ್ಟರ್ ಪ್ಯಾಂಟಿನೊಳಗೆ. ಸರಿ ಆಗ ಈ ಪಾಲಿಯೆಸ್ಟರ್ ಪ್ಯಾಂಟಿನ ಒಳಗೆ ತುಂಬಿಕೊಂಡಿರುವ ಸಾಂಸ್ಕೃತಿಕ ಆರ್ಥಿಕ ರಾಜಕಾರಣ ನಿಮಗೆ ತಿಳಿದಿರಲಿಲ್ಲ. ಆದರೆ ಈಗ? ನಿಜವಾದ ಸವಾಲು ಇರುವುದೇ ಈಗ. ಈಗ ನಿಮಗೆ ಪಾಲಿಯೆಸ್ಟರ್ ಮತ್ತು ಖಾದಿ ಇವೆರಡೂ ಕೇವಲ ಎರಡು ಬಗೆಯ ಬಟ್ಟೆಗಳಲ್ಲ; ಎರಡು ವಿಭಿನ್ನ ಜೀವನದ ದೃಷ್ಟಿಕೋನಗಳು ಎಂಬುದು ಸ್ವಲ್ಪವಾದರೂ ತಿಳಿದಿದೆ. ಖಾದಿಯ ಹಲವಾರು ಆಯಾಮಗಳ, ಅದರಲ್ಲೂ ಬಹುಮುಖ್ಯವಾಗಿ ಅದರ ಪರಿಸರದ ಆಯಾಮದ ಬಗ್ಗೆ ಪರಿಚಯವಾಗಿದೆ. ಹಲವು ಕಾರಣಗಳಿಗಾಗಿ ಖಾದಿ ಹೆಚ್ಚು ಉತ್ತಮ ಎಂಬುದು ಗೊತ್ತಾಗಿದೆ. ಅಂದ ಬಳಿಕ ಈಗ ನೀವು ಈ ಬದಲಾವಣೆಗೆ ತಯಾರಿದ್ದೀರಾ ? ಅಂದು, ಹಲವು ವರ್ಷಗಳ ಹಿಂದೆ ಯಾವಾವದೋ ಕಾರಣಗಳಿಗಾಗಿ ನಿಮಗಾಗಿಯೇ ಒಂದು

ಒಳ್ಳೆಯ ಚಿತ್ರ ರೂಪಿಸಿಕೊಂಡಿದ್ದಿರಿ. ಆದರೆ ಇಂದು, ಇವತ್ತಿನ ಬೆಳಕಿನಲ್ಲಿ ಅದು ಅಷ್ಟು ಒಳ್ಳೆಯದಲ್ಲ ಎಂಬುದು ನಿಮಗೆ ಗೊತ್ತಾಗಿದೆ. ಇದನ್ನೇ ನಾನು ಭ್ರಮೆ ಅಂದಿದ್ದು. ಈಗ ಈ ಭ್ರಮೆಯನ್ನು ಕಿತ್ತುಹಾಕಿ ಅದರ ಜಾಗದಲ್ಲಿ ಹೆಚ್ಚು ಒಳ್ಳೆಯದಾದದ್ದನ್ನು ತುಂಬುವ ಧೈರ್ಯ ನಿಮಗಿದೆಯೇ ? ಅಥವಾ ಮತ್ತೆ ರೂಢಿ, ಅಭ್ಯಾಸಬಲ, 'ಹೋಗಲಿ ಬಿಡು, ಸದ್ಯ ಬೇಡ ಮುಂದೆ ನೋಡೋಣ' ಮುಂತಾದ ಸವಕಲು ಶಬ್ದಗಳ ಹಿಂದೆ ನಿಮ್ಮ ಅಧೈರ್ಯವನ್ನೋ ಅಂಜಿಕೆಯನ್ನೋ ಮುಚ್ಚಿಡಲು ಪ್ರಯತ್ನಿಸುತ್ತೀರಾ ? ಈ ಭ್ರಮೆಗೆ ಈ ಮನೋದಾಸ್ಯಕ್ಕೆ ಇನ್ನೊಂದು ಮುಖವೂ ಇದೆ. ಅದು ಇಸ್ತ್ರಿಯ ಗರಿ ಗರಿ ಮಡಿಕೆಯ ಭ್ರಮೆ. ಸಾವಿರಾರು ವರ್ಶಗಳ ಉದಾತ್ತ ಚಿಂತನೆಯ ಇತಿಹಾಸವಿರುವ ನಮ್ಮ ಸಮಾಜದಲ್ಲಿ ಬಹಳ ಮೊದಲಿನಿಂದಲೂ ವ್ಯಕ್ತಿಯ ಅಂತರಂಗ ಮತ್ತು ಬಹಿರಂಗ ಶುದ್ಧಿಗೆ ಮಹತ್ವವನ್ನು ನೀಡಲಾಗಿದೆ. ಒಬ್ಬ ಸುಸಂಸ್ಕೃತ ವ್ಯಕ್ತಿಯ ಬಹಿರಂಗ ಶುದ್ಧಿಯ ಒಂದು ಲಕ್ಶಣವೆಂದರೆ ಸ್ನಾನ ಮಾಡಿ ಶುಚಿರ್ಭೂತರಾಗಿ 'ಮಡಿ' ಬಟ್ಟೆ ಧರಿಸುವದು. ಮಡಿಬಟ್ಟೆಯೆಂದರೆ ಒಗೆದು ಸ್ವಚ್ಛ ಮಾಡಿದ ಬಟ್ಟೆ. ಬ್ರಿಟಿಶರ ಆಳ್ವಿಕೆಯಲ್ಲಿ ಅವರ ಪ್ಯಾಂಟು ಕೋಟು ಅನುಕರಿಸಲು ಪ್ರಾರಂಭಿಸಿದಾಗ ಇಸ್ತ್ರಿಯ ಗರಿಗರಿ ನಮ್ಮಲ್ಲಿ ಬಂದಿದ್ದು. ಈಗ ನಮ್ಮಲ್ಲಿ ಪ್ರಚಲಿತವಿರುವ ಮಾನಸಿಕತೆಯೆಂದರೆ ಗರಿಗರಿ ಇಸ್ತ್ರಿ ಬಟ್ಟೆ ಧರಿಸಿದವರು ಸುಸಂಸ್ಕೃತರು. ಈ ಇಸ್ತ್ರಿಯಿಲ್ಲದ ಬಟ್ಟೆ ಹಾಕಿಕೊಂಡವರು ಹಳ್ಳಿಗರು, ಅನಾಗರಿಕರು ! ಇದು ತಪ್ಪು ಎಂಬುದು ಎಲ್ಲರಿಗೂ ಗೊತ್ತು. ಆದರೂ, ಇದು ಭಾರಿ ಚಲಾವಣೆಯಲ್ಲಿರುವದಂತೂ ನಿಜ. ಇದರಲ್ಲಿ ಇನ್ನೊಂದು ಒಳಸುಳಿಯೂ ಇದೆ. ನೀವು ಜೀನ್ಸ್ ಮತ್ತು ಟೀ ಶರ್ಟ್ ಧರಿಸಿದರೆ ಅವಕ್ಕೆ ಇಸ್ತ್ರಿ ಬೇಕಾಗಿಲ್ಲ. ಅದು ಅನಾಗರಿಕತೆಯೂ ಅಲ್ಲ. ಹಾಸ್ಯಾಸ್ಪದವೂ ಅಲ್ಲ. ಅದು ಮಾಡರ್ನ್ ! ಆದರೆ ನೀವು ಖಾದಿ ಪ್ಯಾಂಟ್ ಧರಿಸಿ ಅದು ಹೀಗೆ ಕೊಳವೆಯಂತೆ ಗುಂಡಾಗಿದ್ದರೆ ಅದು ಮಾತ್ರ ತೀರ ಅಸಹ್ಯ! ನಾವು ನಿಜವಾಗಿಯೂ ಸ್ವತಂತ್ರರೇ ? ಬ್ರಿಟಿಶರು ನಮ್ಮ ಮೆದುಳುಗಳಲ್ಲಿ ಇನ್ನೂ ಇದ್ದಾರೆ ಅಲ್ಲವೇ ?

ನನಗೆ ದೇಶಪ್ರೇಮ ಇದೆಯೆಂದಾದರೆ ನಾನು ದೇಶಕ್ಕಾಗಿ ಏನಾದರೂ ಮಾಡಬೇಕು. ದೇಶಕ್ಕಾಗಿ ಏನಾದರೂ ಎಂದರೆ ದೇಶವಾಸಿಗಳ ಸಲುವಾಗಿ ಏನಾದರೂ. ನನ್ನ ಜೀವನವನ್ನು ಸರಿಯಾಗಿ ಬಾಳುತ್ತಲೇ ಅದರ ಮೂಲಕವೇ ನನ್ನ ದೇಶವಾಸಿಗಳಿಗೂ ಸಹಾಯ ಮಾಡುವಂತಿದ್ದರೆ ಅದು ಬಹಳ ಒಳ್ಳೆಯದು ಅಲ್ಲವೇ ? ಇದಕ್ಕೆ ಖಾದಿ ಒಂದು ಉತ್ತಮ ನಿದರ್ಶನ. ನಮ್ಮ ಶಿಕ್ಷಣ, ಉದ್ಯೋಗ, ಅಂತಸ್ತು, ಆದಾಯ ಏನೇ ಇರಲಿ ಮುಂದಿನ ಯಾವದಾದರೊಂದು ಅಥವಾ ಅನೇಕ ಕಾರಣಗಳಿಗಾಗಿ ಖಾದಿಯನ್ನು ಆಯ್ದುಕೊಂಡು ಆ ಮೂಲಕ ನಮ್ಮ ದೇಶಪ್ರೇಮವನ್ನು ಕ್ರಿಯಾತ್ಮಕವಾಗಿ ವ್ಯಕ್ತಪಡಿಸಬಹುದು, ಆಚರಣೆಯಲ್ಲಿ ತರಬಹುದು. ಇದರಿಂದಾಗಿ ಬಡ ಗ್ರಾಮೀಣ ಮಹಿಳೆಯ ಆರ್ಥಿಕ ಸ್ವಾವಲಂಬನೆಗಾಗಿ, ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗಗಳು ಹೆಚ್ಚಿ ನಗರೀಕರಣದ ಸಮಸ್ಯೆ ಕಡಿಮೆಯಾಗಲು, ಹತ್ತಿ ಬೆಳೆಗಾರರಿಗೆ ಹಾಗೂ ಆ ಮೂಲಕ ಭಾರತದ ಕೃಷಿಗೆ ಕ್ರಶಿಕಾರ್ಮಿಕರಿಗೆ ನ್ಯಾಯಯುತ ಆದಾಯ ದೊರಕಲು, ಬೃಹತ್ ಬಹುರಾಷ್ಟ್ರೀಯ ಕಂಪನಿಗಳ ಪ್ರಾಬಲ್ಯ ಕಡಿಮೆ ಮಾಡಲು, ಅಮೆರಿಕಾ ಸಂಯುಕ್ತ ಸಂಸ್ಥಾನದಂತಹ ದೇಶಗಳ ಸಾಮ್ರಾಜ್ಯಶಾಹಿ ನುಂಗುಬಾಕತನವನ್ನು ಕಡಿಮೆಮಾಡಲು, ವೈಯಕ್ತಿಕ ಆರೋಗ್ಯ ಸಮಾಧಾನಗಳಿಗಾಗಿ, ಪರಿಸರ ನೈರ್ಮಲ್ಯ ಕಲ್ಯಾಣಕ್ಕಾಗಿ, ನೆರವಾದಂತಾಗುತ್ತದೆ. ಈ ನಿಟ್ಟಿನಲ್ಲಿ ನಾವು ಧಾರವಾಡದಲ್ಲಿ ಒಂದು ಪುಟ್ಟ ಪ್ರಯೋಗವನ್ನು ಮಾಡಿದ್ದೇವೆ. ಇಲ್ಲಿ ಬಾಲಬಳಗ ಎಂಬ ಒಂದು ಶಾಲೆಯಿದೆ. ನಾಲ್ಕು ವರ್ಷಗಳ ಹಿಂದೆ ನಾವು ಈ ಶಾಲೆಯಲ್ಲಿ ಮಕ್ಕಳು ಮತ್ತು ಶಿಕ್ಷಕರು ಪ್ರತಿ ಶನಿವಾರ ಖಾದಿ ಧರಿಸಿಕೊಂಡು ಬರಬೇಕು; ಕಡ್ಡಾಯವಾಗಿ ಅಲ್ಲ, ಸ್ವಇಚ್ಛೆಯಿಂದ ಎಂಬ ಪರಿಪಾಠ ಪ್ರಾರಂಭಿಸಿದೆವು. ಅಲ್ಲದೆ ಶಾಲೆಯ ದಶಮಾನೋತ್ಸವದ ನೆನಪಿನಲ್ಲಿ ಮಕ್ಕಳಿಗೆ ಖಾದಿ ಜಾಕೆಟ್ ಕಾಣಿಕೆಯಾಗಿ ಕೊಟ್ಟೆವು. ಈಗ ಮಕ್ಕಳು ಮತ್ತು ಶಿಕ್ಷಕರು ಶನಿವಾರವಷ್ಟೇ ಅಲ್ಲ ಬೇರೆ ದಿನಗಳಂದೂ ಖಾದಿ ಧರಿಸಿಕೊಂಡು ಬರುತ್ತಾರೆ. (ಈ ಶಾಲೆಯಲ್ಲಿ ಕಡ್ಡಾಯದ ಸಮವಸ್ತ್ರ ಎಂಬುದೇ ಇಲ್ಲ.) ಅಷ್ಟೇ ಅಲ್ಲ, ತಮ್ಮ ಮಕ್ಕಳಿಂದ ಸ್ಫೂರ್ತಿ ಪಡೆದ ಅನೇಕ ಪಾಲಕರೂ ಈಗ ಖಾದಿ ಧರಿಸುತ್ತಿದ್ದಾರೆ. ಹೆಚ್ಚುತ್ತಿರುವ ಹೊಟ್ಟೆಬಾಕ ಸಂಸ್ಕೃತಿ, ಅದರ ಫಲವಾಗಿ ಪರಿಸರನಾಶ ಮತ್ತು ಭೂಗೋಳದ ಕಾಯುವಿಕೆ ಇವೆಲ್ಲವನ್ನು ಗಮನಿಸಿದಾಗ ಇಂದು ಸರಳತೆಯೇ ಒಂದು ಉದಾತ್ತ ಮೌಲ್ಯವಾಗಬೇಕಿದೆ. ಈಗ ಧಾರವಾಡದ ಎಸ್‌ಡಿಎಂ ಇಂಜಿನಿಯರಿಂಗ್ ಕಾಲೇಜು ಹಾಗೂ ವಿಶ್ವವಿದ್ಯಾಲಯ ಕಾನೂನು ವಿದ್ಯಾಲಯಗಳಲ್ಲೂ, ಧಾರವಾಡದ ಕರ್ನಾಟಕ ವಿಕಾಸ ಗ್ರಾಮೀಣ ಬ್ಯಾಂಕ್ ಮತ್ತು ಬ್ಯಾಂಕ್ ಆಫ್ ಬರೋಡಾಗಳಲ್ಲೂ ಈ ವಾರಕ್ಕೊಮ್ಮೆ ಖಾದಿ ಪರಿಪಾಠ ಪ್ರಾರಂಭವಾಗಿದೆ. ಇಷ್ಟೆಲ್ಲ ಓದಿದ ಬಳಿಕವೂ ನಿಮ್ಮ ಮನಸ್ಸಿನ ಬತ್ತಳಿಕೆಯಲ್ಲಿ ಇನ್ನೂ ಒಂದು ಪ್ರಶ್ನೆಯ ಬಾಣ ಉಳಿದಿದ್ದು ಅದನ್ನು ನನ್ನತ್ತ ಗುರಿಯನ್ನಿಟ್ಟು ಹೊಡೆಯಲು ನೀವು ಸನ್ನದ್ಧರಾಗುತ್ತಿದ್ದೀರಿ ಎಂಬುದು ನನಗೆ ಗೊತ್ತು. ''ಮಾರಾಯಾ, ನೀನು ಹೇಳಿದ್ದೆಲ್ಲ ನನಗೆ ಒಪ್ಪಿಗೆಯಾಯಿತು. ನಾನು ನಾಳೆಯಿಂದಲೆ ಖಾದಿ ಧರಿಸಲು ಸಿದ್ಧ. ಆದರೆ ನನ್ನೊಬ್ಬನಿಂದ ಯಾವ ಮಹಾ ಬದಲಾವಣೆ ಸಾಧ್ಯ ?'' ಇದುವೇ ನಮ್ಮ ಪ್ರಶ್ನೆಯಲ್ಲವೇ ? ಕವಿ ಸಿದ್ಧಲಿಂಗಯ್ಯ ಹೋರಾಟದ ಸಾಗರಕ್ಕೆ ಸಾವಿರಾರು ನದಿಗಳು ಎಂದು ಹಾಡಿದ್ದು ಗೊತ್ತಿಲ್ಲವೆ ? ನಾವು ಪ್ರತಿಯೊಬ್ಬರೂ ನದಿಗಳಾಗಲಿಕ್ಕಿಲ್ಲ. ತೊರೆ ಹಳ್ಳ ಆಗಬಹುದು. ಕೊನೆಗೆ ಅದರೊಳಗಿನ ತೆರೆಯಾದರೂ ಆಗಬಹುದಲ್ಲ. ಹೇಗೆ ನಾವು ಕಳೆದ ನೂರು ನೂರೈವತ್ತು ವರ್ಷಗಳಲ್ಲಿ ಒಬ್ಬೊಬ್ಬರಾಗಿಯೇ ಪಾಶ್ಚಿಮಾತ್ಯ ಜೀವನಶೈಲಿ ಅನುಕರಿಸಿದ್ದೇವೆಯೋ ಹಾಗೆಯೆ ಇಂದು ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕು ಅರವತ್ತು ವರ್ಷ



ಆಗಿರುವ ಸಂದರ್ಭದಲ್ಲಿ ನಮ್ಮ ಆರ್ಥಿಕ ಸ್ವಾಯತ್ತತೆಯನ್ನು ಕಾಪಾಡಿಕೊಳ್ಳುವ ಪ್ರಯತ್ನದಲ್ಲಿ ನಾವು ಪ್ರತಿಯೊಬ್ಬರೂ ಮೌನವಾಗಿ ಮಾವಿನ ಗಿಡದಲ್ಲಿ ಅರಳುವ ಹೂವುಗಳಂತೆ ಹೋರಾಟದ ರೂವಾರಿಗಳಾಗಬೇಕಾಗಿದೆ. ಈ ಹೋರಾಟಕ್ಕೆ ಖಾದಿ ಒಂದು ಸಂಕೇತವಷ್ಟೇ. ಅದೇ ಕಾಲಕ್ಕೆ ಖಾದಿ ನಮ್ಮ ಬದುಕು ಎಷ್ಟು ಭಾರತೀಯ, ನಮ್ಮ ಬದುಕು ಎಷ್ಟು ವೈಜ್ಞಾನಿಕ, ನಮ್ಮ ಬದುಕು ಎಷ್ಟು ಸಮಾಜಮುಖಿ, ನಮ್ಮ ಬದುಕು ಎಷ್ಟು ಪರಿಸರಸ್ನೇಹಿ ಎಂಬುದರ ಸಂಕೇತವೂ ಹೌದು. ನಮ್ಮ ಬದುಕು ಅಂದರೆ ನಾನು ಬದುಕಿನಲ್ಲಿ ಉಡುವ ವಸ್ತ್ರ ಒಂದೇ ಅಲ್ಲ, ನಾವು ಉಣ್ಣುವ ಅನ್ನ, ವಾಸಿಸುವ ಮನೆ ಇದೆಲ್ಲ ಬಂತು. ಆದರೆ ನೋಡಿ, ದಿನನಿತ್ಯದ ನಮ್ಮ ಓಡಾಟದಲ್ಲಿ ನಾವು ನಮ್ಮ ಊಟದ ತಾಟು ಅಥವಾ ಮನೆಯನ್ನು ತೆಗೆದುಕೊಂಡು ಹೋಗುವದು ಸ್ವಲ್ಪ ಕಷ್ಟ. ಆದರೆ ನಾವು ಪ್ರತಿಯೊಬ್ಬರೂ ಅನಿವಾರ್ಯವಾಗಿ ಬಟ್ಟೆಗಳನ್ನು ತೊಟ್ಟುಕೊಂಡೇ ಓಡಾಡುತ್ತೇವೆ. ಈ ಅನಿವಾರ್ಯತೆಯೊಳಗೇ ನಾವು ಪ್ರಚಂಡ ಶಕ್ತಿಯನ್ನು ತುಂಬಬಹುದು. ಬಾಯಿಯಿಲ್ಲದೆಯೂ ನಮ್ಮ ಬಟ್ಟೆಗಳು ನಮ್ಮ ವ್ಯಕ್ತಿತ್ವಗಳ ಬಗ್ಗೆ, ನಮ್ಮ ವಿಚಾರಧಾರೆಯ ಪ್ರಗತಿಪರ ಮೌಲ್ಯಗಳ ಬಗ್ಗೆ, ನಮ್ಮ ಪರಿಸರಸ್ನೇಹಿ ಜೀವನಶೈಲಿಯ ಬಗ್ಗೆ ಬಹಳಷ್ಟು ಹೇಳಬಲ್ಲವು ; ಅಥವಾ ಅವು ಹೇಳುವ ಹಾಗೆ ನಾವು ಮಾಡಬಹುದು. ನಾಳೆ ನಾನು ಧಾರವಾಡದಿಂದ ಅಥಣಿಗೆ ಹೋಗುವಾಗ ಬಸ್ಸಿನಲ್ಲಿ ನೀವು ಬಂದು ನನ್ನ ಬಾಜು ಸೀಟಿನಲ್ಲಿ ಕೂಡುತ್ತೀರಿ. ನೀವು ಖಾದಿಧಾರಿಯಾಗಿದ್ದಾದರೆ ನಮ್ಮಿಬ್ಬರ ನಡುವೆ ಒಂದೇ ಒಂದು ಮಾತು ಇಲ್ಲದೆಯೂ ನಾವು ನಮ್ಮ ಎದೆಯಾಳದ ಮಾನವೀಯ ಆಶಯಗಳಿಂದಾಗಿ, ಪರಿಸರಸ್ನೇಹಿ ಕನಸುಗಳಿಂದಾಗಿ ಕ್ಷಣಾರ್ಧದಲ್ಲಿ ಸಂಗಾತಿಗಳಾಗಿಬಿಡುತ್ತೇವೆ.

ಇದರಲ್ಲಿಯೂ ಮೋಸದ ಸಮಸ್ಯೆ ಉದ್ಭವಿಸುವದಿಲ್ಲವೇ ? ಓಹೊ, ಅವಶ್ಯವಾಗಿ, ಎಲ್ಲ ಸಾಮಾಜಿಕ ಸಂಗತಿಗಳಲ್ಲಿ ಹೇಗೋ ಹಾಗೆಯೇ ಇಲ್ಲಿಯೂ ಮೋಸ, ತೋರಿಕೆ, ಭ್ರಷ್ಟತನ ಎಲ್ಲ ಶಕ್ಯವಿದೆ. ಸ್ವಾತಂತ್ರ್ಯೋತ್ತರದ ನಮ್ಮ ರಾಜಕಾರಣಿಗಳು ಅದನ್ನು ಖಾದಿಗೆ ಅತ್ಯುತ್ತಮವಾಗಿ ಮಾಡಿ ತೋರಿಸಿದ್ದಾರೆ. ಆದರೆ ಈಗ ಮತ್ತೆ ಖಾದಿಗೆ ಅದರ ಉದಾತ್ತ ಮೌಲ್ಯ, ಆಶಯಗಳನ್ನು ಮರುಪೂರಣ ಮಾಡಿ ಅದನ್ನು ಶ್ರೀಸಾಮಾನ್ಯರ ಆಸ್ತಿ ಮತ್ತು ಅಸ್ತ್ರವನ್ನಾಗಿಸುವ ಜವಾಬ್ದಾರಿ ನಮ್ಮ ಮೇಲಿದೆ. ಆದುದರಿಂದ ಈಗ ನೀವು ನನಗೆ ಹೇಳಬೇಕಾದುದು ಇಷ್ಟೇ: ನಾಳೆ ನೀವು ಧಾರವಾಡ – ಅಥಣಿ ಬಸ್ಸಿನಲ್ಲಿರುತ್ತೀರೊ ಅಥವಾ ಅಥಣಿ – ಧಾರವಾಡ ಬಸ್ಸಿನಲ್ಲಿರುತ್ತೀರೋ ? ಯಾವ ಬಸ್ಸಿನಲ್ಲಾದರೂ ಸರಿ, ನಾನೂ ನಿಮ್ಮ ಜೊತೆಯೇ ಪ್ರಯಾಣ ಮಾಡುತ್ತೇನೆ, ಖಾದಿ ಧರಿಸಿಕೊಂಡು !

*ದಯವಿಟ್ಟು ಗಮನಿಸಿ : ಈ ಲೇಖನದಲ್ಲಿ ಪ್ರಜ್ಞಾಪೂರ್ವಕವಾಗಿಯೇ ಅಲ್ಲಲ್ಲಿ ಶಕಾರ, ಜ್ಞ ಮತ್ತು ಋಕಾರಗಳು 'ತಪ್ಪು' ಮಾಡಲಾಗಿದೆ. ನಮ್ಮ ಕನ್ನಡ ಲಿಪಿಯಲ್ಲಿ ಈ ಭೂತದ ಪಳೆಯುಳಿಕೆಗಳು ಯಾಕೆ ಬೇಕು ಎಂಬುದರ ಬಗ್ಗೆ ಅರ್ಥಪೂರ್ಣ ಚರ್ಚೆ ಮುಂದುವರೆಯಲಿ ಎಂಬುದೆ ಇದರ ಹಿಂದಿನ ಆಶಯ.*

**ಸಂಕುಲಜೀವ**
ನಗೆಮಲ್ಲಿಗೆ, ೧೯/೨, ಮಹಿಶಿ ರಸ್ತೆ ಮಾಳಮಡ್ಡಿ ಧಾರವಾಡ - ೫೮೦೦೦೭

# ಸಂಬಂಧ ಸೂಚಿ ಹೆಸರುಗಳು

ಡಾ|| ಅನಿಲ ಕಮತಿ

**ಹೆ**ಸರುಗಳ ಲೋಕ ವಿಚಿತ್ರ, ವಿಶಿಷ್ಟ!

ಹಿಂದಿನ ಕಾಲದಲ್ಲಿ ದೇವರನಾಮಗಳೇ ಮನುಷ್ಯನಿಗೆ ಹೆಸರಾಗುತ್ತಿದ್ದುದು ಹೆಚ್ಚು. ಮೂಲದಲ್ಲಿ ಮನುಷ್ಯ ತನ್ನ ಐಡೆಂಟಿಟಿಗಾಗಿ ಹೆಸರುಗಳನ್ನು ರೂಪಿಸಿದ. ತನಗೊಂದು ಹೆಸರನ್ನಿಟ್ಟುಕೊಂಡ, ಹಾಗೆಯೇ ತನ್ನ ಸುತ್ತಲಿನವರಿಗೂ ಒಂದೊಂದನ್ನು ಕೊಟ್ಟ. ಆಗ ಇಂತಿಂಥದೇ ಇರಬೇಕು, ಅದಕ್ಕೊಂದು ಅರ್ಥವಿರಬೇಕು ಎಂಬ ಕಟ್ಟಳೆಗಳೇನೂ ಇರಲಿಕ್ಕಿಲ್ಲ. ಮೂಲದಲ್ಲಿ ಪಂಚಭೂತಗಳನ್ನೇ ಆರಾಧಿಸಿದ ಈತ ತದನಂತರ ದೇವರುಗಳನ್ನು ಸೃಷ್ಟಿಸಿದ. ಅವರಿಗೊಂದೊಂದು ಕರ್ತವ್ಯವನ್ನು ಹಂಚಿಕೊಟ್ಟ. ಅವರಿಗೂ ಹೆಸರುಗಳನ್ನಿಟ್ಟ. ಅವರವರ ಕರ್ತವ್ಯ, ವೃತ್ತಿವೈಶಿಷ್ಟ್ಯ, ತಂಡಗಳಿಗನುವಾಗಿ ಸಹಸ್ರನಾಮಾವಳಿಯನ್ನೂ ರಚಿಸಿದ. ಇಷ್ಟಕ್ಕೇ ತೃಪ್ತನಾಗದ ಮಾನವ ಅವರೊಳಗೂ ಪಂಗಡಗಳನ್ನು ಹುಟ್ಟು ಹಾಕಿದ. ತಾನೂ ಒಂದು ಪಂಗಡಕ್ಕೆ ಸೇರಿದ. ತನ್ನ ಪಂಗಡದ ದೇವರುಗಳ ಹೆಸರುಗಳನ್ನೇ ಸಾಧ್ಯವಾದಷ್ಟು ತನ್ನ ಮಕ್ಕಳು ಮೊಮ್ಮಕ್ಕಳಿಗೂ, ಪರಿವಾರ ಗಣಕ್ಕೂ ಇರಿಸಿದ. ಹೀಗೆ ಹೆಸರುಗಳಲ್ಲೂ ಭೇದಭಾವವೇ.

ಪರಿವಾರಗಳು ಬೆಳೆದಂತೆ ಕುಟುಂಬದಲ್ಲೇ ಜನ ಹೆಚ್ಚ ತೊಡಗಿತು. ತನ್ನೊಳಗಿನ ಸಂಬಂಧಗಳಿಗೊಂದೊಂದು ನಾಮವಿಡಬೇಕಾದಾಗ ಹೊಸ ಪರಿಭಾಷೆಯೇ ಒಂದು ತಯಾರಾಯಿತು. ಹುಟ್ಟಿದ ಮಗುವನ್ನು ಹಡೆದವರು ತಂದೆತಾಯಿಗಳಾದರು. ಅಪ್ಪ, ಅವ್ವ ಎನಿಸಿಕೊಂಡವರು ಇವರಿಗೆ ಹುಟ್ಟಿದವರು ಮಗನೋ-ಮಗಳೋ ಎಂದೆನಿಸಿದರು. ತಂದೆಯ ಅಣ್ಣ ತಮ್ಮಂದಿರು ಚಿಕ್ಕಪ್ಪ-ದೊಡ್ಡಪ್ಪ, ತಾಯಿಯ ಅಕ್ಕ-ತಂಗಿಯರು ಚಿಕ್ಕಮ್ಮ ದೊಡ್ಡಮ್ಮಗಳಾದರು. ಹಾಗೆಯೇ ಸೋದರಮಾವ-ಸೋದರತ್ತೆ, ಅತ್ತಿಗೆ. ನಾದಿನಿ, ಭಾವ ಹೀಗೆ ಏನೇನೋ – ಹಿರಿಯರನ್ನು ಹೆಸರಿಟ್ಟು ಕರೆಯುವುದು ಅಸಭ್ಯತೆ ಎನಿಸಿದ್ದೂ ಅಕ್ಕ, ಅಣ್ಣ, ತಾಯಿ, ತಾತಗಳು ಹುಟ್ಟಿಕೊಳ್ಳಲು ಕಾರಣವಾಯಿತು.

ಚೋದ್ಯತೆಯ ವಿಷಯವೆಂದರೆ, ಈ ಸಂಬಂಧ ಸೂಚಿ ಪದಗಳೇ ಮುಂದೊಂದು ದಿನ ಹೆಸರುಗಳಾಗಿ ಮಾರ್ಪಟ್ಟಿದ್ದು, ಅಲ್ಲದೇ ಈ ಸಂಬಂಧ ಸೂಚಿ ಪದಗಳೇ ಒಂದಕ್ಕೊಂದು ಚಿತ್ರ-ವಿಚಿತ್ರ ರೀತಿಯಲ್ಲಿ ತಳಕುಹಾಕಿಕೊಂಡು ಕಲಸು ಮೇಲೋಗರವಾಗಿ ವಿಚಿತ್ರಾರ್ಥಗಳಾಗಿ ಪರಿವರ್ತಿತಹೊಂದಿದ್ದು.

ಉದಾಹರಣೆಗೆ, ಅಕ್ಕಳೇ ಬೇರೆ, ತಾಯಿಯೇ ಬೇರೆ ತಾನೆ? ಆದರೆ ಇವರಿಬ್ಬರೂ ಸೇರಿ ಅಕ್ಕಾತಾಯಿ ಪದವಾಗಿದೆ. ಮೊದಲಿಗೆ ಯಾವುದೋ ಒಂದು ಕುಟುಂಬದಲ್ಲಿ ಹುಟ್ಟಿದ ಹಿರಿಯಕ್ಕಳೇ ತಾಯಿಯನ್ನು ಕಳೆದುಕೊಂಡಾಗ, ಇನ್ನುಳಿದ ಅವಳ ಸೋದರ ಸೋದರಿಯರಿಗೆ ಈ ಅಕ್ಕಳೇ ತಾಯಿಯಾಗುವ ಪ್ರಸಂಗ ಎದುರಾದಾಗ ಈ ಅಕ್ಕತಾಯಿ ಹುಟ್ಟಿಕೊಂಡಳೇನೊ? ಆದರೆ ಇದೇ ರೀತಿ ತಾಯಿ + ಅಕ್ಕ = ತಾಯಕ್ಕಳನ್ನೋ ಅಥವಾ ತಂಗಿ + ಅವ್ವ = ತಂಗವ್ವಳನ್ನು ಅದೆಂತು ವಿವರಿಸುವುದು? ಅಕ್ಕ ಅವ್ವಳಾದ ಪ್ರಸಂಗದಲ್ಲಿ ಅಕ್ಕವ್ವಳಾಗಿರಬಹುದು. ಆದರೆ ಅವ್ವ ಅಕ್ಕಳಾಗುವುದು ಅಪರೂಪ ತಾನೆ? ಹಾಗಾದರೆ ಅವ್ವಕ್ಕಳೆಂತು ಬಂದಳು? ಇದಕ್ಕೆ ನೀಡಬಹುದಾದ ಒಂದೇ ವಿವರಣೆಯೆಂದರೆ ತಾಯಿ ಅಥವಾ ಅಕ್ಕಳಷ್ಟೇ ಆತ್ಮೀಯಳಾದಾಗ ಅವ್ವಕ್ಕ, ತಾಯಕ್ಕಗಳು ಉದಾಹರಣೆ ಆಗಬಹುದು. ಇದಕ್ಕೆ ಇನ್ನೂ ಒಂದು ವಿವರಣೆ ನೀಡಬಹುದೇನೋ!

ನನಗೆ ದಾಯಾದಿ ದೂರದ ಸಂಬಂಧದಲ್ಲಿ ಒಂದು ಬದಿಯಿಂದ ಚಿಕ್ಕಮ್ಮಳೊಬ್ಬಳಿದ್ದಳು. ಹೆಸರು ರತ್ನ. ನನಗಿಂತ ಎಂಟ್ಹತ್ತು ವರ್ಷ ದೊಡ್ಡವಳು. ನಾನು ಪ್ರಾಥಮಿಕ ಒಂದು - ಎರಡನೆಯ ವರ್ಗದಲ್ಲಿದ್ದಾಗ, ಹಾಯಸ್ಕೂಲ ಓದುತ್ತಿದ್ದ ಅವಳು ನಮ್ಮ ಮನೆಯಲ್ಲೇ ಇದ್ದರು. ನಮ್ಮ ತಾಯಿ ಅವಳಿಗೆ ನಾವೆಲ್ಲ ಚಿಕ್ಕಮ್ಮನೆಂದೋ, ಅಬಚಿ ಎಂದೋ ಕರೆಯಬೇಕೆಂದು ಆದೇಶಿಸಿದರೆ, ಅವಳದೊಂದೇ ಹಟ: ನಾವೆಲ್ಲ ಆಕೆಗೆ ಅಕ್ಕನೆಂದೇ ಕರೆಯಬೇಕು ಎಂದು. ಅಷ್ಟು ಚಿಕ್ಕವಯಸ್ಸಿಗೆ ಚಿಕ್ಕಮ್ಮಳೆನ್ನಿಸಿಕೊಳ್ಳಲು ಅವಳಿಗೇನೋ ಇರಿಸು ಮುರಸಿರಬೇಕು. ಹೀಗಾಗಿ ಇಂದಿನವರೆಗೂ ಅವಳೆಮಗೆ ಪ್ರೀತಿಯ ರತ್ನಕ್ಕಳೇ. ಇದಕ್ಕೂ ಚೋದ್ಯದ ವಿಷಯವೆಂದರೆ ನನ್ನ ಮಕ್ಕಳಿಂದಲೂ ಮೊದಮೊದಲಿಗೆ ಅಜ್ಜಿ, ಅಜ್ಜಿ ಎಂದು ಕರೆಸಿಕೊಳ್ಳಲು ಕೊಸರಾಟ. ಕೊನೆಗೆ ಅವಳಿಗೇ ಮೊಮ್ಮಕ್ಕಳಾದ ಮೇಲೆ 'ರತ್ನಾಯಿ' ಎಂದಾಗಲೂ ತೆಪ್ಪಗಾದಳೆನ್ನಿ. ಹೀಗೆ ನಮ್ಮ ಮನೆ ಪಕ್ಕದ ಗೃಹಿಣಿಗೆ ತನ್ನ ಹರೆಯದ ಬಗ್ಗೆ ತುಂಬು ಅಭಿಮಾನ. ಮಗನ ಮದುವೆಯಾಗಿ ಸೊಸೆ ಮನೆಗೆ ಬಂದರೂ, ಅವಳು ಅತ್ತೆಯೆಂದು ಕರೆಯದೇ ತನ್ನನ್ನು ಅಕ್ಕಳೆಂದೇ ಕರೆಯಬೇಕೆಂದು ಅದೆಷ್ಟೋ ವರುಷ ಕಟ್ಟಳೆ ವಿಧಿಸಿದ್ದಳು. ಮನುಷ್ಯನಿಗೆ ಅದೂ ಮಹಿಳೆಯರಿಗೆ ತಾವಿನ್ನೂ ಚಿಕ್ಕವರೆಂದು ಹೇಳಿಕೊಳ್ಳುವ ಚಪಲವಿರುವುದು ಜನಜನಿತವೇ ತಾನೆ?

ಆದರೆ, ಇಂಥದೇ ಆಧಾರದ ಮೇಲೆ ತಾಯಕ್ಕ, ತಂಗವ್ವ, ಅವ್ವಕ್ಕ ಇವರನ್ನು ತಳಕುಹಾಕಿ ವಿವರಣೆ ನೀಡುವುದು ಕಠಿಣವಾದೀತು. ಯಾಕೆಂದರೆ ಯಾವುದೇ ವಯಸ್ಸಿನ ಹೆಣ್ಣು ತಾಯ್ತನವನ್ನು ಅತ್ಯಂತ ಪುಳಕಿತಳಾಗಿ ಅಸ್ವಾದಿಸುತ್ತಾಳೆ. ತನ್ನ ಮಗು ಅಮ್ಮ, ಅವ್ವ ಎಂದು ಎಂದಿಗೆ ತುಟಿಬಿರಿದು ತೊದಲೀತೋ ಎಂದು ಕಾತರಿಸಿ ಕಾಯ್ದುಕೊಡುತ್ತಾಳೆ. ಹಾಗೊಂದು ಕ್ಷಣ ಅವಳು ಅನುಭವಿಸುವ ರೋಮಾಂಚನ ವರ್ಣನಾತೀತ. ಕಳ್ಳಗರ್ಭ ಹೆತ್ತವರು ಮಾತ್ರ ಹೀಗೆ ಅದೂ ಬಹಿರಂಗದಲ್ಲಿ ಕರೆಸಿಕೊಳ್ಳಲು ಹಿಚಕಿಚಿಸಿಯಾರು.

ಇದೇ ಮಾತು ಅಕ್ಕಮ್ಮ, ತಂಗೆಮ್ಮ, ಅಮ್ಮಕ್ಕಗಳಿಗೂ ಅನ್ವಯಿಸುವುದೇನೋ?



ಅಕ್ಕಳೇ ಬೇರೆ, ತಾಯಿಯೇ ಬೇರೆ ತಾನೆ? ಆದರೆ ಇವರಿಬ್ಬರೂ ಸೇರಿ ಅಕ್ಕಾತಾಯಿ ಪದವಾಗಿದೆ. ಮೊದಲಿಗೆ ಯಾವುದೋ ಒಂದು ಕುಟುಂಬದಲ್ಲಿ ಹುಟ್ಟಿದ ಹಿರಿಯಕ್ಕಳೇ ತಾಯಿಯನ್ನು ಕಳೆದುಕೊಂಡಾಗ, ಇನ್ನುಳಿದ ಅವಳ ಸೋದರ ಸೋದರಿಯರಿಗೆ ಈ ಅಕ್ಕಳೇ ತಾಯಿಯಾಗುವ ಪ್ರಸಂಗ ಎದುರಾದಾಗ ಈ ಅಕ್ಕತಾಯಿ ಹುಟ್ಟಿಕೊಂಡಳೇನೋ?

ಇನ್ನು ಇನ್ನೊಂದು ವಿಚಿತ್ರವೆನ್ನಿಸುವ ಹೆಸರು ತಾಯಮ್ಮ. ಶಿಷ್ಟ ಕನ್ನಡದಲ್ಲಿ ತಾಯಿ ಮತ್ತು ಅಮ್ಮ ತತ್ಸಮಾನ ಪದಗಳು. ಆದ್ದರಿಂದ ಒಂದೇ ಅರ್ಥದ ಎರಡು ಸಂಬಂಧ ಸೂಚಿ ಪದಗಳನ್ನೂ ಕೂಡಿ ಕರೆಯುವುದಾಗಲಿ, ಹೆಸರನ್ನಾಗಿ ಉಪಯೋಗಿಸುವುದಾಗಲಿ ವಿಚಿತ್ರವೇ ತಾನೆ ? ಅಷ್ಟೇಕೆ, ತಾಯವ್ವಗಳೂ ಇದ್ದಾರೆ.

ಇಂಥದೇ ಸ್ಥಿತಿ ಪುರುಷರ ಹೆಸರುಗಳಲ್ಲೂ ಇದೆ.

ತಂದೆಯ ಸ್ಥಾನದಲ್ಲಿ ನಿಂತ ಅಣ್ಣನನ್ನು ಅಣ್ಣಪ್ಪ ಎಂದು ಕರೆದೆವೆಂದುಕೊಳ್ಳೋಣ : ಹಾಗಾದರೆ, ಅಪ್ಪಣ್ಣನನ್ನು ಅದೆಂತು ವಿವರಿಸೋಣ ? ಅಣ್ಣನಷ್ಟೇ ಆಪ್ತನಾಗಿರುವ ಅಪ್ಪನೆಂದೇ ? ಸರಿ ಅದಾಯಿತು, ತಮ್ಮಪ್ಪನಂತದೆಂತು ಅರಗಿಸಿಕೊಳ್ಳುವುದು ? ತಮ್ಮನೇ ತಂದೆಯ ಸ್ಥಾನದಲ್ಲಿ ನಿಂತು ಕೆಲಸ ಕರ್ತವ್ಯಗಳನ್ನು ನಿರ್ವಹಿಸಲೂಬಹುದು ಎಂದು ಒಂದು ಕ್ಷಣ ಎಣಿಸೋಣ. ಇವೆಲ್ಲಕ್ಕೂ ಸಂಪೂರ್ಣ ವಿರೋಧಾಭಾಸದ ಹೆಸರೆಂದರೆ ತಮ್ಮಣ್ಣ ಒಬ್ಬಾತನೇ ತಮ್ಮನೂ, ಅಣ್ಣನೂ ಆಗಿರಲು ಹ್ಯಾಗೆ ಸಾಧ್ಯ ಎಂದಿರೇನು ! ಇಲ್ಲಿದೆ ಒಂದು ವೈಯಕ್ತಿಕ ಅನುಭವದ ವಿವರಣೆಯ ಒಂದು ತುಣುಕು.

ನಮ್ಮಜ್ಜನ ಕಾಲದಲ್ಲಿ ನಮ್ಮ ಕೂಡುಕುಟುಂಬದಲ್ಲಿ ಎಲ್ಲಕ್ಕೂ ಹಿರಿಯವನಾಗಿ ಹುಟ್ಟಿದ ನನ್ನ - ಕಸಿನ್ - ಚಿಕ್ಕಪ್ಪನ - ಮಗನಿಗೆ ಅವನ ಸ್ಥಾನಮಾನಕ್ಕನುಗುಣವಾಗಿಯೇ ಅಣ್ಣಾಸಾಹೇಬನೆಂದು ವಿಧಿವತ್ತಾಗಿ ಹೆಸರನ್ನೇನೋ ಇಟ್ಟರು. ಆದರೆ ಹನ್ನೆರಡು ಜನರ ಕುಟುಂಬದಲ್ಲಿ ಎಲ್ಲಕ್ಕೂ ಕಿರಿಯವನಾದ ಇವನಿಗೆ ಎಲ್ಲರೂ ಪ್ರೀತಿಯಿಂದ ತಮ್ಮಾ, ತಮ್ಮ್ಯಾ ಎಂದೇ ಕರೆಯತೊಡಗಿದರು. ಅವರೇನೋ ಕರೆದರು, ಆದರೆ ನಂತರ ಈ ಭೂಮಿಗಿಳಿದು ಬಂದ ನಾವೆಲ್ಲರೂ ನಮಗೆಲ್ಲ ಹಿರಿಯವನಾದ ಅವನನ್ನೆಂತು ಕೂಗುವುದು – ತಮ್ಮ್ಯಾ ಬಿಡಿ, ಅಣ್ಣನಾದ ಅವನಿಗೆ ತಮ್ಮಾ ಎಂದೂ ಕರೆಯುವಂತಿಲ್ಲ ಇಂಥ ದ್ವಂದ್ವದಲ್ಲೇ ಹುಟ್ಟಿಕೊಂಡ ಪದ ತಮ್ಮಣ್ಣ. ಇದು ನಾವು ಕರೆಯುವ ಸಂವಾದಿ ಪದವೂ ಆಯಿತು. ನಿಜಜೀವನದಲ್ಲಿ ಆತನ ಹೆಸರಾಗಿಯೂ ಉಳಿದುಕೊಂಡಿತು.

ಹೀಗೆಯೇ ಯಾವ್ಯಾವುದೋ ಸಂದರ್ಭದಲ್ಲಿ ಬಿಡಿಸಿ ಬಿಟ್ಟ ನೋಡಿದಾಗ ವಿರೋಧಾಭಾಸವೆನಿಸುವ ಈ ಪದಗಳು ಹೆಸರುಗಳಾಗಿ ಪರಿವರ್ತಿತವಾಗಿರಬಹುದು.

ಅಂದ ಹಾಗೆ ನಮ್ಮಲ್ಲಿ 'ತಮ್ಮಣ್ಣಪ್ಪ'ಗಳೂ ಆಗಿ ಹೋಗಿದ್ದಾರೆ. ತಮ್ಮಪ್ಪಣ್ಣಗಳೂ ಇದ್ದಾರೆ.

ಇನ್ನು ತಮ್ಮಣ್ಣಗೋಳ್, ತಮ್ಮಪ್ಪಗೋಳ್‌ಗಳೂ ನಮ್ಮ ಮಧ್ಯದಲ್ಲಿದ್ದಾರೆ. 'ಗೋಳ್' ಎಂದರೆ ನೀವೆನಿಸಿದಂತೆ ಗೋಳುಹೊಯ್ದುಕೊಳ್ಳುವವರಲ್ಲ, ಗೌರವಸೂಚಿ ಪದವನ್ನಾಗಿ ಬಹುವಚನ ರೂಪದಲ್ಲಿ ಈ ಗೋಳ್ ಎಂಬ ಸಂವಾದಿ ಪದವನ್ನು ಜೋಡಿಸುವುದು ಮರಾಠಿ ಪ್ರಭಾವಿತ ಗಡಿಭಾಗದಲ್ಲಿ ರೂಢಿಯಲ್ಲಿದೆ.

ವಿರೋಧಾರ್ಥ ಪದಗಳನ್ನೇ ಆಯ್ದುಕೊಂಡು ಆದ ಹೆಸರುಗಳ ಬಗ್ಗೆ ಕೇಳಿದೆವು ತಾನೆ ? ಇವೆಲ್ಲವುಗಳಿಗೆ ಕಳಸವಿಟ್ಟಂತಿರುವ, ಒಂದರ್ಥದಲ್ಲಿ 'ಪುಲ್ಲಿಂಗಿ'ಗಳು ಎಂಬ ಅಭಿಧಾನಕ್ಕೆ ಗುರಿಯಾಗಬಲ್ಲಂಥ ಕೆಲವು ಹೆಸರುಗಳ ಸ್ಯಾಂಪಲ್‌ಗಳು ಇಲ್ಲಿವೆ ನೋಡಿ. ನಮ್ಮ ಗಡಿಭಾಗದ ಆಡುಮಾತಿನಲ್ಲಿ ಒಂದು ಪದ ಬಳಕೆಯಲ್ಲಿದೆ – 'ಹೆಂಗಸ್ಯಾ' ಹೆಂಗಸಿನ ಲಕ್ಷಣಗಳನ್ನುಳ್ಳ ಗಂಡಸನ್ನು ಕೂಗಲು. ಅಷ್ಟೇ ಏಕೆ ನಮ್ಮ ನಾಡಲ್ಲೇ 'ಗಂಡಸಿ' ಎಂಬುದೊಂದು ಊರೇ ಇದೆಯಲ್ಲ (ಇದಕ್ಕಿರಬಹುದಾದ ಸ್ಥಳನಾಮದ ಇತಿಹಾಸ ಈ ಲೇಖಕನಿಗೆ ಗೊತ್ತಿಲ್ಲ)

ನಮ್ಮಲ್ಲಿ ಅಣ್ಣಕ್ಕಗಳಿದ್ದಾರೆ. ನೆನಪಿಡಿ ಇವರು ಅಣ್ಣನ ಅಕ್ಕನ ಪ್ರೀತಿಯನ್ನು ಒಟ್ಟಾಗಿಯೇ ಧಾರೆಯೆರದ ಪ್ರೀತಿಯ ಒರತೆಗಳೇ ಹೊರತು ಅನ್ನವನಿಕ್ಕುವ ಅಕ್ಕ ಅನ್ನಕ್ಕಗಳಲ್ಲ. ಅದೇ ರೀತಿ ಅಣ್ಣವ್ವ, ತಮ್ಮವ್ವಗಳೂ ಇದ್ದಾರೆ. ಅದೇ ರೀತಿ ಅಕ್ಕಪ್ಪ-ಅಕ್ಕನ ಅಪ್ಪ ಅಕ್ಕಣ್ಣ-ಅಕ್ಕನ ಅಣ್ಣಗಳಾಗಿರದೇ, ಅಕ್ಕ-ಅಪ್ಪನ; ಅಕ್ಕ-ಅಣ್ಣನ ಒಟ್ಟು ಸ್ವರೂಪಗಳಾಗಿದ್ದಾರೆ. ಅವ್ವಣ್ಣಗಳು ಅವ್ವ ಮತ್ತು ಅಣ್ಣನ ಒಟ್ಟು ಮಹಿಮೆಯನ್ನು ಪ್ರತಿನಿಧಿಸುವವರೇ ಹೊರತು ಅವ್ವನ ಅಣ್ಣ ಅಂದರೆ ಸೋದರ ಮಾವಂದಿರಲ್ಲ. ಬೆಂಗಳೂರನ್ನು ಕಾಯುತ್ತಿರುವವಳು ಅಣ್ಣಮ್ಮಳೇ ಹೊರತು ಅನ್ನವನ್ನಿಕ್ಕುವ ಅನ್ನಮ್ಮನಲ್ಲ. ನನಗೊಬ್ಬ ಅಣ್ಣಕ್ಕತ್ತೆ ಇದ್ದಾಳೆ. ಉತ್ತರ ಕರ್ನಾಟಕದಲ್ಲಿ ಅದರಲ್ಲೂ ವಿಶೇಷವಾಗಿ ಮಹಾರಾಷ್ಟ್ರಕ್ಕೆ ಹೊಂದಿಕೊಂಡಿರುವ ಗಡಿಪ್ರದೇಶ ಮತ್ತು ಮರಾಠಿ ಸಂಸ್ಕೃತಿಯ ಪ್ರಭಾವ ಢಾಳಾಗಿ ಇರುವ ಪ್ರದೇಶಗಳಲ್ಲಿ ಅತಿ ಸಾಮಾನ್ಯವಾಗಿ ಇನ್ನೂ ಒಂದು ಬಗೆಯ ಹೆಸರುಗಳು ಕಾಣಸಿಗುತ್ತವೆ. ಅಣ್ಣ, ಅಪ್ಪ, ಕಾಕಾ, ತಾತ್ಯಾ ಇಂಥ ಸಂಬಂಧವಾಚಿ ಪದಗಳ ಮುಂದೆ ಸಾಹೇಬ ಎನ್ನುವ ಗೌರವಸೂಚಕ ಪದವನ್ನು ಸೇರಿಸಿದಾಗ ಆದ ಹೆಸರುಗಳೇ ಅಣ್ಣಾಸಾಹೇಬ, ಅಪ್ಪಾಸಾಹೇಬ, ತಾತ್ಯಾಸಾಹೇಬ, ಕಾಕಾಸಾಹೇಬ ಮುಂತಾದ ಹೆಸರುಗಳು. ಮೂಲದಲ್ಲಿ ಪಾರ್ಸಿ ಪದವಾದ ಈ ಸಾಹೇಬ, ಸಾಹೇಬರು ಎಂಬ ದೊಡ್ಡ ಹುದ್ದೆಯಲ್ಲಿದ್ದವರಿಗೆ ಬಳಸುವ ಪದ ಜನರ ಆಡುಭಾಷೆಯಲ್ಲಿ ಹ್ರಸ್ವಗೊಂಡು ಡಾಕ್ಟರ ಸಾಹೇಬರು ಇದ್ದುದು ಡಾಕ್ಟರ್ ಸಾಬ್ ಆದಂತೆ ಹೆಸರುಗಳೂ ವಾಚ್ಯದಲ್ಲೂ ಕೆಲ ಸಲ ಬರವಣಿಗೆಯಲ್ಲೂ ಅಣ್ಣಾಸಾಬ್, ಕಾಕಾಸಾಬ್ ಆಗಿ ಇಸ್ಲಾಮೀಕರಣಕ್ಕೆ ಒಳಗಾದರೂ ಎಲ್ಲ ಜನರ ಬಾಯಲ್ಲಿ ಅತಿ ಸಹಜವಾಗಿ ಮೂಡಿಬರುತ್ತವೆ. ಮರಾಠಿಗರಂತೂ ಈ ಸಾಹೇಬ್‌ಅನ್ನು 'ಸಾಬ್' ಮಾಡಿ ಈಗ ಯಾವುದೇ ಅರ್ಥವಿಲ್ಲದ 'ಸೋ'(ಅಪ್ಪಾಸೋ) ಸೇರಿಸಿಬಿಟ್ಟಿದ್ದಾರೆ.

ಉಚ್ಚಕುಲದ ಮರಾಠಿಗರಂತೂ ತಮ್ಮದು ರಾಜಘರಾಣೆ ಎಂದು ಹೇಳಿಕೊಳ್ಳುವವರು ವಾಚ್ಯಾರ್ಥದಲ್ಲಿ ಈ ಸಾಹೇಬನ್ನು ಸ್ತ್ರೀಲಿಂಗಕ್ಕೆ ಅಳವಡಿಸಿದ್ದಾರೆ. ಅಕ್ಕಾಸಾಹೇಬ, ವೈಣಿಸಾಹೇಬ, ತಾಯಿಸಾಹೇಬ ಹೀಗೆ...


ಡಾ॥ ಅನಿಲ ಕಮತಿ

ಯಕ್ಸಂಬಾ, ೫೯೧೨೪೪


# ಕೈ ಕಟ್ಟಿ ಕೂಡುವದಲ್ಲ



ಅವರವರ ಕೆಲಸದಲ್ಲಿ ಅವರು ಮುಳುಗಿದ್ದು ತಪ್ಪಲ್ಲ
ನೀ ಉಸಿರುಗಟ್ಟಿ ಸಾಯುವಾಗ ಅವರು ಕೈಕಟ್ಟಿ ಕೂಡುವದಲ್ಲ

ಮಕ್ಕಳ ಹಿತಬಯಸಿ ಹಾರಿ ಹೋದದ್ದು ಅವರ ತಪ್ಪಲ್ಲ
ನಿನ್ನ ಸಂಸಾರ ನೋಡದೇ ಪರರ ಮನೆ ಕಟ್ಟುತ್ತ ಕೂಡುವದಲ್ಲ

ಹೊಂದಾಣಿಕೆ ಇರುವಾಗ ಸಾವಿರ ಸಲ ಹೋದದ್ದು ತಪ್ಪಲ್ಲ
ತಾಳ ತಪ್ಪಿದ ಮೇಲೆ ಒಮ್ಮೆಯೂ ಬರರೆಂದು ಅವರ ದೂರುವದಿಲ್ಲ

ನಾಯಿ–ನರಿಗಳ ಕರುಣೆಯಿಂದ ನೋಡುವದು ತಪ್ಪಲ್ಲ
ಅಡುಗೆ ಮನೆಯಲ್ಲಿ ಗಡಿಗೆ ಉರುಳಿಸಿದಾಗ ಕೈ ಹೊತ್ತು ಕೂಡುವದಲ್ಲ

ಹೆತ್ತವರ ಕಡೆಯಿಂದ ರಕ್ಷಣೆಯ ಬಯಸಿದ್ದು ನಿನ್ನ ತಪ್ಪಲ್ಲ
ಅವರೇ ಕೈಬಿಟ್ಟಾಗ ಬಾಳ ಎದೆಗಾರಿಕೆಯ ನೀ ಕಳೆದುಕೊಳ್ಳುವದಲ್ಲ


ಶಾರದಾ ಮುಳ್ಳೂರ

# ಚರಿತ್ರೆ ವರ್ತಮಾನದ ಕಥನ

**ಚ**ರಿತ್ರೆ ಗತ ಕಥನವಲ್ಲ, ಅದು ವರ್ತಮಾನದ ಕಥನ. ಚರಿತ್ರೆಯಲ್ಲಿ ತುಂಬಿಕೊಂಡಿರುವುದು ಮಾನವನ ಅನುಭವಗಳು. ಅದಕ್ಕೆ ಕಾಲದೇಶಗಳ ಗಡಿಗಳಿರುವುದಿಲ್ಲ. ಮಾನವ ಜೀವಿಸಿದ್ದು ಹಾಗೂ ಜೀವಿಸುತ್ತಿರುವುದು ವರ್ತಮಾನದಲ್ಲಿಯೇ ಹೊರತು ಗತದಲ್ಲಲ್ಲ, ಗತ, ಅನುಭವದ ರೂಪದಲ್ಲಿ ಮಾನವನೊಂದಿಗಿರುತ್ತದೆ. ಆದರೆ ಮಾನವ ತಾನು ಜೀವಿಸುತ್ತಿರುವ ವರ್ತಮಾನದಲ್ಲಿ ಬದುಕನ್ನು ಕಟ್ಟಿಕೊಳ್ಳುವಲ್ಲಿ ವಿಫಲನಾದರೆ ಅಥವಾ ವರ್ತಮಾನದ ಗ್ರಹಿಕೆ ಅವನಲ್ಲಿ ಇಲ್ಲವಾದರೆ ವರ್ತಮಾನ ದಲ್ಲಿದ್ದರೂ ಗತದಲ್ಲಿ ಇದ್ದಂತೆ. ಏಕೆಂದರೆ ಈ ಎರಡೂ ಸಂದರ್ಭಗಳಿಗೂ ಸ್ಪಂದಿಸುವಲ್ಲಿ ಆತ ವಿಫಲನಾಗಿರುತ್ತಾನೆ. ಗತದ ಅನುಭವಗಳು ವರ್ತಮಾನದ ಬದುಕನ್ನು ಪ್ರಭಾವಿಸು ತ್ತಿರುತ್ತವೆ ಹಾಗೂ ಹೊಸ ಬದುಕನ್ನು ಕಟ್ಟುವಲ್ಲಿ ನೆರವಾಗುತ್ತವೆ. ಅದೇ ರೀತಿ ವರ್ತಮಾನದಲ್ಲಿ ಮಾನವ ಅನುಭವಿಸುತ್ತಿರುವ ಜಾತಿ, ಧರ್ಮ ಹಾಗೂ ಕೋಮು ಆಧಾರಿತ ಸಮಸ್ಯೆಗಳಿಗೆ ಪರಿಹಾರವಲ್ಲದಿದ್ದರೂ, ಅವುಗಳ ಹುಟ್ಟು ಹಾಗೂ ಬೆಳವಣಿಗೆಗೆ ಕಾರಣವಾದ ಅಂಶಗಳನ್ನು ತೆರೆದಿಡುತ್ತಾ ಹೋಗುತ್ತದೆ. ರಾಜಪ್ರಭುತ್ವ ಹಾಗೂ ವಸಾಹತು ಪ್ರಭುತ್ವದ ರಾಜಕಾರಣ ಪ್ರಜಾಪ್ರಭುತ್ವ ಸಂದರ್ಭದಲ್ಲೂ ಸಕ್ರಿಯವಾಗಿ ಇರುವುದನ್ನು ಈ ಹಿನ್ನೆಲೆಯಿಂದಲೇ ನೋಡಬಹುದಾಗಿದೆ.

ಚರಿತ್ರೆಯ ಸಂಶೋಧಕರಿಗೆ ಚರಿತ್ರೆಯೇ ಒಂದು ವರ್ತಮಾನದ ಕಥನವಾಗಿರುತ್ತದೆ. ಅಲ್ಲಿ ಗತಕ್ಕೆ ಸ್ವತಂತ್ರ ಅಸ್ತಿತ್ವವೇ ಇರುವುದಿಲ್ಲ. ಆಗಿಹೋದ ಎನ್ನುವುದಕ್ಕಿಂತ ಆಗುತ್ತಿರುವ ಅಥವಾ ಆಗುಮಾಡಿಸುವ ಎನ್ನುವ ವಿಚಾರಗಳೇ ಪ್ರಧಾನವಾಗಿರುತ್ತವೆ. ಅಂದರೆ ಚರಿತ್ರೆಯನ್ನು ಸಿದ್ಧವಸ್ತುವನ್ನಾಗಿ ನೋಡದೆ ಪ್ರಕ್ರಿಯೆಯನ್ನಾಗಿ ನೋಡುವುದು ಎಂದರ್ಥ. ಚರಿತ್ರೆಯನ್ನು ಗತಕಥನವನ್ನಾಗಿ ನೋಡಿದರೆ ಅದು ನಮ್ಮದಾಗುವುದಿಲ್ಲ ಅಥವಾ ನಮ್ಮದನ್ನಾಗಿಸಿಕೊಳ್ಳಲು ಸಾಧ್ಯ ವಾಗುವುದಿಲ್ಲ. ಹಾಗಾಗಿ ಚರಿತ್ರೆ ಪರರದ್ದು, ಅದರಲ್ಲೂ ಪ್ರಭುತ್ವದ್ದು ಎನ್ನುವ ಭಾವನೆ ಇಂದಿಗೂ ದಟ್ಟವಾಗಿ ಇದೆ. ಇದಕ್ಕೆ ನಮ್ಮ ಚರಿತ್ರೆ ಪಠ್ಯಕ್ರಮ ಹಾಗೂ ಬೋಧನಾ ಕ್ರಮ ಬಹುಮುಖ್ಯ ಕಾರಣ. ಚರಿತ್ರೆಯ ವಿದ್ಯಾರ್ಥಿಗೆ ತಾನು ಓದುತ್ತಿರುವ ವಿಷಯಗಳನ್ನು ತನ್ನ ಬದುಕಿಗೆ ಅಥವಾ ತಾನು ಬದುಕುತ್ತಿರುವ ಸಮಾಜ ಅಥವಾ ಪರಿಸರಕ್ಕೆ ಅನ್ವಯಿಸಲು ಸಾಧ್ಯವಾಗದೇ ಹೋದರೆ ಚರಿತ್ರೆ ದೂರವೇ ಉಳಿದು ಬಿಡುತ್ತದೆ. ಉದಾಹರಣೆಗೆ, ಚರಿತ್ರೆಯ ವಿವಿಧ ಕಾಲಘಟ್ಟ ಗಳಲ್ಲಿ ಅಸ್ತಿತ್ವದಲ್ಲಿದ್ದ ಊಳಿಗಮಾನ್ಯ ವ್ಯವಸ್ಥೆಯ ಕುರಿತು ಚರಿತ್ರೆಯ ಪುಸ್ತಕಗಳಲ್ಲಿ ಪಾಠಗಳಿವೆ. ಆದರೆ ಆ ವ್ಯವಸ್ಥೆ ಯನ್ನು ಇಂದಿನ ಸಂದರ್ಭದ ಜಮೀನ್ದಾರಿ ವ್ಯವಸ್ಥೆಯೊಡನೆ ಹೋಲಿಸಿ ನೋಡುವ ವಿಧಾನ ಇನ್ನೂ ನಮ್ಮಲ್ಲಿ ಬೆಳೆದು ಬಂದಿಲ್ಲ. ಇದೇ ರೀತಿ ಬಂಡವಾಳಶಾಹಿ ವ್ಯವಸ್ಥೆಯ ಕುರಿತು ಅಧ್ಯಯನ ನಡೆಸುವಾಗಲೂ ಈ ವಿಧಾನವನ್ನು ಅನುಸರಿಸ ಬಹುದು. ಈ ವಿಧಾನವನ್ನು ಅನುಸರಿಸಿದಾಗ ಮಾತ್ರ ಚರಿತ್ರೆ ನಮ್ಮದಾಗಲು ಸಾಧ್ಯ ಹಾಗೂ ನಾವು ಎದುರಿಸುತ್ತಿರುವ ಹಲವಾರು ಸಮಸ್ಯೆಗಳಿಗೆ ಉತ್ತರಗಳನ್ನು ಕಂಡುಕೊಳ್ಳಲು ಸಾಧ್ಯ.

ಚರಿತ್ರೆಯನ್ನು ಕಾಲ ಹಾಗೂ ಪ್ರದೇಶಗಳ ನೆಲೆಗಷ್ಟೇ ಸೀಮಿತಗೊಳಿಸುವುದು ತಪ್ಪು ವಿಧಾನ. ಏಕೆಂದರೆ, ಚರಿತ್ರೆ ಈ ಮಿತಿಗಳನ್ನು ಅಥವಾ ಗಡಿಗಳನ್ನು ಮೀರಿ ನಿಂತಿರು ವಂಥದ್ದು, ಕಾಲ ನಿರಂತರ ಚಲನೆಯಿಂದ ಕೂಡಿರು ವಂಥದ್ದು. ಅದು ವರ್ತಮಾನದ ಅನುಭವಗಳ ಮೂಲಕ ಮುಂದಕ್ಕೆ ಚಲಿಸುತ್ತಿರುತ್ತದೆ. ಅದಕ್ಕೆ ಪ್ರಾಚೀನ, ಮಧ್ಯ ಯುಗೀನ ಹಾಗೂ ಆಧುನಿಕಗಳೆನ್ನುವ ಗಡಿಗಳು ಇರುವುದಿಲ್ಲ. ಅದು ಒಂದಕ್ಕೊಂದು ಪೂರಕವಾಗಿ ಮುನ್ನಡೆಯುತ್ತಿರುತ್ತದೆ. ವಸಾಹತು ಆಳ್ವಿಕೆಯು ಭಾರತದಲ್ಲಿ ಈ ಮೂರೂ ಯುಗ ಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ನೋಡಿ ವ್ಯಾಖ್ಯಾನಿಸುವ ಪ್ರಯತ್ನ ಮಾಡಿದ್ದು ಹಳೆಯ ವಿಚಾರವಾದರೂ ಭಾರತದ ಚರಿತ್ರೆ ಇನ್ನೂ ಆ ವಸಾಹತು ಛಾಪಿನಿಂದ ಹೊರಬಂದಿಲ್ಲ. ಸಾಮ್ರಾಜ್ಯಶಾಹಿಗಳು ಗತ ಹಾಗೂ ವರ್ತಮಾನವನ್ನು ಬೇರೆ ಬೇರೆಯದಾಗಿಯೇ ನೋಡಿ ಚರಿತ್ರೆಯ ನಿರಂತರತೆ ಯನ್ನು ಮುರಿಯುವ ಪ್ರಯತ್ನ ಮಾಡಿದರು. ಏಕೆಂದರೆ, ಬ್ರಿಟಿಷ್ ಆಳ್ವಿಕೆಯ ಸಂದರ್ಭವನ್ನು 'ಆಧುನಿಕ' ಎನ್ನುವ ನೆಲೆಗಟ್ಟಿನಲ್ಲಿ ವ್ಯಾಖ್ಯಾನಿಸುವ ಉದ್ದೇಶ ಅವರದ್ದಾಗಿತ್ತು.

ಪ್ರಭುತ್ವಗಳು ಕಾಲ ಹಾಗೂ ಪ್ರದೇಶಗಳನ್ನು ಯಾವತ್ತೂ ತಮ್ಮ ನೆಲೆಯಿಂದಲೇ ನೋಡುವ ಅಥವಾ ಹಿಡಿದಿಡುವ ಪ್ರಯತ್ನಗಳನ್ನು ಮಾಡಿರುವುದು ಚರಿತ್ರೆ ಯುದ್ದಕ್ಕೂ ಕಂಡುಬರುವ ವಾಸ್ತವ ಸಂಗತಿ. ಹೀಗಾಗಿ ಚರಿತ್ರೆಯಲ್ಲಿ ಪ್ರಭುತ್ವದ ನೆಲೆ ಗಟ್ಟಿಗೊಂಡಷ್ಟೂ ಚರಿತ್ರೆಯ ವ್ಯಾಪ್ತಿ ಕುಗ್ಗುತ್ತಾ ಹೋಗುತ್ತದೆ. ಈ ಪ್ರಕ್ರಿಯೆಯನ್ನು ಅಧಿಕಾರ ಹಾಗೂ ಸವಲತ್ತುಗಳ ಮೂಲಕವೂ ನೋಡ ಬಹುದಾಗಿದೆ. ಧಾರ್ಮಿಕ ಪ್ರಭುತ್ವ, ರಾಜಪ್ರಭುತ್ವ ಹಾಗೂ ವಸಾಹತು ಪ್ರಭುತ್ವಗಳು ಅಧಿಕಾರ ಹಾಗೂ ಸವಲತ್ತು ಗಳಿಂದಲೇ ರೂಪುಗೊಂಡಿರುವುವಂಥವು. ಹೀಗಾಗಿ ಚರಿತ್ರೆಯಲ್ಲಿ ಅಧಿಕಾರ ಹಾಗೂ ಸವಲತ್ತುಗಳನ್ನು ಹೊಂದಿದ ವರ್ಗಗಳಷ್ಟೇ ದಾಖಲಾಗುತ್ತಾ ಹೋದವು. ಇವುಗಳಿಂದ ವಂಚಿತವಾದ ಜನಸಮುದಾಯಗಳು ಚರಿತ್ರೆಯಲ್ಲಿ ದಾಖಲಾಗದೆ ಉಪೇಕ್ಷೆಗೆ ಒಳಗಾದವು. ಆದಿವಾಸಿ, ಬುಡಕಟ್ಟು, ದಲಿತ, ಹಿಂದುಳಿದ, ಅಲ್ಪಸಂಖ್ಯಾತ, ಮಹಿಳೆ ಹಾಗೂ ರೈತ ಸಮುದಾಯಗಳು ಇಂದಿನ ಪ್ರಜಾಪ್ರಭುತ್ವ ಸಂದರ್ಭದಲ್ಲಿ ಚರಿತ್ರೆಯ ಅನುಭವಗಳ ಮೂಲಕ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಪ್ರಯತ್ನಿ ಸುತ್ತಿದ್ದು, ಇದು ಚರಿತ್ರೆಯನ್ನು ಸ್ವತಂತ್ರಗೊಳಿಸುವುದರ ಮೂಲಕ ತಮ್ಮನ್ನು ತಾವು ಸ್ವತಂತ್ರಗೊಳಿಸುವ ಪ್ರಯತ್ನವೂ ಆಗಿದೆ. ಪ್ರಜಾಪ್ರಭುತ್ವವು ಹಲವಾರು ಮಿತಿಗಳ ನಡುವೆಯೂ ಈ ರೀತಿಯ ಪ್ರಯತ್ನಗಳಿಗೆ ಅನುವು ಮಾಡಿಕೊಟ್ಟಿದೆ.

ವರ್ತಮಾನವನ್ನು ಅನುಭವಿಸದ ಅಲಕ್ಷಿತ ಸಮುದಾಯಗಳು ಬೂರ್ಜ್ವಾ ವರ್ಗದ ಉನ್ನತಿಗಾಗಿ ದುಡಿದು ಸೊರಗಿದವು. ದೇವಾಲಯ ಹಾಗೂ ಅರಮನೆ ಕೇಂದ್ರಿತ ವ್ಯವಸ್ಥೆ ಈ ಅಲಕ್ಷಿತ ಸಮುದಾಯಗಳ ದುಡಿಮೆಯ ಮೂಲಕ ತಮ್ಮ ಯಜಮಾನಿಕೆಯನ್ನು ಸ್ಥಾಪಿಸಿಕೊಂಡವು. ಪ್ರಜಾಪ್ರಭುತ್ವ ಈ ಸಮುದಾಯಗಳಿಗೆ ಸ್ಥಾನವನ್ನು ದೊರಕಿಸಿಕೊಟ್ಟಿದೆ ಎನ್ನುವುದಕ್ಕಿಂತ ಹೆಚ್ಚಾಗಿ ತಮ್ಮ ಇರುವಿಕೆಯನ್ನು ಸಾರಿ ಹೇಳುವ ಧ್ವನಿಯನ್ನು ಕೊಟ್ಟಿದೆ ಎಂದು ಹೇಳಬಹುದು. ಸಬಾಲ್ಟರ್ನ್ ಚಿಂತಕರು ಎಲ್ಲ ಅಲಕ್ಷಿತ ಸಮುದಾಯಗಳ ಅಧ್ಯಯನ ಕೈಗೊಂಡು ಇಡೀ ಚರಿತ್ರೆಗೆ ಜೀವಂತಿಕೆಯನ್ನು ತುಂಬಿರುವ ಬಗೆ ಹಾಗೂ ಮುಖಾಮುಖಿಯಾಗಿರುವುದರ ಕುರಿತು ಹೊಸ ಒಳನೋಟಗಳನ್ನು ನೀಡಿದ್ದಾರೆ. ಅದೇ ರೀತಿ ಅಲಕ್ಷಿತ ಸಮುದಾಯಗಳು ಚರಿತ್ರೆಯುದ್ದಕ್ಕೂ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿರುವ ಬಗೆ ಹಾಗೂ ವರ್ತಮಾನದ



ಡಾ॥ ಕೆ. ಮೋಹನ್‌ಕೃಷ್ಣ ರೈ

ಅನುಭವಗಳನ್ನು ನೆನಪಿನ ಮೂಲಕ ಹಿಡಿದಿಟ್ಟಿರುವುದರ ಕುರಿತು ಸೂಕ್ಷ್ಮ ನೆಲೆಯ ಅಧ್ಯಯನ ನಡೆಸಿದ್ದಾರೆ. ಚರಿತ್ರೆಯ ವರ್ತಮಾನತೆ ಅರ್ಥವಾಗುವುದೇ ಅಲಕ್ಷಿತ ಸಮುದಾಯಗಳ ಅನುಭವಗಳ ಹಿನ್ನೆಲೆಯಿಂದ ಚರಿತ್ರೆಯನ್ನು ನಿರ್ಮಿಸುವ ಪ್ರಯತ್ನ ಮಾಡಿದಾಗ. ಇಲ್ಲದಿದ್ದರೆ ಚರಿತ್ರೆ ಬಿಡಿಬಿಡಿಯಾಗಿ ಕಂಗೊಳಿಸುತ್ತಿರುವ ದ್ವೀಪಗಳಾಗಿ ಮಾತ್ರ ಕಂಡುಬರಲು ಸಾಧ್ಯ.

ಚರಿತ್ರೆ ನಮ್ಮದು, ನಮ್ಮ ವರ್ತಮಾನಕ್ಕೆ ಸಂಬಂಧಿಸಿದ್ದು ಎನ್ನುವ ಭಾವನೆ ಚರಿತ್ರೆಯನ್ನು 'ಜನರ ಚರಿತ್ರೆ'ಯನ್ನಾಗಿ ನೋಡಿದಾಗ ಮಾತ್ರ ಮೂಡಲು ಸಾಧ್ಯ. ಪ್ರಭುತ್ವದ ನೆಲೆಯ ಅಥವಾ ಅಧಿಕಾರ ಹಾಗೂ ಸವಲತ್ತುಗಳ ಹಿನ್ನೆಲೆಯ ಅಧ್ಯಯನ ವಿಧಾನವನ್ನು ಕೈಬಿಟ್ಟು, ಬೇಟೆ, ಕೃಷಿ, ವ್ಯಾಪಾರ, ಕೈಗಾರಿಕೆ, ಪೇಟೆ-ಪಟ್ಟಣಗಳು ಮುಂತಾದ ಬದುಕಿನ ನೆಲೆಯ ಮೂಲಕ ಚರಿತ್ರೆಯನ್ನು ನೋಡುವ ವಿಧಾನವೇ ಜನರ ಚರಿತ್ರೆ. ಆದರೆ ನಾವು ಇಂದು ಹೆಸರಿಸುವ ಚರಿತ್ರೆಯಲ್ಲಿ ಆಗಿಹೋದ ಸಾಮ್ರಾಜ್ಯಗಳು ಪ್ರಭುತ್ವದ ನೆಲೆಗಳ ಮೂಲಕವೇ ಅಸ್ತಿತ್ವಕ್ಕೆ ಬಂದಿರುವಂಥವು ಎನ್ನುವುದನ್ನು ನಾವು ಮರೆಯುವಂತಿಲ್ಲ. ಜನರ ಚರಿತ್ರೆ ಅಧ್ಯಯನ ವಿಧಾನದ ಮೂಲಕ ಚರಿತ್ರೆ ಅಧ್ಯಯನ ನಡೆಸುವಾಗ ಚರಿತ್ರೆಯಲ್ಲಿ ಸಾಮಾನ್ಯವಾಗಿ ಕಂಡುಬರುವ ಸಾವು, ಅವನತಿ, ನಾಶ ಮುಂತಾದ ಪದಗಳು ಮಹತ್ವವನ್ನು ಪಡೆದುಕೊಳ್ಳುವುದಿಲ್ಲ. ಏಕೆಂದರೆ, ಇವೆಲ್ಲಾ ಪ್ರಭುತ್ವದ ಲಕ್ಷಣಗಳು. ಈ ಲಕ್ಷಣಗಳ ಮೂಲಕವೇ ಚರಿತ್ರೆಯನ್ನು ನಿರ್ವಚಿಸಿದರೆ ಚರಿತ್ರೆ ಗತದ್ದು ಎನ್ನುವ ನಂಬಿಕೆ ಮೂಡುತ್ತದೆ. ಚರಿತ್ರೆಯಲ್ಲಿ ಯಾವತ್ತೂ ಕೊನೆ ಅಥವಾ ಅಂತ್ಯ ಎನ್ನುವುದಿಲ್ಲ. ಅಧಿಕಾರ ಹಾಗೂ ಸವಲತ್ತುಗಳ ಮೂಲಕ ಕಟ್ಟುವಂಥದ್ದು ತಾತ್ಕಾಲಿಕ ನಾಶಕ್ಕೆ ಒಳಗಾಗುತ್ತದೆ ಎನ್ನುವುದೇನೋ ನಿಜ. ಆದರೆ ಮತ್ತೆ ಹೊಸ ವ್ಯವಸ್ಥೆಗಳು ಹುಟ್ಟಿಕೊಳ್ಳುತ್ತಿರುತ್ತವೆ. ಕೊನೆಗೂ ಉಳಿಯುವುದು ಚರಿತ್ರೆಯ ಜನಮುಖಿ ನೆಲೆ ಮಾತ್ರ. ಈ ನೆಲೆಯೇ ಚರಿತ್ರೆಯ ತಳಹದಿ. ಇದು ಯಾವತ್ತೂ ಶಾಶ್ವತವಾಗಿರುತ್ತದೆ. ಈ ತಳಹದಿಯ ಮೇಲೆ ನಾನಾ ತರದ ವ್ಯವಸ್ಥೆಗಳು ತಮ್ಮ ಗೋಪುರಗಳನ್ನು ನಿರ್ಮಿಸಿಕೊಳ್ಳುತ್ತಿರುತ್ತವೆ. ಪ್ರಭುತ್ವಕೇಂದ್ರಿತ ಅಧ್ಯಯನಗಳು ತಳಹದಿಗಿಂತ ಹೆಚ್ಚಾಗಿ ಅದನ್ನು ಆಧರಿಸಿ ನಿರ್ಮಾಣಗೊಂಡ ಮೇಲ್ಕಟ್ಟಡದ ಕುರಿತೇ ತಮ್ಮ ಅಧ್ಯಯನವನ್ನು ಕೇಂದ್ರೀಕರಿಸಿಕೊಂಡಿವೆ. ಮಾರ್ಕ್ಸ್‌ವಾದಿ ನೆಲೆಯ ಅಧ್ಯಯನಗಳು ಚರಿತ್ರೆಯನ್ನು ಆರ್ಥಿಕ ನೆಲೆಗಟ್ಟಿನಿಂದ ನೋಡುವ ಪ್ರಯತ್ನ ಮಾಡಿದ್ದು, ದುಡಿಮೆ ಹಾಗೂ ದುಡಿಯುವ ವರ್ಗಗಳನ್ನು ಚರಿತ್ರೆಯ ತಳಹದಿಯಾಗಿ ನೋಡಿವೆ. ಅದೇ ರೀತಿ ಸಬಾಲ್ಟರ್ನ್ ಚರಿತ್ರಕಾರರು ಚರಿತ್ರೆಯನ್ನು ಸಾಮಾಜಿಕ ಶ್ರೇಣೀಕರಣದ ಅತ್ಯಂತ ಕೆಳತುದಿಯಲ್ಲಿರುವ ಜನಸಮುದಾಯಗಳ ನೆಲೆಯಿಂದ ನಿರ್ಮಿಸುವ ಪ್ರಾಮಾಣಿಕ ಪ್ರಯತ್ನ ಮಾಡಿದ್ದಾರೆ. ಈ ಬಗೆಯ ಅಧ್ಯಯನಗಳು ಚರಿತ್ರೆಯನ್ನು ಯಾವತ್ತೂ ಗತದ್ದು ಎನ್ನುವ ಚರಿತ್ರೆಯ ಹರಿವನ್ನು ನಿಲ್ಲಿಸುವ ಪ್ರಯತ್ನ ಮಾಡಲಿಲ್ಲ.

ಸಾಮ್ರಾಜ್ಯಗಳನ್ನು ಸುವರ್ಣಯುಗದ ನೆಲೆಯಿಂದ ನೋಡುವ ರಾಷ್ಟ್ರೀಯವಾದಿಗಳು ಹಾಗೂ ಸಾಮ್ರಾಜ್ಯಗಳು ಆಧುನಿಕತೆಯ ಸಂಕೇತ, ಅವು ಸುಸಂಸ್ಕೃತ ನಾಗರಿಕತೆಯ ಲಕ್ಷಣ ಎನ್ನುವುದರ ಮೂಲಕ ಬ್ರಿಟಿಷ್ ಸಾಮ್ರಾಜ್ಯದ ಅಸ್ತಿತ್ವವನ್ನು ಉಳಿಸುವ ಪ್ರಯತ್ನ ಮಾಡಿದ ಸಾಮ್ರಾಜ್ಯಶಾಹಿಗಳು ಚರಿತ್ರೆಯನ್ನು ತಮ್ಮ ಉದ್ದೇಶಗಳಿಗೆ ಬೇಕಾದಂತೆ ಬಳಸಿಕೊಂಡರು. ತಮಗೆ ಸರಿ ಎನಿಸಿದ್ದನ್ನು ಚರಿತ್ರೆಯ ಮೂಲಕ ಮಾನ್ಯ ಮಾಡಿಸುವ ಹಾಗೂ ತಮ್ಮ ಅಸ್ತಿತ್ವಕ್ಕೆ ಅಪಾಯಕಾರಿ ಎಂದು ಕಂಡುಬಂದದ್ದನ್ನು ಚರಿತ್ರೆಯುದ್ದಕ್ಕೂ ಅಪಾಯಕಾರಿಯಾಗಿತ್ತು ಎಂಬುದಾಗಿ ಬಿಂಬಿಸುವ ಪ್ರಯತ್ನವನ್ನು ಸಾಮ್ರಾಜ್ಯಶಾಹಿ ಮಾಡಿತು. ಇಂದಿನ ಬಂಡವಾಳಶಾಹಿಯೂ ಇದೇ ಕೆಲಸವನ್ನು ಮಾಡುತ್ತಿದ್ದು ಜಾಗತೀಕರಣ ಎನ್ನುವ ಅಸ್ತ್ರದ ಮೂಲಕ ತನ್ನ ಉದ್ದೇಶಗಳನ್ನು ಅಥವಾ ಅನಿವಾರ್ಯತೆಗಳನ್ನು ಜಗತ್ತಿನ ಅನಿವಾರ್ಯತೆಗಳನ್ನಾಗಿ ಬಿಂಬಿಸಿ ಎಲ್ಲವನ್ನೂ ಜಾಗತಿಕವನ್ನಾಗಿಸುವ ಪ್ರಯತ್ನ ಮಾಡುತ್ತಿದೆ. ತನಗೆ ಸ್ಪರ್ಧೆ ನೀಡಬಲ್ಲ ಶಕ್ತಿಗಳನ್ನು ಬಂಡವಾಳದ ಮೂಲಕ ಅಥವಾ ಭಯೋತ್ಪಾದನೆಯ ನೆಪದ ಮೂಲಕ ಅಧೀನಗೊಳಿಸುವ ತಂತ್ರಗಾರಿಕೆಯನ್ನು ಯಶಸ್ವಿಯಾಗಿ ಬಳಸಿದೆ. ಇದರಿಂದಾಗಿ ಚರಿತ್ರೆಯ ಬಹುಸತ್ಯಗಳು ಮರೆಯಾಗಿ ನವವಸಾಹತುಶಾಹಿ ಬಂಡವಾಳದ ಮೂಲಕ ಮೂಡಿಸುವ ಸತ್ಯವೇ ಜಾಗತಿಕ ಸತ್ಯವಾಗಿ ಕಾಣಿಸಿಕೊಳ್ಳುತ್ತಿದೆ. ಆಧುನಿಕೋತ್ತರ ಚಿಂತಕರು ಸತ್ಯದ ನೆಲೆಯ ಈ ಮಿಥ್‌ಗಳನ್ನು ಒಡೆಯುವ ಕೆಲಸ ಮಾಡುತ್ತಿದ್ದಾರೆ. ಇದೊಂದು ಟೀಕೆಯಾಗಿ ಬಂದಿದ್ದು ಚರಿತ್ರೆಯನ್ನು ಹಲವಾರು ಬಗೆಯ ಬಂಧನಗಳಿಂದ ಬಿಡುಗಡೆಗೊಳಿಸಿದೆ. ಒಂದು ಸತ್ಯವನ್ನು ಸ್ಥಾಪಿಸುವ ಹಾಗೂ ಅದೇ ಸತ್ಯ ಎಂದು ವಾದಿಸುವ ಚಿಂತನಾಕ್ರಮದಲ್ಲಿ ಬಿರುಕುಗಳು ಕಾಣಿಸಿಕೊಳ್ಳುವಂತೆ ಮಾಡಿದ್ದು ಆಧುನಿಕೋತ್ತರ ಚಿಂತಕರ ದೊಡ್ಡ ಸಾಧನೆ.

ಆಧುನಿಕೋತ್ತರವಾದವು ಸಿದ್ಧಮಾದರಿಗಳನ್ನು ಪ್ರಶ್ನಿಸುತ್ತಲೇ ಯಾವ ವಸ್ತುವೂ ಪೂರ್ಣವಲ್ಲ, ಅದೊಂದು ಪ್ರಕ್ರಿಯೆ ಎನ್ನುವ ವಾದವನ್ನು ಮುಂದಿಡುತ್ತದೆ. ಹಾಗಾಗಿ ಇದು ಮೊದಲೇ ಗೊತ್ತುಪಡಿಸಿದ ಅಥವಾ ಹೀಗೆ ಇರಬೇಕೆನ್ನುವ ಶ್ರೇಣೀಕೃತ ವ್ಯವಸ್ಥೆಯನ್ನು ಒಪ್ಪುವುದಿಲ್ಲ. ಬದಲಾಗಿ ಅರಾಜಕತೆ ಇರುತ್ತದೆ ಎನ್ನುವ ವಿಚಾರಕ್ಕೆ ಒತ್ತು ನೀಡುತ್ತದೆ. ಮೊದಲೇ ಗೊತ್ತುಪಡಿಸಿದ ವಿಚಾರಗಳು ಹೇರಿಕೆಯ ಸ್ವರೂಪದ್ದಾಗಿರುತ್ತವೆ ಹಾಗೂ ಅವು ಯಾವ ಸಂದರ್ಭದಲ್ಲೂ ಮಾನ್ಯವಾಗಿರುವುದಿಲ್ಲ. ಚರಿತ್ರೆಯಲ್ಲಿ ಶಾಶ್ವತವಾದದ್ದು ಎಂಬುದಾಗಿ ನಂಬಿಸಲ್ಪಟ್ಟಿದ್ದ ಹಲವಾರು ಮೌಲ್ಯಗಳು ಇಂದು ತಮ್ಮ ಮೌಲ್ಯವನ್ನು ಕಳೆದು ಕೊಳ್ಳುತ್ತಿವೆ. ಚರಿತ್ರೆಯಲ್ಲಿ ಆಯಾ ಸಂದರ್ಭ ಹಾಗೂ ಸಮಯಕ್ಕನುಸಾರವಾಗಿ ಮೌಲ್ಯಗಳು ರೂಪುಗೊಳ್ಳುತ್ತವೆಯೇ ಹೊರತು ಚರಿತ್ರೆಯನ್ನೇ ಪ್ರಭಾವಿಸುವ ಮೌಲ್ಯಗಳು ಇರುವುದಿಲ್ಲ. ಸಂಪ್ರದಾಯ ಹಾಗೂ ಆಧುನಿಕತೆಗೆ ಸಂಬಂಧಪಟ್ಟಂತೆ ಇವುಗಳು ಪ್ರತಿನಿಧಿಸುವ ಮೌಲ್ಯಗಳನ್ನು ಚರಿತ್ರೆಯ ವಿಭಿನ್ನ ಕಾಲಘಟ್ಟಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ನೋಡುವ ಪ್ರಯತ್ನ ಮಾಡಲಾಗಿದೆ. ಆದರೆ ನಿಜಾರ್ಥದಲ್ಲಿ ನೋಡುವುದಾದರೆ, ಪ್ರಾಚೀನದಲ್ಲಿ ಸಂಪ್ರದಾಯವೂ ಇದೆ ಆಧುನಿಕತೆಯೂ ಇದೆ. ಅದೇ ರೀತಿ ಆಧುನಿಕದಲ್ಲೂ ಸಂಪ್ರದಾಯವೂ ಇದೆ ಆಧುನಿಕತೆಯೂ ಇದೆ. ಇವೆರಡೂ ಮಾನವನ ಸಹಜ ಗುಣಗಳಾದ್ದರಿಂದ ಆಯಾ ಸಂದರ್ಭದ ವ್ಯವಸ್ಥೆ ಇವೆರಡನ್ನೂ ಮೈಗೂಡಿಸಿಕೊಂಡಿರುತ್ತದೆ.

ವರ್ತಮಾನದ ಸ್ಪಂದನೆ ಇರುವ ಯಾವ ವ್ಯವಸ್ಥೆಯಾದರೂ ಜೀವಂತವಾಗಿರಲು ಸಾಧ್ಯ ಹಾಗೂ ಅದಕ್ಕೆ ಪ್ರಾಚೀನ, ಮಧ್ಯಯುಗೀನ ಹಾಗೂ ಆಧುನಿಕಗಳೆಂಬ ಗಡಿಗಳಿರುವುದಿಲ್ಲ. ಸಾಮ್ರಾಜ್ಯಗಳು ಅವನತಿ ಹೊಂದಿದವು ಎನ್ನುವುದು ಚರಿತ್ರೆಯ ಅಧ್ಯಯನದಲ್ಲಿ ಸಾಮಾನ್ಯವಾಗಿ ಕಂಡುಬರುವ ವಿಚಾರ. ಅವನತಿ ಹೊಂದಿದ ಕಾರಣದಿಂದಾಗಿ ಅವು ಗತದ್ದು ಎನ್ನುವುದು ಅದರ ವ್ಯಾಖ್ಯಾನ. ಇದರ ತಾತ್ವಿಕತೆಯೆಂದರೆ ಸಾಮ್ರಾಜ್ಯಗಳು ಯಾವತ್ತೂ ಜನಮುಖಿಯಾಗಿರಲಿಲ್ಲ ಹಾಗೂ ಅದಕ್ಕೆ ವರ್ತಮಾನದ ಸ್ಪಂದನೆ ಇರಲಿಲ್ಲ ಎನ್ನುವುದು. ಸಾಮ್ರಾಜ್ಯಗಳು ಅವನತಿಯ ಭಯದ ನೆರಳಲ್ಲೇ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಒತ್ತಾಯಕ್ಕೆ ಒಳಗಾಗಿದ್ದವು. ಸಾಮ್ರಾಜ್ಯಗಳಿಗೆ ಒಳಗಿನ ಹಾಗೂ ಹೊರಗಿನ ಶತ್ರುಗಳಿದ್ದು, ಆ ಕಾರಣಕ್ಕಾಗಿ ಸುಸಜ್ಜಿತ ಸೈನ್ಯವನ್ನು ಹೊಂದುವುದೇ ಅವರ ಪ್ರಥಮ ಆದ್ಯತೆಯಾಗಿತ್ತು. ಕೋಟೆಗಳನ್ನು ನಿರ್ಮಿಸುವುದು ಹಾಗೂ ಬೀಳಿಸುವುದು, ಗಡಿಗಳನ್ನು ಹಿಗ್ಗಿಸುವುದು ಹಾಗೂ ಕುಗ್ಗಿಸುವುದು, ಎಲ್ಲ ಧರ್ಮಗಳಿಗೂ ಪ್ರೋತ್ಸಾಹ ನೀಡುವ ನಾಟಕವಾಡುವುದು ಇವೆಲ್ಲಾ ಪ್ರಭುತ್ವದ ಸಾಮಾನ್ಯ ಲಕ್ಷಣಗಳು. ಇದರರ್ಥ ಅರಸುಮನೆತನಗಳು ಅರಮನೆ ಕೇಂದ್ರಿತ ಹಾಗೂ ದೇವಾಲಯಕೇಂದ್ರಿತ ವಿಚಾರಗಳಿಗಷ್ಟೇ ಪ್ರಾಮುಖ್ಯತೆ ನೀಡಿದವು ಎನ್ನುವುದು. ಈ ಎರಡೂ ವ್ಯವಸ್ಥೆಗಳು ಪ್ರಚುರಪಡಿಸಿದ್ದು ದಾಸ್ಯರೂಪಿ ಸಂಬಂಧಗಳನ್ನು. ಹಾಗಾಗಿ ದೇವಾಲಯಗಳು ಪಾಳುಬಿದ್ದವು ಅಥವಾ ಅರಮನೆಗಳು ನಾಶಹೊಂದಿದವು ಎಂದಾಗ ಚರಿತ್ರೆ ತನ್ನ ದಿಕ್ಕನ್ನು ಬದಲಿಸಲಿಲ್ಲ ಅಥವಾ ಏನೋ

> ಚರಿತ್ರೆಯನ್ನು ವರ್ತಮಾನವನ್ನಾಗಿಸಿದಷ್ಟೂ ಅದರ ವ್ಯಾಪ್ತಿ ವಿಸ್ತರಿಸುತ್ತಾ ಹೋಗುತ್ತದೆ ಹಾಗೂ ಅದು ನಮ್ಮ ಬದುಕಿಗೆ ನೇರ ಸಂಬಂಧಪಟ್ಟಿದ್ದು ಎನ್ನುವ ಭಾವನೆ ಮೂಡುತ್ತಾ ಹೋಗುತ್ತದೆ. ಅದೇ ರೀತಿ ಚರಿತ್ರೆಯನ್ನು ಗತವನ್ನಾಗಿಸಿದಷ್ಟೂ ಅದರ ವ್ಯಾಪ್ತಿ ಕಿರಿದಾಗುತ್ತಾ ಹೋಗುತ್ತದೆ ಹಾಗೂ ನಮ್ಮ ಬದುಕಿನೊಂದಿಗಿನ ಸಂಬಂಧವನ್ನು ಕಡಿದುಕೊಳ್ಳುತ್ತದೆ. ಮಾನವನು ಬದುಕುತ್ತಿರುವ ಸಮಾಜದಲ್ಲಿ ಹಲವಾರು ಬಗೆಯ ಅನುಭವಗಳಿರುತ್ತವೆ. ಇವು ಚರಿತ್ರೆಕಾರರು ಕಟ್ಟಿಕೊಡುವ ಅನುಭವಗಳು ಅಥವಾ ನೆನಪುಗಳಲ್ಲ. ಚರಿತ್ರೆಕಾರರು ಸಮಾಜದಲ್ಲಿನ ಕೆಲವು ಅನುಭವಗಳನ್ನು ಹಾಗೂ ನೆನಪುಗಳನ್ನು ಹೆಕ್ಕಿಕೊಂಡು, ಅವುಗಳನ್ನು ತಮ್ಮ ಸಂದರ್ಭದ ಅನುಭವಗಳೊಂದಿಗೆ ತಾತ್ವಿಕ ನೆಲೆಗಟ್ಟಿನಲ್ಲಿ ಮುಖಾಮುಖಿಯನ್ನಾಗಿಸಿ ಹೊಸತನ್ನು ನಿರ್ಮಿಸುತ್ತಾರೆ. ಈ ಹೊಸತನ ಅಥವಾ ಜೀವಂತಿಕೆ ಇಲ್ಲದಿದ್ದರೆ ಚರಿತ್ರೆ ಕೇವಲ ಒಂದು ಕಥೆಯಾಗಿ ಮಾರ್ಪಡುತ್ತದೆ.

ಆಗಬಾರದ್ದು ಆಗಿಹೋಯ್ತು ಎನ್ನುವ ಕೊರಗಿನಲ್ಲಿಯೂ ಉಳಿಯಲಿಲ್ಲ. ಏಕೆಂದರೆ, ಚರಿತ್ರೆಗೆ ಅದು ಒಂದು ಅನುಭವ ಮಾತ್ರ. ಅಂಥ ನೂರಾರು ಅನುಭವಗಳ ಜೊತೆಗೇ ಚರಿತ್ರೆ ಬೆಳೆದುಬಂತು. ಆದರೂ ಈ ಬಗೆಯ ಅನುಭವಗಳು ಚರಿತ್ರೆಯುದ್ದಕ್ಕೂ ವರ್ತಮಾನವನ್ನು ಡಿಸ್ಟರ್ಬ್ ಮಾಡಿರುವುದಂತೂ ನಿಜ.

ಪ್ರಜಾಪ್ರಭುತ್ವದ ಸಂದರ್ಭದಲ್ಲೂ ಜಾತಿ ರಾಜಕಾರಣ ಹಾಗೂ ಕೋಮುಭಾವನೆಗಳು ಜನಜೀವನವನ್ನು ಡಿಸ್ಟರ್ಬ್ ಮಾಡುತ್ತಿರುವುದು ದಿನನಿತ್ಯದ ಸಂಗತಿಯಾಗಿ ಮಾರ್ಪಟ್ಟಿದೆ. ಅಯೋಧ್ಯೆ ವಿವಾದ ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಪುರಾಣ ಹಾಗೂ ಚರಿತ್ರೆಯಲ್ಲಿ ಬರುವ ನಾಯಕರುಗಳನ್ನು ವರ್ತಮಾನಕ್ಕೆ ಎಳೆದು ತಂದು ನಡೆಸುವ ಸಾಂಸ್ಕೃತಿಕ ರಾಜಕೀಯ ತುಂಬ ಅಪಾಯಕಾರಿಯಾದದ್ದು. ಇದು ವರ್ತಮಾನವನ್ನು ಛಿದ್ರಗೊಳಿಸುವ ತಂತ್ರವೇ ಹೊರತು ಕಟ್ಟುವ ಕ್ರಮವಲ್ಲ. ಟಿಪ್ಪು ರಾಷ್ಟ್ರಪ್ರೇಮಿಯೆ ಅಥವಾ ರಾಷ್ಟ್ರದ್ರೋಹಿಯೆ ಎನ್ನುವ ಪ್ರಶ್ನೆಗಳು ಹಾಗೂ ಟಿಪ್ಪು ಕನ್ನಡ ಪರ ಅಥವಾ ವಿರುದ್ಧ ಎನ್ನುವ ಚರ್ಚೆಗಳು ನಮ್ಮಲ್ಲಿ ಸಾಕಷ್ಟು ನಡೆದಿವೆ. ಧಾರ್ಮಿಕ ನೆಲೆಯ ರಾಷ್ಟ್ರೀಯವಾದ ಹಾಗೂ ಕೋಮುವಾದ ಚರಿತ್ರೆಯಲ್ಲಿ ಸ್ವತಂತ್ರವಾಗಿ ವ್ಯವಹರಿಸಲು ಆರಂಭಿಸಿದ್ದೇ ಈ ಬಗೆಯ ಚರ್ಚೆಗಳ ಹುಟ್ಟಿಗೆ ಮೂಲ ಕಾರಣ. ಟಿಪ್ಪುವಿನ ವರ್ತಮಾನವನ್ನು ಹಾಗೂ ಅಂದಿನ ಸಂದರ್ಭದ ದಕ್ಷಿಣ ಭಾರತದ ರಾಜಕಾರಣವನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾದರೆ ಈ ಬಗೆಯ ಪ್ರಶ್ನೆಗಳು ಹುಟ್ಟಿಕೊಳ್ಳಲು ಸಾಧ್ಯವೇ ಇಲ್ಲ. ನಮ್ಮ ವರ್ತಮಾನವನ್ನು ಅರ್ಥಮಾಡಿಕೊಳ್ಳುವುದು ಎಷ್ಟು ಮುಖ್ಯವೋ ಟಿಪ್ಪುವಿನ ವರ್ತಮಾನವನ್ನು ಅರ್ಥಮಾಡಿಕೊಳ್ಳುವುದೂ ಅಷ್ಟೇ ಮುಖ್ಯ. ಇಂದಿನ ಹಾಗೂ ಅಂದಿನ ಆದ್ಯತೆಗಳು ಬೇರೆಬೇರೆಯದೇ ಆಗಿದ್ದವು ಎನ್ನುವ ಸಾಮಾನ್ಯಜ್ಞಾನವಿದ್ದರೂ ಘಟಿಸಬಹುದಾದ ಹಲವಾರು ಅನಾಹುತಗಳನ್ನು ತಪ್ಪಿಸಬಹುದು. ಚರಿತ್ರೆಯ ಅನುಭವಗಳು ವರ್ತಮಾನವನ್ನು ಗಟ್ಟಿಗೊಳಿಸುವಂತಿರಬೇಕೇ ಹೊರತು ಛಿದ್ರಗೊಳಿಸುವಂತಿರಬಾರದು. ಚರಿತ್ರೆಯಲ್ಲಿ ಘಟಿಸಿದ ಕೆಲವು ಕಹಿ ಘಟನೆಗಳಿಗೆ ಇಂದಿನ ಸಮಾಜವನ್ನು ಧಾರ್ಮಿಕನೆಲೆಯಲ್ಲಿ ಹೊಣೆಗಾರನಾಗಿ ಮಾಡಿ ಒಡಕು ಮೂಡಿಸುವ ಪ್ರಯತ್ನ ಕೋಮುವಾದದ ಹೆಸರಿನಲ್ಲಿ ವ್ಯಾಪಕವಾಗಿ ನಡೆಯುತ್ತಿರುವುದು ನಮ್ಮ ಮುಂದಿರುವ ದೊಡ್ಡ ಸವಾಲು. ಕೋಮುವಾದ ಒಂದು ಮಿಥ್, ಅದು ವಸಾಹತು ಸರಕಾರದ ಸೃಷ್ಟಿ ಎನ್ನುವ ವಾಸ್ತವ ಅರಿವಾದರೆ ವರ್ತಮಾನ ನೆಮ್ಮದಿಯಿಂದಿರಬಹುದು.

ಚರಿತ್ರೆ ಹಲವಾರು ಬಗೆಯ ಸ್ಥಿತ್ಯಂತರಗಳಿಗೆ ಒಳಗಾಗುವುದು ಸಹಜ ಸಂಗತಿ. ಸ್ಥಿತ್ಯಂತರಗಳು ಅವನತಿಯ ಸಂಕೇತಗಳಾಗಬೇಕು ಎಂದೇನಿಲ್ಲ. ಇದು ಚರಿತ್ರೆಯ ವಿಶ್ಲೇಷಣೆಗೆ ಸಂಬಂಧಪಟ್ಟ ವಿಚಾರ. ಉದಾಹರಣೆಗೆ ಹೇಳುವುದಾದರೆ ಭೂ ಸುಧಾರಣಾ ಕಾಯಿದೆ ಜಾರಿಗೆ ಬಂದ ನಂತರ ಭೂ ಸಂಬಂಧಗಳಿಗೆ ಸಂಬಂಧಪಟ್ಟಂತೆ ಹಲವಾರು ರೀತಿಯ ಬದಲಾವಣೆಗಳಾದವು. ಕೆಲವರು ಭೂ ಅಧಿಕಾರವನ್ನು ಕಳೆದುಕೊಳ್ಳುವ ಹಾಗೂ ಇನ್ನು ಕೆಲವರು ಹೊಸದಾಗಿ ಭೂ ಅಧಿಕಾರವನ್ನು ಪಡೆಯುವ ಪ್ರಕ್ರಿಯೆಗಳು ನಡೆದವು. ಈ ಪ್ರಕ್ರಿಯೆಯನ್ನು ಕೃಷಿಯ ಮೂಲಕ ಕಟ್ಟಲ್ಪಟ್ಟ ವ್ಯವಸ್ಥೆಯ ಅವನತಿ ಎಂಬುದಾಗಿ ಚಿತ್ರಿಸುವುದು ತಪ್ಪು ವಿಧಾನ. ಕೃಷಿ ಅವನತಿ ಹೊಂದುವುದಿಲ್ಲ, ಬದಲಾಗಿ ಹೊಸ ಪ್ರಯೋಗಗಳಿಗೆ ಒಳಗಾಗುತ್ತಿರುತ್ತದೆ. ಉದಾಹರಣೆಗೆ, ವಸಾಹತು ಆಳ್ವಿಕೆ ಕೃಷಿಕ್ಷೇತ್ರದಲ್ಲಿ ಜಾರಿಗೆ ತಂದ ವಾಣಿಜ್ಯೀಕರಣ ನೀತಿ. ಆದರೆ ಕೃಷಿಯನ್ನು ಅಧಿಕಾರದ ಜೊತೆ ಸಮೀಕರಿಸಿ ನೋಡಿದಾಗ ಭೂ ಒಡೆತನದ ಪ್ರಶ್ನೆಗಳು ಮುಖ್ಯವಾಗುತ್ತವೆ. ಭೂ ಒಡೆತನ ನಿರಂತರ ಬದಲಾವಣೆಗಳಿಗೆ ಒಳಗಾಗುತ್ತಿತ್ತು. ಇದರರ್ಥ ಎಲ್ಲರೂ ಭೂಮಿಯ ಒಡೆಯರಾಗಲು ಸಾಧ್ಯವಿತ್ತು ಎಂದಲ್ಲ. ಕೃಷಿಯಲ್ಲಿ ಒಡೆತನದ ಪ್ರಶ್ನೆಗಿಂತ ಮುಖ್ಯವಾದದ್ದು ದುಡಿಮೆಯ ಪ್ರಶ್ನೆ. ಈ ಪ್ರಶ್ನೆ ಬಂದಾಗ ಭೂರಹಿತ ಕೃಷಿ ಕಾರ್ಮಿಕರು ಕೃಷಿ ವ್ಯವಸ್ಥೆಯೊಳಗೆ ಮಹತ್ವದ ಸ್ಥಾನವನ್ನು ಪಡೆದುಕೊಳ್ಳುತ್ತಾರೆ.

ಗ್ರಾಮಗಳನ್ನು ಭೂಮಾಲಿಕರ ಮೂಲಕ ನೋಡುವ ಹಾಗೂ ನಗರಗಳನ್ನು ಬಂಡವಾಳಶಾಹಿಗಳ ಮೂಲಕ ನೋಡುವ ವಿಧಾನ ಹೆಚ್ಚು ಚಾಲ್ತಿಯಲ್ಲಿದೆ. ಊಳಿಗಮಾನ್ಯತೆ ಹಾಗೂ ನಗರೀಕರಣ ಇವುಗಳನ್ನು ಪ್ರಭುತ್ವದ ನೆಲೆಯಿಂದಲೇ ನೋಡಿ ಚರಿತ್ರೆಯಲ್ಲಿ ಅವುಗಳ ಹುಟ್ಟು ಹಾಗೂ ಅವನತಿಯ ಅವಧಿಗಳನ್ನು ಗುರುತಿಸಲಾಗಿದೆ. ಹೀಗಾಗಿ ಗ್ರಾಮೀಣ ಹಾಗೂ ನಗರ ವ್ಯವಸ್ಥೆಗಳು ಪ್ರಭುತ್ವದ ಮೂಲಕವೇ ಗುರುತಿಸಿಕೊಳ್ಳ ಬೇಕಾದ ಅನಿವಾರ್ಯತೆಗೆ ಒಳಗಾದವು. ಕೃಷಿ ಹಾಗೂ ವ್ಯಾಪಾರ ಚಟುವಟಿಕೆಗಳಿಗೆ ಅವನತಿ ಎನ್ನುವುದು ಇರುವುದಿಲ್ಲ. ಕೆಲವು ಸಂದರ್ಭಗಳಲ್ಲಿ ತಾತ್ಕಾಲಿಕ ಹಿನ್ನಡೆ ಕಾಣಿಸಿಕೊಳ್ಳಬಹುದಷ್ಟೆ. ಆದರೆ ಅವುಗಳ ಮೂಲಕ ರೂಪುಗೊಂಡ ಅಧಿಕಾರದ ನೆಲೆಯ ಊಳಿಗಮಾನ್ಯತೆ ಹಾಗೂ ಬಂಡವಾಳಶಾಹಿಗಳು ಅಧಿಕಾರ ಹಾಗೂ ಸವಲತ್ತುಗಳನ್ನು ಪಡೆದುಕೊಳ್ಳುವ ಹಾಗೂ ಕಳೆದುಕೊಳ್ಳುವ ಸ್ಥಿತಿಗಳೆರಡನ್ನೂ ಅನುಭವಿಸಿದವು. ರಾಜ್ಯವ್ಯವಸ್ಥೆಯು ಕೃಷಿ ಹಾಗೂ ವ್ಯಾಪಾರವನ್ನು ಹೆಚ್ಚಾಗಿ ಅವಲಂಬಿಸಿದ್ದರಿಂದಾಗಿ


ಗುಲ್ಬರ್ಗದ ಕೋಟೆ

ಸಹಜವಾಗಿಯೇ ಭೂಮಾಲಿಕರು ಹಾಗೂ ಶ್ರೀಮಂತ ವರ್ತಕರು ವಿಶೇಷ ರಿಯಾಯಿತಿಗಳನ್ನು ಹಾಗೂ ಸವಲತ್ತುಗಳನ್ನು ಹೊಂದಿರುತ್ತಿದ್ದರು. ರಾಜ್ಯವ್ಯವಸ್ಥೆ ಕುಸಿದಾಗ ಪ್ರಭುತ್ವದ ಮೂಲಕ ಪಡೆದುಕೊಂಡಿದ್ದ ಅಧಿಕಾರ ಹಾಗೂ ಸವಲತ್ತುಗಳು ಕಣ್ಮರೆಯಾಗುತ್ತಿದ್ದುದು ನಿಜ. ಆದರೆ ಅಷ್ಟು ಮಾತ್ರಕ್ಕೆ ಈ ವ್ಯವಸ್ಥೆಗಳು ಕಣ್ಮರೆಯಾಗುತ್ತಿರಲಿಲ್ಲ. ಪ್ರಭುತ್ವದ ನೆರಳಿಲ್ಲದೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ಸಾಮರ್ಥ್ಯವನ್ನು ಇವು ಪಡೆದುಕೊಂಡಿದ್ದವು. ರೈತ ಹಾಗೂ ಅರಸನ ಮಧ್ಯೆ ಕೃಷಿ ಹಾಗೂ ವ್ಯಾಪಾರದ ಮಧ್ಯವರ್ತಿಗಳಾಗಿಯೂ ಗುರುತಿಸಿಕೊಂಡಿದ್ದ ಈ ವರ್ಗವು ಸಾಕಷ್ಟು ಶ್ರೀಮಂತವಾಗಿಯೇ ಇತ್ತು. ಆದರೆ ಚರಿತ್ರೆ ಕುರಿತ ಹೆಚ್ಚಿನ ಅಧ್ಯಯನಗಳು ಈ ಸೂಕ್ಷ್ಮಗಳನ್ನು ಗಮನಿಸದೆ ಅವುಗಳ ಅವನತಿಯ ಕುರಿತು ಮಾತನಾಡುತ್ತವೆ. ಮಾನವನ ಜೀವನದಲ್ಲಿ ಏರಿಳಿತಗಳಿದ್ದಂತೆ ಚರಿತ್ರೆಯೂ ಹಲವಾರು ಬಗೆಯ ಏರಿಳಿತಗಳಿಗೆ ಒಳಗಾಗುತ್ತಿರುತ್ತದೆ. ಇದರರ್ಥ ಒಂದು ವ್ಯವಸ್ಥೆ ನಾಶವಾಗಿ ಇನ್ನೊಂದು ಹುಟ್ಟಿಕೊಳ್ಳುತ್ತದೆ ಎಂದಲ್ಲ. ಅಧಿಕಾರವನ್ನು ಅನುಭವಿಸಿದ ಹಾಗೂ ಅದರಿಂದ ವಂಚಿತವಾದ ಜನವರ್ಗಗಳು ಸಾಮಾಜಿಕ ಶ್ರೇಣೀಕರಣದ ಅಂತರವನ್ನು ಯಥಾಸ್ಥಿತಿಯಲ್ಲಿ ಉಳಿಸಿಕೊಂಡೇ ಏರಿಳಿತಗಳಿಗೆ ಒಳಗಾಗುತ್ತಿದ್ದವು. ಇದು ಚರಿತ್ರೆಯನ್ನು ವರ್ತಮಾನದ ಕಥನವನ್ನಾಗಿ ಪರಿಭಾವಿಸಿಕೊಂಡಾಗ ಸಿಗುವ ಬಹುಸತ್ಯಗಳ ವಿವರಣೆ.

ಚರಿತ್ರೆಯನ್ನು ವರ್ತಮಾನವನ್ನಾಗಿಸಿದಷ್ಟೂ ಅದರ ವ್ಯಾಪ್ತಿ ವಿಸ್ತರಿಸುತ್ತಾ ಹೋಗುತ್ತದೆ ಹಾಗೂ ಅದು ನಮ್ಮ ಬದುಕಿಗೆ ನೇರ ಸಂಬಂಧಪಟ್ಟಿದ್ದು ಎನ್ನುವ ಭಾವನೆ ಮೂಡುತ್ತಾ ಹೋಗುತ್ತದೆ. ಅದೇ ರೀತಿ ಚರಿತ್ರೆಯನ್ನು ಗತವನ್ನಾಗಿಸಿದಷ್ಟೂ ಅದರ ವ್ಯಾಪ್ತಿ ಕಿರಿದಾಗುತ್ತಾ ಹೋಗುತ್ತದೆ ಹಾಗೂ ನಮ್ಮ ಬದುಕಿನೊಂದಿಗಿನ ಸಂಬಂಧವನ್ನು ಕಡಿದುಕೊಳ್ಳುತ್ತದೆ. ಮಾನವನು ಬದುಕುತ್ತಿರುವ ಸಮಾಜದಲ್ಲಿ ಹಲವಾರು ಬಗೆಯ ಅನುಭವಗಳಿರುತ್ತವೆ. ಇವು ಚರಿತ್ರಕಾರರು ಕಟ್ಟಿಕೊಡುವ ಅನುಭವಗಳು ಅಥವಾ ನೆನಪುಗಳಲ್ಲ. ಚರಿತ್ರಕಾರರು ಸಮಾಜದಲ್ಲಿನ ಕೆಲವು ಅನುಭವಗಳನ್ನು ಹಾಗೂ ನೆನಪುಗಳನ್ನು ಹೆಕ್ಕಿಕೊಂಡು, ಅವುಗಳನ್ನು ತಮ್ಮ ಸಂದರ್ಭದ ಅನುಭವಗಳೊಂದಿಗೆ ತಾತ್ವಿಕ ನೆಲೆಗಟ್ಟಿನಲ್ಲಿ ಮುಖಾಮುಖಿಯನ್ನಾಗಿಸಿ ಹೊಸತನ್ನು ನಿರ್ಮಿಸುತ್ತಾರೆ. ಈ ಹೊಸತನ ಅಥವಾ ಜೀವಂತಿಕೆ ಇಲ್ಲದಿದ್ದರೆ ಚರಿತ್ರೆ ಕೇವಲ ಒಂದು ಕಥೆಯಾಗಿ ಮಾರ್ಪಡುತ್ತದೆ. ನಮ್ಮ ಎಷ್ಟೋ ಚರಿತ್ರೆಗಳು ಸಂಶಯ, ಕುತೂಹಲ, ಹೊಸತನ ಹಾಗೂ ಜೀವಂತಿಕೆಗಳು ಇಲ್ಲದೆ ನಿರ್ಮಾಣಗೊಂಡಂಥವೇ ಆಗಿವೆ. ಈ ಕಾರಣದಿಂದಾಗಿ ಚರಿತ್ರೆ ಅಪ್ರಸ್ತುತವೇ, ಪ್ರಸ್ತುತ ಸಮಾಜಕ್ಕೆ ಅದರ ಕೊಡುಗೆ ಏನು ಹಾಗೂ ಈ ಶಿಸ್ತನ್ನು ಉಳಿಸಿಕೊಳ್ಳುವ ಅನಿವಾರ್ಯತೆ ಏನು ಎಂಬಿತ್ಯಾದಿ ಪ್ರಶ್ನೆಗಳು ಹುಟ್ಟಿಕೊಂಡಿವೆ. ಚರಿತ್ರೆ ಚಲನಶೀಲವಾದದ್ದು ಹಾಗೂ ಸೃಜನಶೀಲ ಮನಸ್ಸು ರೂಪುಗೊಳ್ಳಬೇಕಾದರೆ ಅದು ಚರಿತ್ರೆಯ ಅಧ್ಯಯನದಿಂದ ಮಾತ್ರ ಸಾಧ್ಯ ಎನ್ನುವುದನ್ನು ಸಮಾಜಕ್ಕೆ ಮನವರಿಕೆ ಮಾಡಿಕೊಡುವ ದೊಡ್ಡ ಜವಾಬ್ದಾರಿ ಚರಿತ್ರಕಾರನದ್ದು. ಅನುಭವಗಳಿಲ್ಲದೆ ಯಾವುದನ್ನೂ ಕಟ್ಟಲು ಸಾಧ್ಯವಿಲ್ಲ ಎನ್ನುವ ಮಾತಿನೊಳಗೇ ಚರಿತ್ರೆಯ ಪ್ರಾಮುಖ್ಯತೆ ಅಡಕವಾಗಿದೆ.

**ಡಾ|| ಕೆ. ಮೋಹನ್‌ಕೃಷ್ಣ ರೈ**
ಉಪನ್ಯಾಸಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

# ವೈರುಧ್ಯಗಳು




**ಈ**ಚಿನ ದಿನಗಳಲ್ಲಿ ವಿದ್ವತ್ ವಲಯದಲ್ಲಿ ವೈರುಧ್ಯ ಎಂಬ ಪರಿಭಾಷೆಯ ಬಳಕೆ ವಿಶೇಷವಾಗಿರುವುದನ್ನು ಗಮನಿಸಿರಬಹುದು. ಒಮ್ಮೆ ಪ್ರಚಲಿತವಾಗುವ ಇಂಥ ಪರಿಭಾಷೆಗಳು, ತಿಳಿದಿರಲಿ ತಿಳಿಯದಿರಲಿ ಎಲ್ಲರ ಬಾಯಲ್ಲೂ ಅಡ್ಡಾಡುತ್ತವೆ. ಇಂಥವನ್ನು ಬಳಸುವುದು ಪ್ರತಿಷ್ಠೆಯ ವಿಷಯುವಾಗಿ ಬರುವುದುಂಟು. ಪರಿಪ್ರೇಕ್ಷ್ಯ ಎಂಬ ಪದ ಇಂಥ ಇನ್ನೊಂದು ನಿದರ್ಶನ.

'ಕಾಂಟ್ರಡಿಕ್ಷನ್'– ವೈರುಧ್ಯ ಎಂಬುದು ಎಡವಾದ, ಬಲವಾದಗಳನ್ನು ಮೀರಿ ಹೀಗೆ ಬಳಕೆಯಲ್ಲಿದೆಯಾದರೂ, ಎಡವಾದದಲ್ಲಿ ಇದರ ಸ್ಪಷ್ಟ ಅರ್ಥ ತಿಳಿದುಬರುತ್ತದೆ. ಅದರ ಮಹತ್ವವೇನೆಂದು ಅಲ್ಲಿಯ ವಿವರಗಳನ್ನು ನೋಡಿದಾಗ ಮಾತ್ರ ಗೊತ್ತಾಗುತ್ತದೆ.

ಮಾನವ (ಸಮಾಜ), ಪ್ರಕೃತಿ, ವಿಶ್ವ ಇವುಗಳ ಸಮಗ್ರ ಗ್ರಹಿಕೆಯಿಂದ ಮಾತ್ರ ಅಖಂಡವಾದುದರ, ಇಡಿಯಾದುದರ ಒಂದು ಚಿತ್ರ ಮೂಡಿಬರುತ್ತದೆ. ವಸ್ತುನಿಷ್ಠ ದೃಷ್ಟಿಕೋನ ಬೆಳೆಯಬೇಕಾದರೆ ಈ ತಿಳಿವು ಅನಿವಾರ್ಯ. ವ್ಯಕ್ತಿನಿಷ್ಠತೆ ಯಾವಾಗಲೂ ಸೀಮಿತ, ದುಃಖಕರ, ಸಂಕುಚಿತ. ಸಮಾಜದಲ್ಲಿ 'ನನ್ನ' ಇರುವಿನ ಪ್ರಾಮುಖ್ಯತೆ, ಜಗತ್ತಿನ ಮತ್ತು ಸಮಾಜದ ಚಲನೆಯ ನಿಯಮ ಇವೆಲ್ಲ ವಸ್ತುನಿಷ್ಠ ದೃಷ್ಟಿಕೋನದಿಂದ ಮಾತ್ರ ಸಾಧ್ಯ.

ಬುದ್ಧ ಹೇಳುವಂತೆ ಈ ವಿಶ್ವದಲ್ಲಿ ಯಾವುದೂ ಸ್ಥಗಿತವಿಲ್ಲ; ಸ್ಥಿರವಿಲ್ಲ. ಎಲ್ಲವೂ ನಿರಂತರ ಚಲಿಸುತ್ತಿದೆ, ಬದಲುತ್ತಿದೆ. ಇಲ್ಲಿರುವ ಸ್ವಾರಸ್ಯವೆಂದರೆ ಈ 'ಚಲನೆಗೆ', ಬದಲಾವಣೆಗೆ ಕಾರಣವೇ 'ವೈರುಧ್ಯ' ಎಂಬುದು. ಇವನ್ನೆಲ್ಲ ಬಿಡಿಬಿಡಿಯಾಗಿ ಅರ್ಥ ಮಾಡಿಕೊಳ್ಳಲು ಒಂದು ಸಂಯೋಜಕ ದೃಷ್ಟಿ ಬೇಕು.

ಪರಸ್ಪರ ವಿರುದ್ಧವಾಗಿರುವ ಅಂಶಗಳಿಗೆ, ಸಂಗತಿಗಳಿಗೆ, ವಿಷಯಗಳಿಗೆ 'ವೈರುಧ್ಯ' ಎನ್ನುತ್ತೇವೆ. ಉದಾಹರಣೆಗೆ, ಸುಖ-ದುಃಖ, ಮೇಲೆ-ಕೆಳಗೆ, ಈ ವಿಶ್ವ, ನಿಸರ್ಗ, ಮಾನವ ಎಲ್ಲದರಲ್ಲೂ ವೈರುಧ್ಯಗಳಿವೆ. ಅಂದರೆ ವೈರುಧ್ಯಗಳಿಲ್ಲದ ಒಂದು ಸಂಗತಿಯೂ ಇರಲಾರದು. ಅಣುವಿನಲ್ಲಿ ಪ್ಲಸ್-ಮೈನಸ್ ಇದೆಯಷ್ಟೇ! ಹಗಲು-ರಾತ್ರಿ; ಭೌತವಾದ-ಅಧ್ಯಾತ್ಮವಾದ; ಎಡ-ಬಲ; ಇತ್ಯಾತ್ಮಕ-ನೇತ್ಯಾತ್ಮಕ; ಈಚಿನ ನಮ್ಮ ಸಮಾಜದಲ್ಲಿ ಸ್ವಾತಂತ್ರ್ಯಕ್ಕಾಗಿ ನಡೆದ ಭಾರತೀಯರ ಹೋರಾಟದಲ್ಲಿ ಭಾರತೀಯರು-ಬ್ರಿಟಿಷರು; ರಶಿಯ-ಚೀನದ ಕ್ರಾಂತಿಯ ಸಂದರ್ಭಗಳಲ್ಲಾದರೆ ಬಂಡವಾಳಗಾರ-ಭೂಮಾಲಿಕರು-ಕಾರ್ಮಿಕ, ಕೂಲಿಕಾರ, ರೈತ, ಮಹಿಳೆ; ಮುಂತಾಗಿ.

ವೈರುಧ್ಯಗಳ ಗುಣ ಲಕ್ಷಣವೆಂದರೆ ಒಂದನ್ನು ಬಿಟ್ಟು ಇನ್ನೊಂದಿರಲು ಸಾಧ್ಯವೇ ಇಲ್ಲ ಎಂಬ ಕಟು ವಾಸ್ತವ. 'ಸುಖ'ವನ್ನು ಹೊರತುಪಡಿಸಿ 'ದುಃಖ'ದ ಅನುಭವ ಅಸಾಧ್ಯ. ಇದೇ ರೀತಿ ದುಃಖದ ಅನುಭವ 'ಸುಖ'ದಿಂದ ಮಾತ್ರ ಸಾಧ್ಯ. ಹಗಲಿಲ್ಲದೇ ರಾತ್ರಿಯ ಕಲ್ಪನೆಯೇ ಬರಲಾರದು. ಎಡ ಇಲ್ಲದಿದ್ದರೆ ಬಲ, ಬಲ ಇಲ್ಲದಿದ್ದರೆ ಎಡ ಇರುತ್ತಿರಲಿಲ್ಲ, ಇದೇ ರೀತಿ ಪ್ಲಸ್-ಮೈನಸ್, ಅಂದರೆ ಪರಸ್ಪರ ವಿರೋಧಿ ಸಂಗತಿಗಳು ಸಾಪೇಕ್ಷ, ಪರಸ್ಪರಾವಲಂಬಿ. ಇದಕ್ಕೆ ಅಂತರ್ ವೈರುಧ್ಯ ಎನ್ನುವುದು.

ಇವು 'ನಿಕಟ'ವಾಗಿರುವುದರಿಂದ ಸಂಘರ್ಷ ಸ್ಥಿತಿಯಲ್ಲಿರುತ್ತವೆ. ಕೆಲವರು ವೈರುಧ್ಯಗಳನ್ನು ಗುರುತಿಸುತ್ತಾರೆ. ಆದರೆ ಸಂಘರ್ಷವನ್ನು ಒಪ್ಪುವುದಿಲ್ಲ. ಉದಾಹರಣೆಗೆ, ಗಾಂಧೀಜಿ, ಲೋಹಿಯ. ಪ್ರಧಾನ ವರ್ಗ-ವೈರುಧ್ಯಗಳನ್ನು ಗುರುತಿಸುವ ಇವರು ವರ್ಗ-ಸಂಘರ್ಷವನ್ನು ಒಪ್ಪಲಾರರು. ಸಂಘರ್ಷವಿಲ್ಲದಿದ್ದರೆ ಚಲನೆಯೇ ಇಲ್ಲ, ಬಲಾವಣೆಯೇ ಇಲ್ಲ, ಇದೇ ಇದರ ಗುಟ್ಟು. ಒಮ್ಮೊಮ್ಮೆ ಸಂಘರ್ಷವನ್ನು ಗುರುತಿಸಿದರೂ ಪ್ರಧಾನ ವೈರುಧ್ಯಗಳ ಮಧ್ಯದ ಸಂಘರ್ಷವನ್ನಲ್ಲ; ಅಪ್ರಧಾನ ವೈರುಧ್ಯಗಳ ನಡುವಿನ ಸಂಘರ್ಷವನ್ನು ಗುರುತಿಸಿದವರು ಸಮಾಜ ಬದಲಾವಣೆಯ ನಿಯಮವನ್ನು ವೈಜ್ಞಾನಿಕವಾಗಿ ಅರ್ಥ ಮಾಡಿಕೊಂಡಿರಲಾರರು.

'ಜಾತಿ ಸಂಘರ್ಷ' ಎಂಬುದು ಒಟ್ಟು ಭಾರತೀಯ ಸಮಾಜದ ಪ್ರಗತಿಪರ ಚಲನಶೀಲತೆಯ ದೃಷ್ಟಿಯಿಂದ ಅಪ್ರಧಾನ ಎಂಬುದನ್ನು ಮರೆಯಬಾರದು. 'ಕೋಮು ಗಲಭೆ'ಯನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ಏಕೆಂದರೆ ಬಲಪಂಥೀಯ ಪ್ರತಿಗಾಮಿ ಶಕ್ತಿಗಳು, (ಹಿಂದುಗಳಲ್ಲಿರಲಿ, ಮುಸ್ಲಿಂರಲ್ಲಿರಲಿ) ಇದನ್ನು 'ಜನಪ್ರಿಯ'ಗೊಳಿಸುವ ಪರಿ ಭಯ ಹುಟ್ಟಿಸುತ್ತದೆ.

ಇದನ್ನು ಅಸ್ತ್ರವನ್ನಾಗಿ ಮಾಡಿಕೊಂಡು ಸಮ್ರಾಜವನ್ನು ಮುಂದೆ ಮುಂದಲ್ಲ, ಹಿಂದು ಹಿಂದಕ್ಕೆ 'ರಾಮರಾಜ್ಯ'ಕ್ಕೆ ಕೊಂಡೊಯ್ಯುವ ಪರಿ ಆತಂಕಕಾರಿ.

ಪ್ರತಿಗಾಮಿತ್ವ ಎಂದರೆ ಇದೇ – ಹಿಂದು ಹಿಂದಕ್ಕೆ ಎಳೆದೊಯ್ಯುವ ಯತ್ನ, ಹಿಂದೊಮ್ಮೆ ಎಂದೋ 'ರಾಮ ರಾಜ್ಯವಿತ್ತು'; ಖುರಾನ್, ಬೈಬಲ್‌ಗಳಲ್ಲಿ ಎಲ್ಲ ಸಮಸ್ಯೆಗಳಿಗೂ ಪರಿಹಾರ ಇವೆ ಎಂಬ ಪ್ರತಿವಾದಗಳು. 'ಪ್ರಗತಿಪರ' ಎಂದರೆ ಮುಂದು ದೃಷ್ಟಿ ಇಟ್ಟು ಚಲಿಸುವುದು, ಇದಕ್ಕೆ ವಸ್ತುನಿಷ್ಠತೆ, ವೈಜ್ಞಾನಿಕ ತಿಳುವಳಿಕೆ ಬೇಕು.

ಚಲನೆ ಎಂಬುದು ಸಹಜ ಸ್ವಭಾವ. ವೈರುಧ್ಯಗಳಿಲ್ಲದೆ ಚಲನೆ ಇಲ್ಲ, ಸಂಘರ್ಷವಿಲ್ಲದೆ ಚಲನೆ ಅಸಾಧ್ಯ, ಚಲನೆ ಎಂದರೇ ಪ್ರಗತಿಪರ ಪರಿವರ್ತನೆ.

ಬದಲಾವಣೆ ಮಾಯ ಮಂತ್ರದಿಂದ ನಿಯಂತ್ರಿತವಲ್ಲ, ಸಮಾಜದಲ್ಲಿ ಬದಲಾವಣೆ ಸರಳ ರೂಪದಿಂದ ಸುರುವಾಗಿ ಸಂಕೀರ್ಣ ರೂಪಕ್ಕೆ ಬೆಳೆಯುತ್ತದೆ. ಒಂದು ಹಂತದ ಬೆಳವಣಿಗೆಯಲ್ಲಿ ಪರಿಮಾಣಾತ್ಮಕ ಬದಲಾವಣೆ ಗುಣಾತ್ಮಕ ಬದಲಾವಣೆಗೆ ಕಾರಣವಾಗುತ್ತದೆ.

ಸ್ವಾತಂತ್ರ್ಯಕ್ಕಾಗಿ ನಡೆದ ಚಳುವಳಿಯ ಹುಟ್ಟು ಬೆಳವಣಿಗೆಯ 'ಗತಿ'ಯನ್ನು, ಸ್ವಭಾವವನ್ನು, ನಿದರ್ಶನವಾಗಿ ಕೊಡಬಹುದು. ಚಳುವಳಿಯ ಗಾತ್ರದಲ್ಲಿ ಸಾಕಷ್ಟು ಬೆಳವಣಿಗೆಯಾಗಿ ಒಂದು ಹಂತದಲ್ಲಿ ಅಂದರೆ ೧೯೪೭ರಲ್ಲಿ, ಅದು ಗುಣಾತ್ಮಕವಾದ ಬದಲಾವಣೆಗೆ ಕಾರಣವಾಯಿತು.

ಪ್ರಗತಿಶೀಲ ನವೀನತೆಯ ಇನ್ನೊಂದು ಮುಖ್ಯ ಲಕ್ಷಣವೆಂದರೆ ಇತ್ಯಾತ್ಮಕವಾದುದನ್ನು ರಕ್ಷಿಸಿಕೊಂಡು, ನೇತ್ಯಾತ್ಮಕವಾದದನ್ನು ನಿರಾಕರಿಸುತ್ತ ತ್ಯಜಿಸುತ್ತಾ ಬರುವುದು. ಪರಂಪರೆಯನ್ನು ಬರಗೂರರಂಥ ಬಂಡಾಯದ ಮಿತ್ರರು ಈ ಹಿನ್ನೆಲೆಯಲ್ಲಿ ಅರ್ಥೈಸಿರುವುದನ್ನು ಇಲ್ಲಿ ಸ್ಮರಿಸಬಹುದು.

'ಹೊಸದರ ಸೃಷ್ಟಿ', ಹಳೆಯದರಲ್ಲಿರುವ ಇತ್ಯಾತ್ಮಕವಾದುದರ 'ಉಳಿಕೆ'ಯನ್ನು ಅವಲಂಬಿಸಿರುತ್ತದೆಂಬುದನ್ನು ಮರೆಯಬಾರದು.

ಬುದುಂಗನೆ ಯಾವುದೇ 'ಒಂದು', 'ಹೊಸದಾಗಿ' ಸೃಷ್ಟಿಯಾಗಲಾರದು. ಹೊಸದರ ಸೃಷ್ಟಿಗೆ ಪರಂಪರೆಯ ಕಾರಣವನ್ನು ಅರಿಯುವುದು ಇದು. ಆದರೆ ಪರಂಪರೆಯಲ್ಲೇ ಎಲ್ಲ ಹೊಸದು ಇಲ್ಲ.

ಮೇಲೆ ಚರ್ಚಿಸಿದ ಸಂಗತಿಗಳನ್ನು ಮೂರು ನಿಯಮಗಳಲ್ಲಿ ಅರ್ಥಪಡಿಸಿದ್ದಾರೆ.

೧. ಪರಿಣಾಮಾತ್ಮಕ ಪರಿವರ್ತನೆ ಗುಣಾತ್ಮಕ ಪರಿವರ್ತನೆಗೆ ಕಾರಣ
೨. ವೈರುಧ್ಯಗಳ ನಿಕಟತೆ ಮತ್ತು ಸಂಘರ್ಷ
೩. ನಿಷೇಧದ ನಿಷೇಧ.

ಈ ಮೂರನ್ನು ದ್ವಂದ್ವಮಾನಾತ್ಮಕ ನಿಯಮಗಳೆನ್ನುತ್ತಾರೆ (ಡೈಲೆಕ್ಟಿಕಲ್). ಇದು ಜಗತ್ತನ್ನು ವೈಜ್ಞಾನಿಕವಾಗಿ ಅಂದರೆ ಭೌತಿಕವಾದಿಯಾಗಿ ಗ್ರಹಿಸುವ ವಸ್ತುನಿಷ್ಠ ಕಣ್ನೋಟ.


**ಎಸ್. ಎಸ್. ಹಿರೇಮಠ**
ಪ್ರಾಂಶುಪಾಲರು, ಕೊಟ್ಟೂರೇಶ್ವರ ಕಾಲೇಜು, ಕೊಟ್ಟೂರು, ಬಳ್ಳಾರಿ ಜಿಲ್ಲೆ


---

**ಕಣ್ಣು**

ಕಣ್ಣಿನ ಬ್ಯಾಂಕಂತೆ
ಚ(ಕ)ರ್ಮ ಚಕ್ಷುಗಳ
ಬ್ಯಾಂಕು!
ಎಲ್ಲಿದೆ ಒಳಗಣ್ಣುಗಳ ಬ್ಯಾಂಕು?

**ಸುರುಳಿ**

ಕೆಲವೊಮ್ಮೆ ಸರಳ
ಎಂದುಕೊಳ್ಳುತ್ತೇವೆ;
ಸು(ರು)ಳಿಯಾಗಿ
ಪರಿಣಮಿಸುತ್ತದೆ!


ಒ.ಪಿ.ಕೆ
ಮೈಸೂರು






# ನಿಮ್ಮ ವ್ಯಕ್ತಿ ವಿಕಸನಕ್ಕೆ ನವಕರ್ನಾಟಕ ಪ್ರಕಾಶನದ ವಿನೂತನ ಕೊಡುಗೆ






ವ್ಯಕ್ತಿ ವಿಕಸನ ಮಾಲೆ



ಸಂಪಾದಕರು
ಡಾ|| ಸಿ. ಆರ್. ಚಂದ್ರಶೇಖರ್

ಆಯಾಯ ಕ್ಷೇತ್ರಗಳಲ್ಲಿ ಅನುಭವಿಗಳಾದ ಸಮರ್ಥ ಲೇಖಕರು ರಚಿಸಿರುವ 2ನೆಯ ಕಂತಿನ 25 ಅತ್ಯುತ್ತಮ ಕೃತಿಗಳು ಖ್ಯಾತ ಚಿತ್ರಕಾರರ ಸಂದರ್ಭೋಚಿತ ಚಿತ್ರಗಳ ಸಹಿತ. ತಲಾ ರೂ. 40 ಬೆಲೆಯ ಒಟ್ಟು ರೂ. 1000 ಮೌಲ್ಯದ ಪುಸ್ತಕಗಳು.

ಇಂದೇ ಬೇಡಿಕೆ ಸಲ್ಲಿಸಿ



















'ಹೊಸತು' ಮೂರು ವರ್ಷದ ಚಂದಾದಾರರಿಗೆ ರಿಯಾಯಿತಿ ಬೆಲೆ ರೂ. 800 + ಅಂಚೆವೆಚ್ಚ ರೂ. 50



## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ನಂ. 11, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ : 5159, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - 560 001

✆ : 22203580, 30578022 e-mail: navakarnataka@vsnl.com web : www.navakarnatakabooks.com

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Chief Editor : Dr. G. Ramakrishna

